ಶಾಂತಿನಾಥ ಕವಿಯ

# ಸುಕುಮಾರ ಚರಿತಂ



ಸಂಪಾದಕರು :
ಟಿ. ಎಸ್. ಶಾಮರಾವ್
ಡಿ. ಎಲ್. ನರಸಿಂಹಾಚಾರ್





ಪ್ರಕಾಶಕರು :
ಕರ್ಣಾಟಕ ಸಂಘ
ಶಿವಮೊಗ್ಗ

# ಮುನ್ನುಡಿ

ಪ್ರಾಚೀನ ಉದ್ಗ್ರಂಥಗಳ ಪ್ರಕಟಣೆ ಮತ್ತು ಪ್ರಚಾರ ಶಿವಮೊಗ್ಗೆಯ ಕರ್ನಾಟಕ ಸಂಘದ ಧ್ಯೇಯಗಳಲ್ಲಿ ಒಂದು. ಈ ಮೊದಲೇ ರಾಘವಾಂಕ ಕವಿಯ "ಸಿದ್ಧರಾಮ ಚಾರಿತ್ರ" ಸಂಘದಿಂದ ಪ್ರಕಟವಾಗಿದೆ. ಈಗ ಶಾಂತಿನಾಥನ "ಸುಕುಮಾರ ಚರಿತೆ" ಯನ್ನು ಕನ್ನಡಿಗರಲ್ಲಿ ಅರ್ಪಿಸಲಾಗುತ್ತಿದೆ. ೧೯೪೮ರಲ್ಲಿ ನಾನು ಸಂಘದ ಕಾರ್ಯದರ್ಶಿಯಾಗಿದ್ದಾಗ ಈ ಕೆಲಸಕ್ಕೆ ಕೈಹಾಕಿದೆನೆಂದೋ ಏನೋ ಪ್ರಕಾಶಕರ ಮುನ್ನುಡಿಯನ್ನು ಬರೆಯಲು ಸಂಘದ ಕಾರ್ಯ ಸಮಿತಿಯವರು ನನಗೇ ಅಪ್ಪಣೆ ಮಾಡಿದಾರೆ. ಮುದ್ರಣದ ವೆಚ್ಚಕ್ಕಾಗಿ ಶಿವಮೊಗ್ಗೆಯ ಪ್ರಸಿದ್ಧ ವ್ಯಾಪಾರಿಗಳೂ, ಉದಾರಿಗಳೂ ಆದ ಶ್ರೀ ಶಾಂತಪ್ಪ ದುಂಡಪ್ಪ ದಿನಕರ್ ಅವರು ೫೦೦ ರೂಪಾಯಿಗಳನ್ನು ದಾನರೂಪವಾಗಿ ಸಂಘಕ್ಕೆ ಕೊಟ್ಟಿದ್ದಾರೆ. ನನ್ನ ಮಾನ್ಯ ಮಿತ್ರರೂ ಉತ್ತಮ ಸಾಹಿತಿಗಳೂ ಆದ ಶ್ರೀ ಡಿ. ಎಲ್. ನರಸಿಂಹಾಚಾರ್ಯರೂ, ಟಿ. ಎಸ್. ಶಾಮರಾಯರೂ ಶ್ರಮವಹಿಸಿ ಗ್ರಂಥವನ್ನು ಪರಿಶೋಧಿಸಿ ಮುದ್ರಣ ಮಾಡಿಸುವ ಕಾರ್ಯವನ್ನು ವಹಿಸಿಕೊಂಡು ಉಪಕಾರ ಮಾಡಿದಾರೆ. ಮೂಡಬಿದ್ರೆಯ ಪಂಡಿತ ಶ್ರೀ ಕೆ. ಭುಜಬಲಿ ಶಾಸ್ತ್ರಿಗಳಲ್ಲಿನ ಓಲೆಗರಿಯ ಪ್ರತಿ ಈ ಗ್ರಂಥಕ್ಕೆ ಆಧಾರ. ಶ್ರೀ ಶಾಸ್ತ್ರಿಗಳವರಿಗೆ ಸಂಘವು ಚಿರ ಋಣಿಯಾಗಿದೆ. ಅದನ್ನು ದೊರಕಿಸಿಕೊಂಡು, ಹೋಲಿಸಿ ಮುದ್ರಣಕ್ಕೆ ಹಸ್ತಪ್ರತಿ ಸಿದ್ಧಗೊಳಿಸುವುದರಲ್ಲಿ ಸ್ವಲ್ಪ ಕಾಲ ವಿಳಂಬವಾಯಿತು. ನನ್ನ ನಿಷ್ಠುರದ ನುಡಿಗಳಿಗಾಗಿ ಟಿ. ಎಸ್. ಎಸ್., ಡಿ. ಎಲ್. ಎನ್. ಅವರೂ, ಕಾಲವಿಳಂಬವಾದುದಕ್ಕೆ ಏಳು ವರ್ಷಗಳ ಕೆಳಗೇ ಹಣ ಸಹಾಯಮಾಡಿದ ಶ್ರೀ ಶಾಂತಪ್ಪನವರೂ, ಮಹಾಜನರೂ ಕ್ಷಮಿಸುವರಾಗಿ ನಂಬಿದ್ದೇನೆ.

೧೦೬೦ರಲ್ಲಿ ರಚಿತವಾದ ಸುಕುಮಾರ ಚರಿತೆ ಜೈನ ಸಾಹಿತ್ಯದಲ್ಲಿ ಪ್ರಸಿದ್ಧವಾದ ವಿರಕ್ತ ಸಾಹಿತ್ಯ ಗ್ರಂಥ (ascetic poetry). ಕವಿ ಶಾಂತಿನಾಥ ಶಿವಮೊಗ್ಗ ಜಿಲ್ಲೆಯವನು. ಅವನ ಪೋಷಕ ಲಕ್ಷ್ಮಣರಾಜ ಬನವಸೆಯ ಮಂಡಲಾಧಿಪತಿ. ಶಾಂತಿನಾಥನಿಗೆ ಸಂಬಂಧಪಟ್ಟ ಶಾಸನ

ಗಳೆಲ್ಲ ಶಿಕಾರಿಪುರದಲ್ಲಿವೆ ನಮ್ಮ ಜಿಲ್ಲೆಯ ಪ್ರಸಿದ್ಧ ಕವಿಯ ಒಂದು ಪ್ರಾಚೀನ ಗ್ರಂಥವನ್ನು ಬೆಳಕಿಗೆ ತಂದು ಮಹಾಜನರ ಕೈಯಲ್ಲಿಡಲು ಶಿವಮೊಗ್ಗೆಯ ಸಂಘಕ್ಕೆ ಒಂದು ದೊಡ್ಡ ಹೆಮ್ಮೆ. ಅಂದವಾಗಿ ಮುದ್ರಣ ಮಾಡಿಕೊಟ್ಟ ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸಿನ ಮಾಲಿಕರಾದ ಶ್ರೀ ಜಿ. ಎಚ್. ರಾಮರಾಯರಿಗೆ ಸಂಘವು ಚಿರಋಣಿ.

**ಹಸೂಡಿ ವೆಂಕಟಶಾಸ್ತ್ರಿ**
**ಎಸ್. ವಿ. ಕೃಷ್ಣಮೂರ್ತಿ ರಾವ್**

# ವಿಷಯಾನುಕ್ರಮಣಿಕೆ

# ೧. ಕವಿ

‘ಸುಕುಮಾರ ಚರಿತಂ’ ಎಂಬ ಈ ಕಾವ್ಯವನ್ನು ಬರೆದಿರುವವನು ಶಾಂತಿ ಾಥನೆಂಬ ಕವಿ. ಈ ಗ್ರಂಥದ ಮೊದಲನೆಯ ಆಶ್ವಾಸದಲ್ಲಿಯೂ ಕೊನೆಯ ಶ್ವಾಸದ ತುದಿಯಲ್ಲಿಯೂ ಕವಿ ತನಗೆ ಸಂಬಂಧಿಸಿದ ಕೆಲವು ಸಂಗತಿಗಳನ್ನು ಳಿಸಿದ್ದಾನೆ. ಗ್ರಂಥದ ಮುಕ್ತಾಯದ ಭಾಗ ನಮಗೆ ದೊರೆತ ಹಸ್ತಪ್ರತಿಗಳಲ್ಲಿ ಷ್ಟವಾಗಿರುವುದರಿಂದ ಅಲ್ಲಿ ಹೇಳಿರಬಹುದಾದ ಕವಿಯ ಸ್ವಕೀಯ ವೃತ್ತಾಂತ ೊತ್ತಾಗುವ ಹಾಗಿಲ್ಲ. ಈಗ ನಮಗೆ ದೊರೆತಿರುವಷ್ಟು ಭಾಗದ ಆಧಾರದಮೇಲೆ ಕವಿಯ ಚರಿತ್ರೆಯನ್ನು ಇಲ್ಲಿ ಕೊಟ್ಟಿದೆ. ಅಲ್ಲದೆ ಶಿಕಾರಿಪುರ ೧೩೬ನೆಯ ಾಸನದಿಂದಲೂ ಕವಿಯ ಕಾಲ, ಅವನ ಪೋಷಕ, ಅವನ ಕೃತಿ—ಈ ಅಂಶ ಳನ್ನು ಕುರಿತು ಕೆಲವು ಸಂಗತಿಗಳು ತಿಳಿದುಬರುತ್ತವೆ. ಕವಿಯ ಚರಿತ್ರೆ ಯನ್ನು ತಿಳಿಯಲು ಇರುವ ಆಧಾರಗಳು ಈ ಎರಡು.

ಶಾಂತಿನಾಥನ ತಂದೆ ‘ಜೈನಭಾಸ್ವತ್‌ಕ್ರಮಯುಗಲ ಸರೋಜಾತಭೃಂಗ’ ನೂ ‘ವಿಶಿಷ್ಟೇಷ್ಟ ನಿಧಾನ’ನೂ ‘ಸತ್ಯರತ್ನಾಕರ’ನೂ ಆಗಿದ್ದ ಗೋವಿಂದರಾಜ; ರು ವರ್ಧಮಾನ ವ್ರತಿಪತಿ; ಅವನ ತಮ್ಮನು ಅವನ ಕಾವ್ಯರಚನೆಗೆ ಅನುಬಲ ಾಗಿದ್ದನು. ಮೇಲ್ಕಂಡ ಶಾಸನದಲ್ಲಿ ಅವನ ತಮ್ಮನ ಹೆಸರು ‘ವಾಗ್ಭೂಷಣ’ ಾದ ರೇವಣನೆಂದೂ ಪೋಷಕ ಲಕ್ಷ್ಮಕ್ಷ್ಮಾಪಾಲನೆಂದೂ ಹಿರಿಯಣ್ಣ ಕರ್ಣ ಾರ್ಯನೆಂದೂ ಹೇಳಿದೆ. ಆರ್ಹಂತ್ಯ ಧರ್ಮವು ತನಗೆ ಆಶ್ರಯವೆಂದೂ ರತ್ನ ಯವೇ ತನಗೆ ಅಲಂಕಾರವೆಂದೂ ತನ್ನ ಸ್ವಾಮಿ ಜಿನಪತಿಯೆಂದೂ ಶಾಂತಿ ಾಥನು ತನ್ನ ಜೈನಮತಾನುರಾಗವನ್ನು ವ್ಯಕ್ತಪಡಿಸಿದ್ದಾನೆ.

ಸಹಜಕವಿ, ಚತುರಕವಿ, ಸರಸ್ವತೀ ಮುಖಮುಕುರ, ಜಿನಮತಾಂಭೋಜಿ ನೀರಾಜಹಂಸ ಮುಂತಾದ ಹಲವು ಬಿರುದುಗಳು ತನಗಿದ್ದುವೆಂದು ಕವಿಯ ಾತು. ಮೇಲೆ ಹೇಳಿದ ಶಿಕಾರಿಪುರದ ಶಾಸನದಲ್ಲಿ “ಸುಕರ ರಸಭಾವದಿಂ ರ್ಣಕದಿಂ ತತ್ವಾರ್ಥನಿಚಯದಿಂ ಸೂಕ್ತಮೆನಲ್ ಸುಕುಮಾರ ಚರಿತಮಂ ಳ್ದ ಕವೀಂದ್ರಾಗ್ರಣಿ” ಎಂದು ಶಾಂತಿನಾಥನು ತಿಳಿಸಿದ್ದಾನೆ. ತನ್ನ ಕಾವ್ಯ ಲ್ಲಿ ಕಾವ್ಯ ಧರ್ಮವನ್ನೂ ಜಿನಧರ್ಮವನ್ನೂ ತಿಳಿದುಕೊಳ್ಳಬಹುದೆಂಬ ಅಂಶ ನ್ನು ಪಂಪನು ಹೇಳಿಕೊಂಡಿರುವಂತೆ ತಾನೂ ಹೇಳಿಕೊಂಡಿದ್ದಾನೆ. ತನ್ನ ಕಾವ್ಯ

ಭವ್ಯನಿವಹಕ್ಕೆ ಚಮತ್ಕೃತಿಯೆಂದೂ ಭಾರತಿಗೆ ಮಾಡಿದ ಅಲಂಕಾರವೆಂದೂ ಮೆಚ್ಚುವವರಿಗೆ ಮಾಡಿದ ಪುಣ್ಯಾಕೃತಿಯೆಂದೂ ಭಾವಿಸುವವರಿಗೆ ಬೋಧಪ್ರದವೆಂದೂ ಕವಿಯ ನಂಬಿಕೆ. ವಸ್ತುತಕವಿಗಳು ತನ್ನನ್ನು ಹೊಗಳಿ 'ಬಂಧುರೋಕ್ತಿಗಳಿಂ ನೀನಭಿವರ್ಣಿಸು' ಎಂದು ಹೇಳಿದ್ದರಿಂದ ಕವಿ ತನ್ನ ಕಾವ್ಯವನ್ನು ಮಾಡಿದನು.

ತಾರ್ಕಿಕ ಚೂಡಾಮಣಿಯೂ ಜಿನಶಾಸನದೀಪಕನೂ ಆದ ಅಕಂಳದೇವ, ತರ್ಕಶಾಸ್ತ್ರದ ಪರಿಣತಿಯಲ್ಲಿ ಪ್ರಸಿದ್ಧನಾಗಿ ಚಕ್ರವರ್ತಿಯ ಸಭೆಯಲ್ಲಿ ಹೆಸರುಗೊಂಡ ವಾದಿರಾಜ, ತತ್ವದಲ್ಲಿಯೂ ಕವಿತ್ವದಲ್ಲಿಯೂ ಸಮಾನ ಪಾಂಡಿತ್ಯವುಳ್ಳ ಧನಂಜಯ—ಇವರು ಮೊದಲು ಸ್ತುತರಾಗಿರುವ ಪೂರ್ವಕವಿಗಳು[1]. ಇವರು ಮೂವರೂ ಸಂಸ್ಕೃತದಲ್ಲಿ ಬರೆದಿರುವ ಪ್ರಸಿದ್ಧರಾದ ಜೈನ ಕವಿಗಳು. ಅನಂತರ 'ಆದಿ ಪುರಾಣ'ವನ್ನು ಬರೆದ ಪಂಪನನ್ನೂ 'ಶಾಂತಿಜಿನೇಶ್ವರ ಪುರಾಣ'ವನ್ನು ಬರೆದ ಪೊನ್ನನನ್ನೂ 'ಅಜಿತಪುರಾಣ'ವನ್ನು ಬರೆದ ರನ್ನನನ್ನೂ ಶಾಂತಿನಾಥನು ಬೇರೆ ಬೇರೆ ಪದ್ಯಗಳಲ್ಲಿ ಸ್ತೋತ್ರಮಾಡಿ ಆಬಳಿಕಣ ಪದ್ಯದಲ್ಲಿ ಆ ಮೂವರನ್ನೂ ಒಟ್ಟಿಗೇ ಹೊಗಳಿದ್ದಾನೆ. ಕನ್ನಡ ಕವಿಗಳಲ್ಲಿ ರತ್ನತ್ರಯವೆಂದು ಹೆಸರಾಂತ ಈ ಮೂವರು ಕವಿಗಳ ಕಾಲದಿಂದೀಚೆಗೆ ಶಾಂತಿನಾಥನು ಇದ್ದಿರಬೇಕೆಂಬ ಅಂಶ ಸ್ಪಷ್ಟವಾಗಿದೆ ಈ ಕವಿಗಳ ಪ್ರಭಾವ 'ಸುಕುಮಾರಚರಿತ'ದಲ್ಲಿ ಮೇಲಿಂದ ಮೇಲೆ ಕಾಣುತ್ತದೆ. ಈ ಕನ್ನಡ ಕವಿಗಳ ಸ್ತುತಿಯಾದ ಬಳಿಕ ಕವಿ ಪರಮೇಶ್ವರನೆಂದೂ ಕವೀಂದ್ರಚೂಡಾಮಣಿಯೆಂದೂ ಕವಿಗಳಾದಿತ್ಯನೆಂದೂ ಖ್ಯಾತನಾದ ಒಬ್ಬ ಕವಿಯು ಕವಿತ್ವ ತನ್ನ ಕಾವ್ಯದ ತತ್ವಭಾಗಕ್ಕೆ ಅವಲಂಬನವಾಗಿದೆಯೆಂದು ಶಾಂತಿನಾಥನ ಹೇಳಿಕೆ. ಇಲ್ಲಿ ಹೇಳಿರುವ ಕವಿ ಬಹುಶಃ ಕವಿಪರಮೇಷ್ಠಿಯೇ ಇರಬೇಕು. ಆತನು ಸಂಸ್ಕೃತ ಗದ್ಯದಲ್ಲಿ ಬರೆದ ಶಲಾಕಾಪುರುಷರ ಚರಿತ್ರೆಯೇ ಇಲ್ಲಿ ಹೇಳಿರುವ ಕವಿತ್ವ ಇರಬಹುದು.

---

[1] ಅಕಳಂಕನು ಕ್ರಿ.ಶ. ೮ನೆಯ ಶತಮಾನದಲ್ಲಿದ್ದು ''ರಾಜವಾರ್ತಿಕ'ವೆಂಬ ತತ್ವಾರ್ಥಸೂತ್ರವ್ಯಾಖ್ಯಾನವೇ ಮುಂತಾದ ಹಲವು ಗ್ರಂಥಗಳನ್ನು ಬರೆದಿದ್ದಾನೆ; ಕ್ರಿ.ಶ. ೧೦೨೫ ರಲ್ಲಿದ್ದು 'ಯಶೋಧರಕಾವ್ಯ'ವೇ ಮೊದಲಾದ ಗ್ರಂಥಗಳನ್ನು ಬರೆದಿರುವವನೋ ಅಥವಾ ಅವನ ಗುರುವಾದ ಕನಕಸೇನವಾದಿರಾಜನೊ ಇಲ್ಲಿ ಸ್ತುತನಾದ ಕವಿ ಇರಬೇಕು; ಧನಂಜಯನು 'ರಾಘವಪಾಂಡವೀಯ'ವೆಂಬ ದ್ವಿಸಂಧಾನ ಕಾವ್ಯವನ್ನು ಬರೆದಾತನಿರಬೇಕು.

ಗ್ರಂಥದ ಮೊದಲನೆಯ ಆಶ್ವಾಸದ ಆರಂಭದಲ್ಲಿ ಪಂಚಪರಮೇಷ್ಠಿಗಳ ಸ್ತುತಿ ಮುಂತಾದುವು ಮುಗಿದಮೇಲೆ ವಿಷ್ಣುನಂದಿಯ ನಾಮೋಲ್ಲೇಖದಿಂದ ಕವಿಯ ಗುರುಪರಂಪರೆ ಆರಂಭವಾಗುತ್ತದೆ. ಅಪರಾಜಿತ, ಗೋವರ್ಧನ, ಭದ್ರಬಾಹು ಮುನಿನಾಥ, ಜಯಭದ್ರ, ಸುಭದ್ರ, ಪಾಂಡುಯತಿ, ಕಂಸಾಚಾರ್ಯ, ಲೋಹಾರ್ಯ, ಜಯಪಾಲಾರ್ಯ, ವಿಶಾಖದತ್ತ, ಗೃಧ್ರಪಿಂಛಾಚಾರ್ಯ, ಧರಸೇನ ಮುನಿ, ಭೂತಬಲಿ, ಪುಷ್ಪದಂತ, ಕೊಂಡಕುಂದಾಚಾರ್ಯ, ಪೂಜ್ಯಪಾದ, ಜಟಾಸಿಂಹನಂದ್ಯಾಚಾರ್ಯ, ಕವಿಪರಮೇಷ್ಠಿಸ್ವಾಮಿಗಳು, ಸಿಂಹಣಂದಿ, ಜಯನಂದಿ— ಈ ಗುರುಗಳು ಸ್ತುತರಾಗಿದ್ದಾರೆ. ಜೈನ ಸಾಹಿತ್ಯದಲ್ಲಿ ಪ್ರಸಿದ್ಧರಾದ ಹಲವು ಪ್ರಾಚೀನಾಚಾರ್ಯರ ಹೆಸರುಗಳು ಇಲ್ಲಿವೆ, ಇಲ್ಲಿಂದ ಮುಂದಕ್ಕೆ ಮಲಧಾರಿದೇವ, ಶ್ರೀಧರದೇವ, ಚಂದ್ರಕೀರ್ತಿಭಟ್ಟಾರಕ, ನಯಣಂದಿದೇವ, ವರ್ಧಮಾನಮುನಿ, ದಿವಾಕರಣಂದಿದೇವ ಸೈದ್ಧಾಂತಿಕ, ಸಕಳಚಂದ್ರಸಿದ್ಧಾಂತಿ, ಮಾಘಣಂದಿ ಸೈದ್ಧಾಂತಿಕ—ಈ ಗುರುಗಳು ಕೀರ್ತಿತರಾಗಿದ್ದಾರೆ.

ಇವರಲ್ಲಿ ಕವಿಯ ಗುರು ವರ್ಧಮಾನ. ಈ ಗ್ರಂಥದ ಕೊನೆಯಲ್ಲಿಯೂ ಶಿಕಾರಿಪುರ ಶಾಸನದ ೪೫ನೆಯ ಪದ್ಯದಲ್ಲಿಯೂ ಈ ವರ್ಧಮಾನ ಮುನಿ ಕೊಂಡಕುಂದಾನ್ವಯ ಮೂಲ ಸಂಘದೇಶಿ ಗಣಕ್ಕೆ ಸೇರಿದವನೆಂದು ಹೇಳಿದೆ. ದಿವಾಕರಣಂದಿಯು ತತ್ವಾರ್ಥಸೂತ್ರಕ್ಕೆ ಕನ್ನಡವೃತ್ತಿಯನ್ನು ಕ್ರಿ.ಶ. ೧೦೬೨ರಲ್ಲಿ ಬರೆದವನೇ ಇರಬೇಕು; ಇವನ ಗುರು ಚಂದ್ರಕೀರ್ತಿ ಶಾಂತಿನಾಥನಿಂದ ಸ್ತುತನಾಗಿರುವವನೇ ಎಂದು ಕಾಣುತ್ತದೆ. ಮಲಧಾರಿ ದೇವನಿಂದ ಹಿಡಿದು ಮಾಘನಂದಿಯವರೆಗೆ ಇರುವ ಗುರುಗಳ ಪರಸ್ಪರ ಸಂಬಂಧವನ್ನು ಶಾಂತಿನಾಥನು ಹೇಳಿಲ್ಲವಾದರೂ ನಗರದ ೫೭, ೫೮ನೆಯ ಶಾಸನಗಳಿಂದಲೂ ಇತರ ಶಾಸನಗಳಿಂದಲೂ ಅವರಿಗೆ ಗುರು ಶಿಷ್ಯ ಸಂಬಂಧವಿದ್ದಿರಬೇಕೆಂದು ವ್ಯಕ್ತವಾಗುತ್ತದೆ. ನಗರ ೫೭ರಲ್ಲಿ ಚಂದ್ರಕೀರ್ತಿಭಟ್ಟಾರಕರ ಅಗ್ರಶಿಷ್ಯರು ದಿವಾಕರಣಂದಿಗಳೆಂದೂ, ಅವರ ಶಿಷ್ಯನು ಸಕಲ ಚಂದ್ರಮುನಿನಾಥನೆಂದೂ 'ಪೊಂಬುರ್ಚಕುಲೋದ್ಭವ ದಿವಾಕರ'ನಾದ ಪಟ್ಟಣಸ್ವಾಮಿ ನೊಕ್ಕಯ್ಯ ಸೆಟ್ಟಿಯರು ದಿವಾಕರಣಂದಿಯ ಗುಡ್ಡನೆಂದೂ ಹೇಳಿದೆ. ಶಕ ೯೮೪ (ಕ್ರಿ.ಶ. ೧೦೬೨) ರಲ್ಲಿ ಹುಟ್ಟಿದ ನಗರ ೫೮ನೆಯ ಶಾಸನದಲ್ಲಿ ಪಟ್ಟಣಸ್ವಾಮಿ ನೊಕ್ಕನು ತನ್ನ ಸಹಧರ್ಮಿಯಾದ ಸಕಲ ಚಂದ್ರಪಂಡಿತನಿಗೆ ಕುಕ್ಕಡಹಳ್ಳಿಯನ್ನು ದಾನವಾಗಿ ಕೊಟ್ಟಂತೆ ತಿಳಿಯು

ವುದರಿಂದ ಅವರಿಬ್ಬರೂ ಒಬ್ಬನೇ ಗುರುವಿನ ಶಿಷ್ಯರೆಂದು ವ್ಯಕ್ತವಾಗುತ್ತದೆ; ಆ ಗುರು ದಿವಾಕರಣಂದಿಯೇ ಇರಬೇಕೆಂದು ನಗರ ೫೭ರ ಆಧಾರದಮೇಲೆ ನಿರ್ಣಯಿಸಬಹುದು. ಒಟ್ಟಿನಲ್ಲಿ ನಗರ ೫೭, ೫೮ರ ಶಾಸನಗಳಲ್ಲಿ ಬರುವ ಜೈನಯತಿಗಳ ಪರಸ್ಪರಸಂಬಂಧ ಹೀಗಿದೆ:




ಕ್ರಿ.ಶ. ೧೧೨೩ರಲ್ಲಿ ಹುಟ್ಟಿದ ಶ್ರವಣಬೆಳುಗೊಳ ೧೧೭ನೆಯ ಶಾಸನದಲ್ಲಿ ದಕ್ಷಿಣಮುಖ ೯-೧೦ನೆಯ ಪಂಕ್ತಿಗಳಿಂದ ಮುಂದಕ್ಕೆ, ಈ ಕೆಳಗೆ ಕಂಡ ಜೈನ ಗುರುಗಳ ವಂಶಪರಂಪರೆ ಹೇಳಿದೆ:




ಈ ಗುರುಗಳೆಲ್ಲ ಕೊಂಡ ಕುಂದಾನ್ವಯ ಮೂಲಸಂಘ ದೇಶಿಗಣ ಪುಸ್ತಕ ಗಚ್ಛಕ್ಕೆ ಸೇರಿದವರು. ಶಾಂತಿನಾಥನು ಹೆಸರಿಸಿರುವ ಗುರುಗಳು ಇದೇ ಗಣ ಗಚ್ಛಗಳಿಗೆ ಸೇರಿದವರೆಂದು ಮೇಲೆಹೇಳಿದ ಶಿಕಾರಿಪುರಶಾಸನದ ೪೫ನೆಯ

ಪದ್ಯದಿಂದ ಊಹಿಸಬಹುದಾಗಿದೆ. ಶ್ರ. ಬೆ. ೧೧೭ರಲ್ಲಿ ಬರುವ ದಿವಾಕರ ಣಂದಿಯ ಸ್ತುತಿಯಲ್ಲಿ.

ವಿದಿತವ್ಯಾಕಣದ ತ
ರ್ಕದ ಸಿದ್ಧಾಂತದ ವಿಶೇಷದಿಂ ತ್ರೈವಿದ್ಯಾ |
ಸ್ಪದರೆಂದೀ ಧರೆ ಬಣ್ಣಿ
ಪುದು ದಿವಾಕರಣಂದಿ ದೇವ ಸಿದ್ಧಾಂತಿಗರಂ ||

ಎಂಬ ಕಂದಪದ್ಯವಿದೆ. ಈ ಪದ್ಯ ಸುಕುಮಾರಚರಿತಕ್ಕೆ ಸೇರಿದ್ದು (I-೨೮) ಈ ಶಾಸನೋಕ್ತನಾದ ದಿವಾಕರಣಂದಿಯೂ ಶಾಂತಿನಾಥನು ಹೇಳಿರುವ ದಿವಾಕರಣಂದಿಯೂ ಒಬ್ಬನೇ ವ್ಯಕ್ತಿ ಇರಬೇಕು; ಮಲಧಾರಿದೇವ, ಅವನ ಸಧರ್ಮ ಶ್ರೀಧರದೇವ, ಮಲಧಾರಿದೇವನ ಶಿಷ್ಯ ಚಂದ್ರಕೀರ್ತಿ–ಈ ಮೂವರೂ ಶಾಂತಿನಾಥನಿಂದ ಸ್ತುತರಾಗಿರುವವರೇ ಎಂದು ಊಹಿಸಬಹುದು ಈ ಶಾಸನ ದಲ್ಲಿ ಈ ಯತಿಗಳಿಗೆ ಗುರು-ಶಿಷ್ಯ ಸಂಬಂಧವು ಇದ್ದಿತೆಂದು ಸ್ಪಷ್ಟವಾಗಿಯೇ ಹೇಳಿರುವುದರಿಂದ ಶಾಂತಿನಾಥನು ಹೇಳಿರುವ ಅದೇ ಯತಿಗಳಿಗೆ ಅದೇ ಸಂಬಂಧ ವಿರಬೇಕೆಂದು ನಿರ್ಣಯಿಸಬಹುದು. ಚಂದ್ರಕೀರ್ತಿ ಮತ್ತು ದಿವಾಕರಣಂದಿ–ಇವರ ನಡುವೆ ಶಾಂತಿನಾಥನು ಹೇಳಿರುವ ನಯಣಂದಿದೇವ ವರ್ಧಮಾನ ಮುನಿಗಳು, ದಿವಾಕರಣಂದಿ ಚಂದ್ರಕೀರ್ತಿಯ ಅಗ್ರಶಿಷ್ಯನೆಂಬ ಕಾರಣದಿಂದ, ಚಂದ್ರಕೀರ್ತಿಯ ಕಿರಿಯ ಶಿಷ್ಯರಾಗಿದ್ದು ದಿವಾಕರಣಂದಿಯ ಸಧರ್ಮರಾಗಿರ ಬೇಕು. ಶಕ ೧೦೪೧ (ಕ್ರಿ.ಶ. ೧೧೧೯) ರಲ್ಲಿ ಹುಟ್ಟಿದ ಶ್ರ.ಬೆ ೩೫೧ ನೆಯ ಶಾಸನದಲ್ಲಿ ಕಾಣುವ, ಕೊಂಡ ಕುಂದಾನ್ವಯ ಮೂಲಸಂಘದೇಶಿಗಣ ಪುಸ್ತಕ ಗಚ್ಛಕ್ಕೆ ಸೇರಿದ ದಿವಾಕರಣಂದಿವ್ರತಿಪನೂ ಅವನ ಶಿಷ್ಯ ಮಲಧಾರಿದೇವನೂ ಅವನ ಶಿಷ್ಯ ಶುಭಚಂದ್ರನೂ ಶ್ರ.ಬೆ. ೧೧೭ರಲ್ಲಿ ಉಕ್ತವಾಗಿರುವವರೇ ಆಗಿರುವುದ ರಿಂದ ಇಲ್ಲಿ ಬರುವ ದಿವಾಕರಣಂದಿಯೂ ಶಾಂತಿನಾಥನಿಂದ ಪ್ರೋಕ್ತನಾದವನೂ ಅಭಿನ್ನರು. ಸಕಳಚಂದ್ರನು ದಿವಾಕರಣಂದಿಯ ಶಿಷ್ಯನೆಂಬ ಅಂಶವನ್ನು ಈ ಮೊದಲೇ ಹೇಳಿದೆ. ಮಾಘನಂದಿ ಸಿದ್ಧಾಂತಿಯೂ ದಿವಾಕರಣಂದಿಯ ಶಿಷ್ಯನೇ ಆಗಿದ್ದು ಸಕಳಚಂದ್ರನ ಸಧರ್ಮನಾಗಿರಬಹುದು. ಶಾಂತಿನಾಥನಿಂದ ಸ್ತುತ ರಾದ ಜೈನಯತಿಗಳ ಗುರುಶಿಷ್ಯತ್ವದ ಪೀಳಿಗೆ ಹೀಗಿರಬಹುದು:




ಶಿಕಾರಿಪುರ ೧೩೬ರಲ್ಲಿ ವರ್ಧಮಾನ ದಿವಾಕರಣಂದಿಗಳ ಸ್ತುತಿಯಾದ ಮೇಲೆ ಮುನಿಚಂದ್ರದೇವನೂ (೪೮) ಸರ್ವಣಂದಿಭಟ್ಟಾರಕನೂ (೪೯) ಅನಂತರ ಬಹುಶಃ ಮಾಘನಂದಿ ದೇವನೂ ಪರಿಕೀರ್ತಿತರಾಗಿದ್ದಾರೆ. ಇವರಿಗೂ ದಿವಾಕರಣಂದಿಗೂ ಏನು ಸಂಬಂಧವಿದ್ದಿತೋ ಸ್ಪಷ್ಟವಾಗುವುದಿಲ್ಲ. ಅಲ್ಲದೆ ಇಲ್ಲಿನ ಮಾಘಣಂದಿ ಭಟ್ಟಾರಕನನ್ನು "ದೇಸಿಗಣದ ತಾಳಕೋಲಾನ್ವಯ"ಕ್ಕೆ ಸೇರಿದವನೆಂದು ಕರೆದಿರುವಂತಿದೆ.[2] ಶಾಂತಿನಾಥನು ಹೇಳಿರುವ ಮಾಘನಂದಿಯೇ (1-೩೧) ಇವನೆಂದು ತೀರ್ಮಾನಿಸಲು ಆಧಾರವಿಲ್ಲ.[3]

---

[2] ಈ ಶಾಸನದ ಕೊನೆಯ ಬಹುಭಾಗ ನಷ್ಟವಾಗಿದೆ (ಪರಿಶಿಷ್ಟ ೧ ನ್ನು ನೋಡಿ)

[3] ಕ್ರಿ. ಶ. ೧೦೯೯ ರಲ್ಲಿ ಹುಟ್ಟಿದ ಎಡತೊರೆ ೨೪ ನೆಯ ಶಾಸನದಲ್ಲಿ ಮೂಲಸಂಘದೇಸಿಗ ಗಣದ ಪುಸ್ತಕ ಗಚ್ಛದ ದಿವಾಕರಣಂದಿದೇವನೂ, ಕೊಂಡಕುಂದಾನ್ವಯದ ಪನಸೋಗೆ ನಿವಾಸಿ ಶ್ರೀಕರ ಮುಕ್ತನೂ ಪೂರ್ಣಚಂದ್ರಮುನಿಪನೂ ಕೀರ್ತಿತರಾಗಿದ್ದಾರೆ. ಸುಮಾರು ಕ್ರಿ ಶ. ೧೦೮೦ ರಲ್ಲಿ ಲಿಖಿತವಾದ ಎಡತೊರೆ ೨೩–೨೭ ನೆಯ ಶಾಸನಗಳಲ್ಲಿ ದಿವಾಕರನ ಜ್ಯೇಷ್ಠ ಗುರು ಭಟ್ಟರ ದಾಮನಂದಿ........ಶ್ರೀಧರಾಚಾರ್ಯ, ಮಲಧಾರಿ, ಚಂದ್ರಕೀರ್ತಿ ಬ್ರತಿ, ಶಿಷ್ಯ ದಿವಾಕರ—ಈ ಹೆಸರುಗಳು ಬರುತ್ತವೆ. ಬಹುಶಃ ಇವರು ಶಾಂತಿನಾಥನು ಹೆಸರಿಸಿರುವ ಗುರುಗಳೇ ಇರಬಹುದು. ಸುಮಾರು ೧೧೦೦ ರಲ್ಲಿ ರಚಿತವಾದ ಎಡತೊರೆ ೨೮ ರಲ್ಲಿ ಶ್ರೀಧರ, ಶಿಷ್ಯ ಏಳಾಚಾರ್ಯ, ಶಿಷ್ಯ ದಾಮನಂದಿ, ಸಧರ್ಮ ಚಂದ್ರಕೀರ್ತಿ, ರಿಷ್ಯ ದಿವಾಕರಣಂದಿ, ಶಿಷ್ಯ ಚಾಂದ್ರಾಯಣ ದೇವಾಪರ ನಾಮಧೇಯರಪ್ಪ ಶ್ರೀಮತ್ ಜಯಕೀರ್ತಿದೇವ—ಈ ಹೆಸರುಗಳು ಕಂಡುಬರುತ್ತವೆ.

[4] ಸ್ವಾಮಿ ಕಣ್ಣುಪಿಳ್ಳೆಯವರ (Indian Ephemerus) ಶಕ೯೯೦ ಕೀಲಕ ಸಂವತ್ಸರ ಭಾದ್ರಪದದ ಪುಣ್ಣಮೆ ಶುಕ್ರವಾರವಾಗುತ್ತದೆ, ಸೋಮವಾರವಾಗುವುದಿಲ್ಲ.

ಶಾಂತಿನಾಥನು ತನಗೆ ಅಧಿಪತಿಯಾಗಿದ್ದ ಲಕ್ಷ್ಮಣರಾಜನ ಹೆಸರನ್ನು ತನ್ನ ಕಾವ್ಯದಲ್ಲಿ ಎಲ್ಲಿಯೂ ಸೂಚಿಸಿರುವಂತೆ ಕಂಡುಬರುವುದಿಲ್ಲ. ಶಿಕಾರಿಪುರದ ಶಾಸನದಲ್ಲಿ ಲಕ್ಷ್ಮಣನ ಸ್ತೋತ್ರವನ್ನು ದೀರ್ಘವಾಗಿ ಮಾಡಿದೆ. ಲಕ್ಷ್ಮಣ ರಾಜನು ಬನವಸೆ ಪ್ರಾಂತ್ಯವನ್ನು ಮಹಾಮಂಡಲೇಶ್ವರನಾಗಿ ಆಳುತ್ತಿದ್ದನು. ಚಾಳುಕ್ಯ ಚಕ್ರವರ್ತಿಗಳಾದ ತ್ರೈಲೋಕ್ಯಮಲ್ಲ ಸೋಮೇಶ್ವರನ ಆಳ್ವಿಕೆ ಯಲ್ಲಿಯೂ (ಕ್ರಿ, ಶ. ೧೦೪೨-೧೦೬೮) ಭುವನೈಕಮಲ್ಲ ಸೋಮೇಶ್ವರನ ಆಳ್ವಿಕೆ ಯಲ್ಲಿಯೂ(ಕ್ರಿ.ಶ. ೧೦೬೮-೧೦೭೬)ಲಕ್ಷ್ಮಣರಾಜನು ಹೆಸರುವಾಸಿಯಾಗಿದ್ದನು. ರಾಯ ಗಂಡಗೋಪಾಲನೃಪ, ಚಲದಂಕರಾಮ, ಮಂಡಲಿಕ ತ್ರಿಣೇತ್ರ ಎಂಬ ಅನೇಕ ಬಿರುದುಗಳಿಂದ ಇವನು ವಿರಾಜಿಸುತ್ತಿದ್ದನು. ಭುವನೈಕಮಲ್ಲದೇವನ ಭವನದಲ್ಲಿ ತಾನೊಬ್ಬನೇ ಮನುಷ್ಯ, ತಾನೊಬ್ಬನೇ ಮಹಾವ್ಯವಸಾಯಿ, ತಾನೊ ಬ್ಬನೇ ವಿಜಯಪ್ರವರ್ಧಕ, ತಾನೊಬ್ಬನೇ ಪಸಯಿತ ಎಂಬಂತಿದ್ದ ಲಕ್ಷ್ಮನೃಪ- ಅಲ್ಲದೆ " ಚಾಳುಕ್ಯರಾಜ್ಯಕ್ಕೆ ಕಾರಣಮಾದಾಳ್ " ಎಂಬ ಪ್ರಶಸ್ತಿ ಇವನಿಗಿತ್ತು. ಇಬ್ಬರು ಚಕ್ರೇಶ್ವರರು ಇವನ ಭಕ್ತಿಗೂ ಪರಾಕ್ರಮಕ್ಕೂ ವಿಶ್ವಾಸಕ್ಕೂ ಮೆಚ್ಚಿ ಶಾಸನಾಂಕಿತವಾಗಿ ವನವಾಸೀದೇಶವನ್ನು ಅಶ್ವದ್ವಿಪಪಟ್ಟಸಾಧನ ಸಮೇತ ವಾಗಿ ಈತನಿಗೆ ಕೊಟ್ಟರು. ರಾಜನ ಅತಿ ಸಮೀಪದ ಸೋದರರಂತೆ ಲಕ್ಷ್ಮಣನು ಇದ್ದನಂತೆ. ಇವನ ಅಧೀನದಲ್ಲಿ ಬನವಸೆ ಪನ್ನಿರ್ಛಾಸಿರಕ್ಕೆ ಅರ್ಥಾಧಿಕಾರಿಯೂ ಕಾರ್ಯಧುರಂಧರನೂ ತದ್ರಾಜ್ಯಸಮುದ್ಧರಣನೂ ಮಂತ್ರನಿಧಾನನೂ ಆಗಿದ್ದವನು ಶಾಂತಿನಾಥ ಕವಿ. ಬನವಸೆ ನಾಡಿಗೆ ರಾಜಧಾನಿಯಾದ ಬಳಿಗ್ರಾಮದಲ್ಲಿ ಶಾಂತಿ ತೀರ್ಥಂಕರನ ಗೇಹವನ್ನು ಶಿಲಾಕರ್ಮಮಯವಾಗಿ ಮಾಡಿಸಿಕೊಡಬೇಕೆಂದು ಶಾಂತಿನಾಥನು ತನ್ನ ಪ್ರಭುವಿಗೆ ಬಿನ್ನೈಸಲು ಅವನ ಮಾತನ್ನು ಬಗೆಗೊಂಡು ಧರ್ಮನಿರ್ಮಲಚಿತ್ತನಾದ ಲಕ್ಷ್ಮಣನು ಜಿನನಾಥಾವಾಸವನ್ನು ಶಿಲಾಕರ್ಮ ದಿಂದ ಮಾಡಿಸಿ ಅದರ ಬಾಗಿಲಲ್ಲಿ ಶಿಲಾಸ್ತಂಭವನ್ನು ನಿರ್ಮಿಸಿ ಶಾಸನವನ್ನು ಸ್ಥಾಪಿಸಿದನು. ಶಿಕಾರಿಪುರ ೧೩೬ ನೆಯ ಶಾಸನವೇ ಅದಿರಬಹುದು. ಅದು ಹುಟ್ಟಿದ್ದು ಕ್ರಿ. ಶ. ೧೦೬೮ (ಶಕ ೯೯೦, ಕೀಲಕ ಸಂವತ್ಸರದ ಪೂರ್ಣಮೆ ಸೋಮವಾರ)"[4]

" ಸುಕುಮಾರ ಚರಿತ " ವನ್ನು ಅಲ್ಲದೆ ಶಾಂತಿನಾಥನು ಶಿಕಾರಿಪುರದ ಈ ಶಾಸನವನ್ನು ಬರೆದಿರಬಹುದೆಂಬ ಅನುಮಾನವುಂಟಾಗುತ್ತದೆ. ಈ ಶಾಸನ

ಸುಮಾರು ೫೦ ಕಂದ ವೃತ್ತಗಳನ್ನೊಳಕೊಂಡ ಚಂಪೂಶೈಲಿಯ ಪ್ರೌಢರಚನೆಯಾಗಿದೆ. "ಸುಕುಮಾರ ಚರಿತ" ದಲ್ಲಿ ಕಾಣುವ ಹಲವು ಪದ್ಯಗಳು ಸಂದರ್ಭೋಚಿತವಾದ ಅಲ್ಪವ್ಯತ್ಯಾಸಗಳಿಂದ ಕೂಡಿ ಈ ಶಾಸನದಲ್ಲಿ ಉದ್ಧೃತವಾಗಿವೆಯೆಂಬ ಅಂಶವನ್ನು ಗಮನಿಸಿದರೆ ಶಾಂತಿನಾಥನೇ ಈ ಶಾಸನ ಕವಿಯೆಂದು ದೃಢವಾಗುತ್ತದೆ. ಆ ಕಾವ್ಯಕ್ಕೂ ಈ ಶಾಸನಕ್ಕೂ ಸಮಾನವಾಗಿರುವ ಪದ್ಯಗಳನ್ನು ಪರಿಶಿಷ್ಟ ೧ ರಲ್ಲಿ ನೋಡಬಹುದು.

"ಸುಕುಮಾರ ಚರಿತ"ವು ಯಾವಾಗ ರಚಿತವಾಯಿತೆಂಬುದನ್ನು ವಿಚಾರ ಮಾಡಬೇಕಾಗಿದೆ. ಶಿಕಾರಿಪುರದ ಶಾಸನದ ಕಾಲಕ್ಕಾಗಲೇ ಎಂದರೆ ಕ್ರಿ. ಶ. ೧೦೬೮ ರ ಹೊತ್ತಿಗೆ ಅದು ರಚಿತವಾಗಿತ್ತೆಂಬುದು ಆ ಶಾಸನದಿಂದಲೇ ವ್ಯಕ್ತವಾಗುತ್ತದೆ. ಶಾಸನದ ಕಾಲದಲ್ಲಿ ತನಗೆ ಪೋಷಕನಾಗಿದ್ದ ಲಕ್ಷ್ಮನೃಪನ ಹೆಸರನ್ನು ಶಾಂತಿನಾಥನು ತನ್ನ ಕಾವ್ಯದಲ್ಲಿ ಎಲ್ಲಿಯೂ ಹೇಳಿಲ್ಲವೆಂಬುದರಿಂದ ಎರಡು ಅನುಮಾನಗಳು ಉಂಟಾಗುತ್ತವೆ. ಧರ್ಮಕಥೆಯಾದ ತನ್ನ ಕಾವ್ಯದಲ್ಲಿ ಜೈನನಲ್ಲದ ತನ್ನ ಪೋಷಕನ ಹೆಸರನ್ನು ಹೇಳುವುದು ಅನುಚಿತವೆಂದು ಭಾವಿಸಿ ಕವಿ ತನ್ನ ಆಶ್ರಯದಾತನ ಹೆರಸನ್ನು ಹೇಳಿಲ್ಲವೆಂಬುದು ಮೊದಲನೆಯದು. ಪೊನ್ನ ರನ್ನರು ತಂತಮ್ಮ ಪೋಷಕರಾಗಿದ್ದ ದೊರೆಗಳನ್ನು, ಅವರು ಅನ್ಯಮತೀಯರಾಗಿದ್ದರೂ, ತಮ್ಮ ಪುರಾಣಕೃತಿಗಳಲ್ಲಿ ಕೊಂಡಾಡಿರುವುದನ್ನೂ ಈಚಿನ ಕಾಲದ (ಕ್ರಿ. ಶ. ೧೧೪೦) ನಾಗಚಂದ್ರನು ತನ್ನ "ಮಲ್ಲಿನಾಥ ಪುರಾಣ" ವೆಂಬ ಧಾರ್ಮಿಕ ಕಾವ್ಯದಲ್ಲಿ ತನ್ನ ಪೋಷಕನನ್ನು ಮೆಚ್ಚಿ ಪ್ರಕಾರಾಂತರವಾಗಿ ಸೂಚಿಸಿರುವುದನ್ನೂ ನೋಡಿದರೆ ಶಾಂತಿನಾಥನು ತನ್ನ ಪೋಷಕನನ್ನು ತನ್ನ ಕೃತಿಯಲ್ಲಿ ಸ್ಮರಿಸದಿರುವುದಕ್ಕೆ ಅವನು ಅನ್ಯಮತೀಯನಾಗಿದ್ದದ್ದು ಬಲವಾದ ಕಾರಣವೆಂದು ಹೇಳಲಾಗದು. "ಸುಕುಮಾರ ಚರಿತ" ವನ್ನು ಬರೆದಾಗ ಶಾಂತಿನಾಥನು ಲಕ್ಷ್ಮನೃಪನ ಆಶ್ರಿತನಾಗಿದ್ದಿರಲಿಲ್ಲವೆಂಬುದು ಎರಡನೆಯ ಅನುಮಾನ. ಇದು ಹೆಚ್ಚು ಸಂಭವವಾದದ್ದು. ಬನವಾಸಿ ೧೨೦೦೦ಕ್ಕೆ ಲಕ್ಷ್ಮಣನು ಮಹಾಮಂಡಲೇಶ್ವರನಾಗಿ ಬರುವುದಕ್ಕೆ ಮುಂಚಿತವಾಗಿಯೇ ಶಾಂತಿನಾಥನು ತನ್ನ ಕಾವ್ಯವನ್ನು ರಚಿಸಿರಬೇಕು. ಲಕ್ಷ್ಮನ ಹೆಸರಿರುವ ಮೊದಲನೆಯ ಶಾಸನವೆಂದರೆ ಕ್ರಿ.ಶ. ೧೦೬೮ರಲ್ಲಿ ಹುಟ್ಟಿದ ಶಿಕಾರಿಪುರ ೧೯ನೆಯ ಶಾಸನ. ಅವನು ಈ ವರ್ಷದಲ್ಲಿ ಬನವಸೆಪನ್ನಿರ್ಛಾಸಿರಕ್ಕೆ ಪ್ರಭುವಾಗಿದ್ದನು. ಇದಕ್ಕಿಂತ ಹಿಂದೆ ಕ್ರಿ-ಶ.

೧೦೬೨-೬೩ರಲ್ಲಿ ಮಹಾಮಂಡಲೇಶ್ವರ ಚಾವುಂಡರಾಯನು ಬನವಸೆನಾಡಿಗೆ ಅಧಿಪತಿಯಾಗಿ ರಾಜಧಾನಿ ಬಳ್ಳಿಗಾವಿಯಲ್ಲಿದ್ದನು;[5] ಕ್ರಿ.ಶ. ೧೦೬೪ರಲ್ಲಿ ಅಕ್ಕಾದೇವಿಯ ಮಗನಾದ ತೋಯಿಮದೇವನು ಬನವಾಸಿನಾಡಿಗೆ ಒಡೆಯನಾಗಿದ್ದನು.[6] ಆದ್ದರಿಂದ ಲಕ್ಷ್ಮಣರಾಜನು ೧೦೬೪ರಿಂದ ಈಚೆಗೆ, ೧೦೬೬ರ ಒಳಗೆ ಎಂದರೆ ಸುಮಾರು ೧೦೬೫ರಲ್ಲಿ ಬನವಸೆ ಪ್ರಾಂತದ ಮಹಾಮಂಡಲೇಶ್ವರ ಪದವಿಯನ್ನು ಪಡೆದಿರಬೇಕು. ಹಾನಗಲ್ಲಿನ ಕದಂಬವಂಶಕ್ಕೆ ಸೇರಿದ ಮಹಾಮಂಡಲೇಶ್ವರ ಇಮ್ಮಡಿ ಕೀರ್ತಿವರ್ಮನು ೧೦೬೮-೬೯ರಲ್ಲಿ ಬನವಾಸೆ ೧೨೦೦೦ಕ್ಕೆ ಅಧಿಪತಿಯಾಗಿದ್ದನೆಂದು ತಿಳಿಯುವುದರಿಂದ[7] ಲಕ್ಷ್ಮಣರಾಜನು ಆ ಸಂವತ್ಸರಾಂತ್ಯದಲ್ಲಿ ಬನವಸೆ ಪ್ರಾಂತವನ್ನು ಬಿಟ್ಟಿರಬೇಕು. ಅವನು ಕ್ರಿ.ಶ. ೧೦೬೮ರ ಆಗಸ್ಟ್ ತಿಂಗಳು ೧೫ನೆಯ ತಾರೀಕು ಸೋಮವಾರದಂದು (ಶುಕ್ರವಾರ?)[8] ಬನವಸೆ ಸೀಮೆಯಲ್ಲಿಯೇ ಇದ್ದನೆಂಬುದರಿಂದ ಆ ಆಗಸ್ಟುತಿಂಗಳಿಂದ ಈಚೆಗೆ ಅವನು ಬನವಸೆಯಿಂದ ಬೇರೆ ಪ್ರಾಂತಕ್ಕೆ ಹೋಗಿರಬೇಕು. ಕ್ರಿ.ಶ. ೧೦೭೧-೭೨ ರಲ್ಲಿ ಅವನು "ಬೆಳ್ವೊಲ ಮೂನೂಱುಮಂ ಪುಲಿಗೆಱೆ ಮೂನೂಱುಮಂತೆರಡಱುನೂಱುಮಂ" ಪ್ರತಿಪಾಲಿಸುತ್ತಿದ್ದನೆಂದು ಗಾವರವಾಡದ ಮತ್ತು ಅಣ್ಣಿಗೇರಿಯ ಶಾಸನಗಳಿಂದ ತಿಳಿಯುತ್ತದೆ.[9] ಇದುವರೆಗೆ ಹೇಳಿರುವ ಶಾಸನಗಳಿಂದ ಲಕ್ಷ್ಮಣರಾಜನು ಬನವಸೆ ೧೨೦೦೦ಕ್ಕೆ ಮಹಾಮಂಡಲೇಶ್ವರನಾಗಿದ್ದದ್ದು ಸು ೧೦೬೫ರಿಂದ ೧೦೬೮-೬೯ರ ಮಧ್ಯಕಾಲದವರೆಗೆ ಎಂಬುದು ವ್ಯಕ್ತವಾಗುತ್ತದೆ. ಇವನು ಬನವಾಸಿಗೆ ಬರುವ ಮುನ್ನವೇ ಶಾಂತಿನಾಥನು ತನ್ನ ಕೃತಿಯನ್ನು ರಚಿಸಿರಬೇಕಾದುದರಿಂದ ಆ ಕಾವ್ಯ ಸು ೧೦೬೫ಕ್ಕಿಂತ ಹಿಂದೆಯೇ ಹುಟ್ಟಿರಬೇಕು.

---

5 F.K.D. p. 439.

6. H. I. S. I. p. 78.

7. F.K.D. p. 561. ಇಲ್ಲಿ ''Saka-Samvat'' 980 (expired)'' ಎಂಬ ತಪ್ಪು ಬಿದ್ದಿದೆ. I.A IV p. 206 n 3 ನ್ನು ನೋಡಿ. ಶಕ ಸಂವತ್ ೯೯೦ ಇರಬೇಕು.

8. ಶಿಕಾರಿಪುರ ೧೩೬.

9. E.I.XV, p 339 ff. ಈ ಶಾಸನಗಳನ್ನು ನನ್ನ ಗಮನಕ್ಕೆ ತಂದ ಡಾ॥ ಎಸ್. ಶ್ರೀಕಂಠಶಾಸ್ತ್ರಿ, ಎಂ.ಎ.,ಡಿ.ಲಿಟ್ ಅವರಿಗೆ ನಾನು ಋಣಿ.

ನಗರದ ೫೭, ೫೮ನೆಯ ಶಾಸನಗಳನ್ನು ಪಟ್ಟಣಸ್ವಾಮಿ ನೊಕ್ಕಯ್ಯನ ಮಗನಾದ ಮಲ್ಲಿನಾಥನು ಬರೆದನೆಂದು ಕನ್ನಡ ಕವಿ ಚರಿತ್ರ ಕಾರರು ಹೇಳಿದ್ದಾರೆ.[10] ನಗರದ ೫೭ರಲ್ಲಿರುವ, ದಿವಾಕರಣಂದಿ ಸ್ತುತಿರೂಪವಾದ

ಚಾರು ಚರಿತ್ರರೀ ದೊರೆಯರಾರೆನಿಪೊಳ್ಪಿನ ಚಂದ್ರಕೀರ್ತಿಭ
ಟ್ಟಾರಕರಗ್ರಶಿಷ್ಯರಘಹಾರಿಗಳಾರ್ಹತ ತತ್ವ ವಸ್ತು ವಿ
ಸ್ತಾರಕರಂಗಜಾರಿಗಳಶೇಷ ವಿಶೇಷಗುಣಾವಳೀ ಮನೋ
ಹಾರಿಗಳೆಂಬಿನಂ ನೆಗೞ್ದರಲ್ತೆ ದಿವಾಕರಣಂದಿ ಸೂರಿಗಳ್.

ಎಂಬ ಪದ್ಯವನ್ನು 'ಸುಕುಮಾರ ಚರಿತ'ದ I–೨೬ನೆಯ ಪದ್ಯದೊಡನೆ ಹೋಲಿಸಿ ನೋಡಿದರೆ ಎರಡಕ್ಕೂ ಶೈಲಿಯಲ್ಲಿಯೂ ಪದಪ್ರಯೋಗದಲ್ಲಿಯೂ ಇರುವ ನಿಕಟ ಸಾಮ್ಯವು ಆಕಸ್ಮಿಕವಾದುದಲ್ಲವೆಂದೂ ಮಲ್ಲಿನಾಥನು 'ಸುಕುಮಾರ ಚರಿತ'ದ ಪದ್ಯವನ್ನು ಅನುಕರಿಸಿರಬೇಕೆಂದೂ ಮನವರಿಕೆಯಾಗುತ್ತದೆ. ಆದ್ದರಿಂದ 'ಸುಕುಮಾರ ಚರಿತ'ವು ಕ್ರಿ.ಶ. ೧೦೬೩ಕ್ಕಿಂತ ಹಿಂದೆ ರಚಿತವಾಗಿರಬೇಕು. ಅದರ ರಚನಾಕಾಲವನ್ನು ಸುಮಾರು ಕ್ರಿ.ಶ. ೧೦೬೦ ಎಂದು ಹೇಳಬಹುದು.

---

10. ಕರ್ಣಾಟಕ ಕವಿ ಚರಿತೆ I. p 80. ನಗರದ ೫೭ನೆಯ ಶಾಸನ ರಚಿತವಾದ ಕಾಲ ಅದರಲ್ಲಿ ಉಕ್ತವಾಗಿಲ್ಲ; ಆದರೆ ಅದನ್ನು ಬರೆದವನು ಮಲ್ಲಿನಾಥನೇ ಎಂಬುದು ಸ್ಪಷ್ಟ, ಆದ್ದರಿಂದ ೫೮ನೆಯ ಶಾಸನದ ಕಾಲವನ್ನೇ ಅದಕ್ಕೆ ಕೊಟ್ಟಿದೆ. ರೈಸ್ ಅವರು ನಗರ ೫೭ಕ್ಕೆ ಸು ೧೦೭೭ ಎಂಬ ಕಾಲವನ್ನು ಸೂಚಿಸಿದ್ದಾರೆ.

# ೨ ಕಥಾಸಾರ

ವತ್ಸವಿಷಯದ ಕೌಶಂಬಿಪುರದಲ್ಲಿ ಅತಿಬಲನೆಂಬ ರಾಜನು ಆಳುತ್ತಿದ್ದನು. ಅವನ ಮಹಾದೇವಿ ಮನೋಹರಿಯೆಂಬವಳು. ಅವನ ಪುರೋಹಿತ ಸೋಮಶರ್ಮನೆಂಬ ಬ್ರಾಹ್ಮಣ; ಇವನ ಹೆಂಡತಿ ಕಾಶ್ಯಪಿ. ಇವರಿಗೆ ಅಗ್ನಿಭೂತಿ ವಾಯುಭೂತಿ ಎಂಬಿಬ್ಬರು ಮಕ್ಕಳು. ಈ ಬಾಲಕರು ಚಿಕ್ಕಂದಿನಿಂದಲೂ ಜಡರೂ ಚಪಲಚಿತ್ತರೂ ಆಗಿದ್ದು, ತಂದೆತಾಯಿಗಳ ಮಾತುಗಳನ್ನು ಕೇಳದೆ, ಬೆಳೆಬೆಳೆಯುತ್ತಾ ಕೇಡಾಳಿಗಳಾಗಿ ತಂದೆ ಹೇಳಿಕೊಡುವ ವಿದ್ಯೆಯನ್ನೊಲ್ಲದೆ, ಗದರಿಸಿಕೊಂಡರೆ ಹೆದರದೆ, ಮಿತ್ರರೂ ಹಿತವರೂ ಹೇಳಿದ್ದನ್ನು ಮಾಡದೆ, ಜೂಜುಟಗರುಕಾಳಗಗಳಲ್ಲಿ ಕಾಲಕಳೆಯುತ್ತ ನೀತಿಗೆಟ್ಟು, ತಂದೆ ಸಂಪಾದಿಸಿದ್ದನ್ನೆಲ್ಲ ಹಾಳುಮಾಡುತ್ತ ದುರ್ಗುಣಿಗಳಾದರು. ಮಕ್ಕಳು ಹೀಗೆ ಕೆಟ್ಟುಹೋದರಲ್ಲಾ ಎಂದು ಚಿಂತಿಸಿ ಚಿಂತಿಸಿ ಸೋಮಶರ್ಮ ದುಃಖದಿಂದ ಕಂಗೆಟ್ಟು ರೋಗಪೀಡಿತನಾಗಿ ಸತ್ತನು. ಈ ಸುದ್ದಿಯನ್ನು ಕೇಳಿ ಅತಿಬಲ ಅಂಥ ಸುಮಂತ್ರಿಯೂ ಹಿತಪುರೋಹಿತನೂ ಸತ್ತ ಬಳಿಕ ನನಗೆ ಈ ರಾಜ್ಯದಿಂದೇನು ಪ್ರಯೋಜನ ಎಂದು ದುಃಖಿತನಾಗಿ, ಅಗ್ನಿಭೂತಿ ವಾಯುಭೂತಿಗಳನ್ನು ತನ್ನಲ್ಲಿಗೆ ಬರಿಸಿ ಅವರ ದುಃಖವನ್ನು ಹಗುರಮಾಡಿ, ತಾಂಬೂಲ ದಾನಗಳನ್ನು ಕೊಟ್ಟು, ಅವರ ತಂದೆಯ ವೃತ್ತಿಯನ್ನೇ ಅವರಿಗೂ ದಯಪಾಲಿಸಿ ಮನೆಗೆ ಕಳಿಸಿಕೊಟ್ಟನು. ಮನೆಗೆ ಬಂದ ಅವರು ತಾಯನ್ನು ಸಮಾಧಾನ ಪಡಿಸಿ ರಾಜನಿಂದ ತಮಗೆ ಆದ ಉಪಕಾರವನ್ನು ಹೇಳಿ ಸುಖವಾಗಿ ಬದುಕತೊಡಗಿದ್ದರು.

ಒಂದು ದಿನ ಒಡ್ಡೋಲಗದಲ್ಲಿ ರಾಜನು ವಿದ್ವಜ್ಜನರ ಸಭೆಯಲ್ಲಿರುವಾಗ ವಿಜಯಜಿಷ್ಣುನೆಂಬ ವಾದಿ ಸಂವಾದಾರ್ಥಿಯಾಗಿ ಬಂದು ಅರಮನೆಯ ಬಾಗಿಲಲ್ಲಿ ನಿಂತನು. ಆ ಸುದ್ದಿ ಅರಸನಿಗೆ ತಿಳಿದು ಅವನನ್ನು ಒಳಕ್ಕೆ ಬರಹೇಳುತ್ತಲು, ವಿಜಯಜಿಷ್ಣುನು ಆಸ್ಥಾನಕ್ಕೆ ಬಂದು ತನ್ನ ವಾಗ್ವೈಖರಿಯಿಂದಲೂ ವ್ಯಾಕರಣ ಷಟ್ತರ್ಕ ಪಾಂಡಿತ್ಯದಿಂದಲೂ ಸಭೆ ಅಚ್ಚರಿಪಡುವಂತೆ ಉಪನ್ಯಾಸಮಾಡಿದನು. ಅವನ ವಾದಕ್ಕೆ ಉತ್ತರ ಕೊಡಲು ಅಲ್ಲಿದ್ದ ವಿದ್ವಾಂಸರು ಯಾರೂ ಸಮರ್ಥರಾಗಲಿಲ್ಲ. ಆಗ ದೊರೆ ಸೋಮಶರ್ಮನ ಮಕ್ಕಳನ್ನು ನೆನೆದು ಅವರಿಗೆ ಹೇಳಿ

ಕಳುಹಿಸಿದನು. ಅಗ್ನಿಭೂತಿ ವಾಯುಭೂತಿಗಳು ಈ ವೃತ್ತಾಂತವನ್ನೆಲ್ಲ ತಿಳಿದು ಭಯದಿಂದ ನಡುಗುತ್ತ ರಾಜನ ಮುಂದೆ ಬಂದು ಮಾನ್ಯರಂತೆ ಕುಳಿತರು. ನಿಮ್ಮ ತರ್ಕಶಾಸ್ತ್ರದ ಪಾಂಡಿತ್ಯವನ್ನು ಇಲ್ಲಿ ತೋರಿಸಿ ಈ ವಾದಿಯನ್ನು ಗೆಲ್ಲಬೇಕೆಂದು ದೊರೆ ಹೇಳಿದ ಕೂಡಲೇ ಅವರಿಗೆ ಗಂಟಲು ಕಟ್ಟಿ, ಮೂಗರಂತೆ ಬಾಯ್ಬಿಟ್ಟು, ಹೇಡಿಗಳಂತೆ ಬೆವರುತ್ತ ಇದ್ದರು. "ಬೆಕ್ಕನ್ನು ಕಂಡ ಇಲಿಯಂತೆ ಉಸಿರು ಕುಗ್ಗಿ ಸುಮ್ಮನೆ ಏಕೆ ಕುಳಿತಿದ್ದೀರಿ. ಸೋಮಶರ್ಮನ ಮಕ್ಕಳಾದ ನಿಮ್ಮಲ್ಲಿ ಪಾಂಡಿತ್ಯವಿರಬೇಕೆಂದು ಭಾವಿಸಿ ನಿಮಗೆ ಮರ್ಯಾದೆಮಾಡಿದ್ದೆಲ್ಲ ವ್ಯರ್ಥ. ನಿಮಗೂ ವಿದ್ಯೆಗೂ ಬಹಳ ದೂರ. ನಿಮ್ಮಂಥವರನ್ನು ರಾಜಸಭೆಗೆ ಹೊಗಿಸಿ ನಾನು ನಗೆಗೀಡಾದೆ. ನಿಮ್ಮಿಂದ ನನಗೂ ನನ್ನ ಸಭೆಗೂ ಅವಮಾನವಾಯಿತು." ಎಂದು ರಾಜ ತಿರಸ್ಕರಿಸಿ ಮಾತನಾಡಿ, ಅರಮನೆಯಿಂದ ಹೊರಕ್ಕೆ ತಳ್ಳಿಸಿ, ಅವರ ದಾಯಾದಿಯಾದ ಸೋಮಿಲನಿಗೆ ಅವರ ಪದವಿಯನ್ನು ಕೊಟ್ಟನು.

ಅಗ್ನಿಭೂತಿ ವಾಯುಭೂತಿಗಳು ಮನೆಗೆ ಬಂದು ತಾಯಿಯನ್ನು ನೋಡಲು ಮುಖವಿಲ್ಲದೆ ಚಿಂತೆಯಿಂದ ಕಣ್ಣೀರಿಡುತ್ತಿರಲು ತಾಯಿ ಅದನ್ನು ಕಂಡು "ಏಕೆ ಅಳುತ್ತಿದ್ದೀರಿ? ಯಾರಿಂದ ಹೀಗಾಯಿತು?" ಎಂದು ಬಗೆಬಗೆಯಾಗಿ ಕೇಳಿದಳು. ಅದಕ್ಕೆ ಆ ಅಣ್ಣ ತಮ್ಮಂದಿರು ನಡೆದದ್ದನ್ನೆಲ್ಲ ಅವಳಿಗೆ ಹೇಳಿ "ನಮ್ಮ ಪ್ರಾಚೀನ ಕರ್ಮ ಹೀಗಿದ್ದರೆ ಯಾರೇನು ಮಾಡಿಯಾರು? ನಮ್ಮ ಬಾಳು ಹುಲ್ಲಿಗಿಂತ ಹಗುರವಾಯಿತು. ವಿದ್ಯೆಯನ್ನು ಕಲಿಯದೆ ಅವಮಾನಕ್ಕೆ ಗುರಿಯಾದೆವು. ನಿಮ್ಮನ್ನು ಇದುವರೆಗೆ ನಾವು ಬಿರುಸುಮಾತುಗಳಿಂದ ಬೈಯುತ್ತಿದ್ದೆವು. ಅವಿವೇಕಿಗಳಾಗಿ ಸುಮ್ಮನೆ ಕಾಲ ಕಳೆದೆವು." ಎಂದು ಪಶ್ಚಾತ್ತಾಪಪಟ್ಟು "ಇನ್ನು ಮೇಲಾದರೂ ನಾವು ವಿದ್ಯೆಯನ್ನು ಕಲಿತು ಆದ ಅವಮಾನವನ್ನು ನೀಗಿಕೊಳ್ಳುತ್ತೇವೆ" ಎಂದು ತಾಯಿಗೆ ಹೇಳಿದರು. "ಅಂಥ ತಂದೆ ಇದ್ದು ಹೇಳಿಕೊಡುವಾಗ ಕಲಿಯದ ನೀವು ಈಗ ಕಲಿಯುವುದು ನಿಜವೆ? ನೀವು ಓದಿದ ಹಾಗೆಯೇ ಆಯಿತು, ಸುಮ್ಮನಿರಿ" ಎಂದು ಅವಳು ನೊಂದುನುಡಿದ ಮಾತು ಅವರಿಗೆ ಚುಚ್ಚುವಂತಾಗಿ ಅವರು ಎಲ್ಲಿಯಾದರೂ ಹೋಗಿ ವಿದ್ಯೆಯನ್ನು ಕಲಿತು ಬಂದಲ್ಲದೆ ನಿಮ್ಮ ಮುಖವನ್ನು ನೋಡೆವೆಂದು ನಮಸ್ಕರಿಸಿ ಹೊರಡಲನುವಾದರು. ಆಗ ಕಾಶ್ಯಪಿ ಪರದೇಶದಲ್ಲಿ ಮಕ್ಕಳು ಓಡಾಡಿ ಬಳಲುವರಲ್ಲ ಎಂದು ಕರುಣೆ

ಯಿಂದ ಮಗಧ ದೇಶದ ಸುಬಲ ಮಹಾರಾಜನಲ್ಲಿ ಮಂತ್ರಿಯೂ ತನ್ನ ನಾದಿನಿಯ ಗಂಡನೂ ಆದ ಸೂರ್ಯಮಿತ್ರನಿಗೆ ಒಂದು ಓಲೆಯನ್ನು ಬರೆಯಿಸಿ, ಮಕ್ಕಳ ಕೈಗೆ ಕೊಟ್ಟು ಅವರಿಗೆ ತಕ್ಕ ಬುದ್ಧಿಯ ಮಾತನ್ನು ಹೇಳಿ ಕಳಿಸಿದಳು. ಹೀಗೆ ಅವರಿಬ್ಬರೂ ಕೆಲವು ದಿವಸ ಪ್ರಯಾಣಮಾಡಿ ಮಗಧದೇಶದ ರಾಜಧಾನಿಯಾದ ರಾಜಗೃಹಕ್ಕೆ ಬಂದರು. ತಮ್ಮ ಮಾವನಾದ ಸೂರ್ಯಮಿತ್ರನ ಮನೆಗೆ ಬಂದು ಮಾವನೆದುರಿಗೆ ಅಭಿವಾದನ ಮಾಡಿ ಅವರು ನಿಂತುಕೊಂಡರು. ಸೂರ್ಯಮಿತ್ರನು ಅಚ್ಚರಿಗೊಂಡು "ನೀವು ಯಾವ ದೇಶದವರು ? ಯಾರ ಮಕ್ಕಳು ? ಎಲ್ಲಿಗೆ ಹೋಗುತ್ತಿದ್ದೀರಿ? ಇಲ್ಲಿಗೆ ಬರಲೇನು ಕಾರಣ?" ಎಂದು ಕೇಳಲು ಅವರಿಬ್ಬರೂ ಹೇಳಬೇಕಾದ್ದನ್ನು ಹೇಳಿ ತಾಯಿ ತಮಗೆ ಇತ್ತ ಓಲೆಯನ್ನು ಅವನಿಗೆ ಕೊಟ್ಟರು. ಸೂರ್ಯಮಿತ್ರ ಅದನ್ನು ಓದಿಕೊಂಡು ಅವರು ತನ್ನ ಅಳಿಯಂದಿರೆಂದು ತಿಳಿದು, ತಾನು ಯಾರೆಂಬುದನ್ನು ಅವರಿಗೆ ಹೇಳಿದರೆ ಕೆಲಸ ಕೆಡುವುದೆಂದು ಭಾವಿಸಿ, ಏನೂ ತಿಳಿಯದವನಂತೆ "ಈ ಓಲೆ ಬಹು ವಿಚಿತ್ರವಾಗಿದೆ, ಕಾಶ್ಯಪಿ ಯಾರೋ ಸೋಮಶರ್ಮನು ಯಾರೋ ನನಗೆ ಗೊತ್ತಿಲ್ಲ. ನಾನು ನಿಮ್ಮ ಮಾವನಾದ ಸೂರ್ಯಮಿತ್ರನಲ್ಲ. ಆದರೆ ನಿಮಗೆ ಓದಲು ಮನಸ್ಸಿದ್ದರೆ ನಿಮ್ಮನ್ನು ಓದಿಸಿ ಪಂಡಿತರಾಗಿ ಮಾಡಬಲ್ಲೆ. ಹೊಟ್ಟೆಬಟ್ಟೆಗೆ ನಿಮಗೆ ತೋರಿದಂತೆ ಮಾಡಿರಿ" ಎಂದು ಹೇಳಿಬಿಟ್ಟನು. ಅಗ್ನಿಭೂತಿ ವಾಯುಭೂತಿಗಳು ಈ ಮಾತಿಗೆ ಒಪ್ಪಿ ಹೇಗಾದರೂ ಅಕ್ಷರ ಕಲಿತರೆ ಸಾಕೆಂದು ಅವನ ಬಳಿ ನಿಂತರು. ಸೂರ್ಯಮಿತ್ರನು ಅತಿ ನಿಷ್ಠುರನಂತೆ ನಡೆಯುತ್ತ, ಅವರು ಬೇಡಿ ತಂದ ಕೂಳಿಗೆ ಉಪ್ಪನ್ನಾಗಲಿ ಎಣ್ಣೆಯನ್ನಾಗಲಿ ಸೇರಿಸಕೂಡದೆಂದು ತನ್ನ ಮನೆಯ ಅಡಿಗೆಯವರಿಗೆ ಕಟ್ಟು ಮಾಡಿದನು. ನಿರ್ಬಂಧಕ್ಕೆ ಸಿಕ್ಕಿ ಅವರು ಕಷ್ಟಪಟ್ಟು ಓದಲು ಆರಂಭಿಸಿದರು.

ಕೆಲವು ವರ್ಷಗಳು ಹೀಗೆ ಓದಿ ಆ ಅಣ್ಣತಮ್ಮಂದಿರು ವೇದ ವೇದಾಂತ ತರ್ಕ ವ್ಯಾಕರಣವೇ ಮೊದಲಾದ ಎಲ್ಲ ವಿದ್ಯೆಗಳಲ್ಲೂ ಪಾರಂಗತರಾದರು. ಅಣ್ಣನು ಋಜುಸ್ವಭಾವದವನಾಗಿ ವಿನಯಶಾಲಿಯಾದನು; ತಮ್ಮನು ವಕ್ರಬುದ್ಧಿಯುಳ್ಳವನೂ ಗರ್ವಿಷ್ಠನೂ ಆದನು. ಅವರಿಬ್ಬರೂ ಒಂದು ದಿನ ಸೂರ್ಯಮಿತ್ರನನ್ನು ಕಂಡು "ನಿಮ್ಮ ದಯೆಯಿಂದ ನಾವು ಎಲ್ಲ ಶಾಸ್ತ್ರಗಳನ್ನೂ ತಿಳಿದೆವು, ನಿಮ್ಮ ಉಪಕಾರವನ್ನು ನಾವು ಹೇಗೆ ತೀರಿಸಿಯೇವು ? ಪರದೇಸಿಗಳಾದ ನಮ್ಮನ್ನು ವಿದ್ಯೆ ಕಲಿಸಿ ಮಾನ್ಯರನ್ನಾಗಿ ಮಾಡಿದಿರಿ; ನಾವು ನಿಮ್ಮ ಮತ್ತು ನಿಮ್ಮ ಪತ್ನಿ

ಸುದೇವಿಯ ಮಕ್ಕಳಾಗಿದ್ದೇವೆ." ಎಂದು ಬಿನ್ನವಿಸಿ, ಕೃತಜ್ಞತೆಯನ್ನು ಸೂಚಿಸಿ ಬೀಳ್ಕೊಂಡು ಹೊರಡಲನುವಾದರು. ಆಗ ಸೂರ್ಯಮಿತ್ರ ತಾನು ಯಾರೆಂಬುದನ್ನು ಅವರಿಗೆ ತಿಳಿಯಪಡಿಸುವ ಉದ್ದೇಶದಿಂದ ಅವರಿಗೆ ಮಜ್ಜನ ಮಾಡಿಸಿ, ಉಡಲು ತೊಡಲು ವಸ್ತ್ರಾಭರಣಗಳನ್ನು ಕೊಟ್ಟು, ಸಹಪಂಕ್ತಿಯಲ್ಲಿ ಔತಣ ಮಾಡಿಸಿ, ಪಚ್ಚೆಕಪ್ಪುರದ ತಾಂಬೂಲವನ್ನು ಕೊಟ್ಟು, ಅವರನ್ನು ನಡೆಗತ್ತೆಗಳ ಮೇಲೆ ಏರಿಸಿ, ಅವರ ಜೊತೆಗಾಗಿ ಹಲವು ಸೇವಕರನ್ನು ನಿಯಮಿಸಿ, ಅವರನ್ನು ಕೊಂಚ ದೂರ ಬಿಟ್ಟು ಬರುವುದಕ್ಕಾಗಿ ಸಂಗಡ ಬಂದು, ಪಟ್ಟಣದ ಉದ್ಯಾನದಲ್ಲಿ ನಿಂತು "ಹಬ್ಬದ ದಿನದಲ್ಲಿ ಕೂಡ ನಿಮಗೆ ನಾನು ಕೊಂಚ ಅನ್ನ ಹಾಕಲಿಲ್ಲ; ಒಂದು ಮಿಳ್ಳೆ ಎಣ್ಣೆಯನ್ನು ಕೂಡ ಬಡಿಸಲಿಲ್ಲ. ನಿಮ್ಮಲ್ಲಿ ನಿರ್ದಯನಾಗಿ ನಡೆದುಕೊಂಡೆ; ನಾನು ನಿಮಗೆ ಮಾವ; ನಿಜವಾಗಿಯೂ ನೀವು ನನ್ನ ತಂಗಿಯ ಮಕ್ಕಳು. ಮೊದಲೇ ಇದನ್ನು ನಿಮಗೆ ನಾನು ಹೇಳಿದ್ದರೆ ನನ್ನ ಮಾತನ್ನು ನೀವು ಮೀರಬಹುದೆಂದು ಹೇಳಲಿಲ್ಲ. ತಂದೆತಾಯಿಗಳು ನಿಮ್ಮ ಬಾಲ್ಯದಲ್ಲಿ ಬಡಿದು ಬೈದು ಹೇಳಿದರೂ ಅವರ ಮಾತನ್ನು ಕೇಳದ ನೀವು ನನ್ನ ಮಾತಿನಂತೆ ನಡೆಯುವುದು ಅಸಂಭವವೆಂದು ನಾನು ನಿಮ್ಮನ್ನು ವಂಚಿಸಿ ಓದಿಸಬೇಕಾಯಿತು. ನನ್ನ ನಿಮ್ಮ ಬಾಂಧವ್ಯವನ್ನು ಮರೆಯದಿರಿ" ಎಂದು ಬುದ್ಧಿ ಹೇಳಿ ಹರಸಿಹೋದನು.

ಈ ಮಾತನ್ನು ಕೇಳಿ ವಾಯುಭೂತಿಗೆ ತಡೆಯಲಾಗದ ಕೋಪ ಬಂತು. "ತಾಯ ಒಡಹುಟ್ಟಿದವನು, ಮಾವ ಎಂದು ಹತ್ತಿರ ಬಂದರೆ ನಮ್ಮನ್ನು ಉಪೇಕ್ಷೆಮಾಡಿ, ನಾಯಿ ಕೂಡ ಹೊಗದೆಡೆಗೆ ನಮ್ಮನ್ನು ಕಳಿಸಿ ತಿರುಪೆಬೇಡಿಸಿ, ಬದುಕಿದ್ದಂತೆಯೇ ಕೊಂದು, ಈಗ ಕಿವಿಯಲ್ಲಿ ಬಾಯುಪಚಾರ ಹೇಳುವುದಕ್ಕೆ ಬಂದ; ಇವನು ಮಾವನಂತೆ, ನಾವು ಅಳಿಯಂದಿರಂತೆ; ನಮಗೂ ಅವನಿಗೂ ನಂಟತನವಂತೆ ಹಸಿವಾಗಿದೆಯೇ, ಬಾಯಾರಿದ್ದೀರಾ, ಬಳಲಿದ್ದೀರಾ ಎಂದು ಒಂದು ದಿನವಾದರೂ ನಮ್ಮನ್ನು ಕೇಳಿದವನಲ್ಲ; ಹೋಗಲಿ ಬಿಸಿಲಲ್ಲಿದ್ದರೆ ನೆರಳಿಗಾದರೂ ಬನ್ನಿ ಎಂದು ಕರೆದವನಲ್ಲ" ಎಂದು ನಿಷ್ಠುರದ ನುಡಿಗಳಿಂದ ಕಿಡಿಗುಟ್ಟಿದ ವಾಯುಭೂತಿ. ಅಣ್ಣ ಅಗ್ನಿಭೂತಿ ಅವನನ್ನು ಗದರಿಸಿಕೊಂಡು "ಬುದ್ಧಿಯಿಲ್ಲದೆ ಬಾಯಿಗೆ ಬಂದಂತೆ ಕಡೆಗಣಿಸಿ ಮಾತಾಡಬಾರದು. ಗುರುವನ್ನು ನಿಂದಿಸುವುದು ಪೌರುಷವೆ? ಕೃತಘ್ನರಾದರೆ ನಮಗೆ ಇಹವೂ ಇಲ್ಲ ಪರವೂ ಇಲ್ಲ" ಎಂದು ಸಮಾಧಾನಮಾಡಲು ಪ್ರಯತ್ನಿಸಿದನು. ವಾಯುಭೂತಿ

ತಿರುಗಿ ಮಾವನನ್ನು ನಿಂದಿಸಿದ. ತನ್ನ ಮಾವನು ಕೇವಲ ಪಾಪಕರ್ಮಿ ಎಂಬ ಭಾವನೆಯನ್ನು ಬಿಡಲಿಲ್ಲ. ಈ ದುರ್ಭಾವನೆಯನ್ನು ಮನದಲ್ಲಿಯೇ ಪೋಷಿಸಿ ಬೆಳಸಿಕೊಂಡನು. ಇಬ್ಬರೂ ಪಯಣದಮೇಲೆ ಪಯಣಬಂದು ತಮ್ಮ ತಾಯಿಯನ್ನು ಕಂಡು ನಮಸ್ಕರಿಸಿ ಆಕೆಯ ಮನಸ್ಸಿಗೆ ಸಂತಸವನ್ನುಂಟುಮಾಡಿದರು- ಆಮೇಲೆ ದೊರೆಯಾದ ಅತಿಬಲನ ಸಭೆಗೆ ಹೋಗಿ ಅಲ್ಲಿ ತಮ್ಮ ಪಾಂಡಿತ್ಯವನ್ನು ಮೆರೆದು ತಮ್ಮ ಹಿಂದಿನ ಪದವಿಯನ್ನು ಮರಳಿ ಪಡೆದು ಸುಖವಾಗಿದ್ದರು.

ಇತ್ತ ರಾಜಗೃಹದಲ್ಲಿ ಸುಬಲ ಮಹಾರಾಜನು ಮಂತ್ರಿಯೊಡನಿದ್ದು ಸ್ನಾನಕ್ಕೆ ಹೋಗುವಾಗ ತನ್ನ ಬೆರಳಲ್ಲಿದ್ದ ರತ್ನದುಂಗರವನ್ನು ತೆಗೆದು ಅದನ್ನು ಇಟ್ಟು ಕೊಂಡಿರುವಂತೆ ಆಪ್ತನಾದ ಸೂರ್ಯಮಿತ್ರನಿಗೆ ಕೊಟ್ಟನು. ಅವನು ಅದನ್ನು ತನ್ನ ಬೆರಳಿಗೆ ಹಾಕಿಕೊಂಡನು. ಮರುದಿನ ಬೆಳಗ್ಗೆ ತೋಟದ ತಾವರೆ ಕೊಳಕ್ಕೆ ಬಂದು ಮಿಂದು ಸೂರ್ಯನಿಗೆ ಅರ್ಘ್ಯಕೊಡುತ್ತಿರುವಾಗ ಅವನ ಬೆರಳಿಂದ ಜಾರಿ ಉಂಗುರ ನೀರಲ್ಲಿ ಬಿತ್ತು. ಹಾಗೆ ಅದು ನಷ್ಟವಾದದ್ದು ಅವನಿಗೆ ಆಗ ತಿಳಿಯಲೇ ಇಲ್ಲ. ಮನೆಗೆ ಬಂದು ಏತಕ್ಕೊ ಕೈ ನೋಡಿಕೊಂಡಾಗ ಉಂಗುರವಿಲ್ಲದ್ದನ್ನು ಕಂಡು ಗಾಬರಿಯಾಗಿ ಅವನಿಗೆ ವ್ಯಥೆಯಾಯಿತು. ಕಂಡ ಪರಿಜನರನ್ನು ಕೇಳಿ ಅಲ್ಲಿ ಇಲ್ಲಿ ಹುಡುಕಿದರೂ ಉಂಗುರ ಸಿಕ್ಕಲಿಲ್ಲ. ರಾಜನಿಗೆ ತನ್ನಲ್ಲಿದ್ದ ನಂಬಿಕೆ ಹೋಗುವುದಲ್ಲ ಎಂದು ಬಹುವಾಗಿ ಚಿಂತಿಸಿದನು. ಜೋಯಿಸನನ್ನು ಪ್ರಶ್ನೆ ಹೇಳುವಂತೆ ಅವನು ಬೇಡಿಕೊಂಡನು. ಆ ಜೋಯಿಸ ಹಾಗೆ ಹೀಗೆ ತಲೆಯಲ್ಲಾಡಿಸಿ ಪಂಚಾಂಗ ತೆಗೆದು ಮಂತ್ರಹಾಕಿ ಏನೂ ಗೊತ್ತಾಗದೆ, ಹೇಳದಿದ್ದರೆ ತನ್ನ ಗೌರವ ಹೋಗುತ್ತದೆಂದು ಏನನ್ನೋ ಹೇಳಿಬಿಟ್ಟನು. ಇವನು ಅಜ್ಞಾನಿಯೆಂದು ಸೂರ್ಯಮಿತ್ರ ತಿಳಿದು, ಇವನನ್ನು ತೆಗಳುವುದು ವ್ಯರ್ಥವೆಂದು ಹೊಗಳಿ ಮನೆಯಿಂದ ಹೊರಟು ಹಾಗೆಯೇ ತಿರುಗಾಡುತ್ತಾ ಹುಡುಕುತ್ತಾ ಬಂದನು.

ಉದ್ಯಾನದಲ್ಲಿ ನಡೆದು ಬರುತ್ತ ಸ್ವಲ್ಪ ದೂರದಲ್ಲಿ ಸ್ಫಟಿಕದ ಹಾಸುಬಂಡೆಯ ಮೇಲೆ ಕುಳಿತಿದ್ದ ಸುಧರ್ಮಾಚಾರ್ಯರೆಂಬ ಅವಧಿಜ್ಞಾನಿಗಳನ್ನು ಸೂರ್ಯಮಿತ್ರ ಕಂಡು ಉಂಗುರದ ವಿಚಾರವಾಗಿ ಅವರನ್ನು ಕೇಳಬೇಕೆಂದು ಅವರ ಬಳಿಗೆ ಬಂದನು. ಆ ಜೈನಯತಿ ಅವನನ್ನು ನೋಡಿದ ಕೂಡಲೇ ಅವನು ಬಂದದ್ದೇಕೆಂಬುದನ್ನು ತಮ್ಮ ದಿವ್ಯಜ್ಞಾನದಿಂದ ತಿಳಿದು ಸುಬಲರಾಜನು ಕೊಟ್ಟ ಉಂಗುರವನ್ನು ನೀಗಿಕೊಂಡು ಇಲ್ಲಿಗೇಕೆ ಬಂದೆ? ಎಂದು ಕೇಳಿದರು. ಸೂರ್ಯ

ಮಿತ್ರ ಅಚ್ಚರಿಗೊಂಡು ನಮಸ್ಕರಿಸಿ "ನಿಮ್ಮಡಿ, ಹೇಳಿರಿ, ಉಂಗುರ ಎಲ್ಲಿ ಕಳೆದುಹೋಯಿತು? ಸಿಕ್ಕುತ್ತದೆಯೋ ಇಲ್ಲವೋ" ಎನ್ನಲು, ಅವರು "ನಾಳೆ ಬೆಳಗ್ಗೆ ಸೂರ್ಯೋದಯವಾದಾಗ ಸಿಕ್ಕುತ್ತದೆ. ನೀನು ಮಿಾಯುವಾಗ ನಿನ್ನ ಬೆರಳಿಂದ ಕಳಚಿ ನೀರಲ್ಲಿ ಬಿದ್ದು ತಾವರೆಯ ಮೊಗ್ಗಿನಮೇಲೆ ಸಿಕ್ಕಿಕೊಂಡಿದೆ ಆ ಉಂಗುರ" ಎಂದು ಹೇಳಿದರು. ಸೂರ್ಯಮಿತ್ರ ಕೊಳದ ಸುತ್ತ ಕಾವಲನ್ನು ಇಟ್ಟು, ತಾನೂ ಅಲ್ಲಿಯೇ ರಾತ್ರಿಯೆಲ್ಲಾ ಕಾಯುತ್ತ ಕುಳಿತನು. ಬೆಳಗಾಯಿತು. ನೀರಿನಮೇಲೆ ಎದ್ದು ಅರಳಿದ ತಾವರೆಯಲ್ಲಿ ಆ ರತ್ನದುಂಗುರ ತೊಳಗುತ್ತಿತ್ತು. ಸೂರ್ಯಮಿತ್ರನ ಸಂತೋಷಕ್ಕೆ ಪಾರವಿಲ್ಲ. ಕೂಡಲೇ ಅವನು ಅದನ್ನು ತೆಗೆದುಕೊಂಡು ರಾಜನಿಗೆ ಒಪ್ಪಿಸಿ ಮನೆಗೆ ಹೋಗಿ ಹೆಂಡತಿಗೆ ನಡೆದದ್ದನ್ನೆಲ್ಲ ತಿಳಿಸಿ, ಆ ಯತಿಯಲ್ಲಿಗೆ ಹೋಗಿ ಅಪೂರ್ವವಾದ ಅವನ ಜೋಯಿಸ ವಿದ್ಯೆಯನ್ನು ಕಲಿತುಬರುತ್ತೇನೆಂದೂ ಮನೆಯ ಕಡೆ ನೋಡಿಕೊಳ್ಳುತ್ತಿರಬೇಕೆಂದೂ ಅವಳಿಗೆ ಹೇಳಿ, ಸುಧರ್ಮಾಚಾರ್ಯನ ಹತ್ತಿರಕ್ಕೆ ಬಂದು ತನಗೆ ವಿದ್ಯೋಪದೇಶಮಾಡುವಂತೆ ಅವರನ್ನು ಪ್ರಾರ್ಥಿಸಿದನು. "ಈ ವಿದ್ಯೆ ನನ್ನಂಥ ಸಂನ್ಯಾಸಿಗಲ್ಲದೆ ಇತರರು ಕಲಿಯಲು ಸಾಧ್ಯವಿಲ್ಲ. ಕಲಿಯಲು ಇಷ್ಟವಿದ್ದರೆ, ನೋಡು," ಎಂದನು ಆಚಾರ್ಯ. ದ್ವಿಜನಾದ ನಾನು ದಿಗಂಬರನಾಗಿ ಮಲಧಾರಿ ವ್ರತವನ್ನು ಹೇಗೆ ತಾನೆ ಧರಿಸಲಿ ಎಂದು ಚಿಂತಿಸಿ, ಸೂರ್ಯಮಿತ್ರ ಈ ವಿದ್ಯೆಯನ್ನು ಕಲಿಯಲೇ ಬೇಕೆಂದು ನಿಶ್ಚಯಿಸಿ ದೀಕ್ಷೆಯನ್ನು ದಯಪಾಲಿಸಿರೆಂದು ಬೇಡಿದನು. ದೀಕ್ಷೆಯಾದನಂತರ ಅವನು ಗುರುಗಳು ಹೇಳಿದ್ದನ್ನೆಲ್ಲ ಬೇಗ ಬೇಗನೆ ಕಲಿತು ಜೋಯಿಸವನ್ನು ಕಲಿಸಿರೆಂದು ಕಾತುರದಿಂದ ಕೇಳುತ್ತಲೇ ಬಂದನು. ಅದನ್ನು ಕಲಿ, ಇದನ್ನು ಕಲಿ ಎಂದು ಹೇಳುತ್ತಾ ಗುರುಗಳು ಜೈನ ಸಿದ್ಧಾಂತವನ್ನೆಲ್ಲ ಅವನು ಕಲಿಯುವಂತೆ ಮಾಡಿದರು; ಜೊತೆಗೆ ತಪಸ್ಸಿನ ವಿಧಾನವನ್ನು ಅವನಿಗೆ ಬೋಧಿಸಿದರು. ಸೂರ್ಯಮಿತ್ರನಿಗೆ ಜೈನತತ್ವದಲ್ಲಿ ನಂಬಿಕೆ ಬಂತು; ಕಪಟದ ಯತಿ ದಿಟದ ಯತಿಯಾದನು. ಗುರುಗಳನ್ನು ಅಗಲದೆ ಕಠೋರ ನಿಯಮ ನಿಷ್ಠಿತನಾಗಿ ತಪಸ್ಸಿನಲ್ಲಿ ಸಿದ್ಧಿಯನ್ನು ಪಡೆದು ಅವಧಿಜ್ಞಾನಕ್ಕೆ ಒಡೆಯನಾದನು. ಆಗ ಗುರುಗಳು ಸಂತುಷ್ಟರಾಗಿ "ಇದು ನೀನು ಬಯಸಿದ ವಿದ್ಯೆ; ಈಗ ನಿನ್ನ ವಶವಾಯಿತು" ಎಂದು ಶಿಷ್ಯನನ್ನು ಹೊಗಳಿದರು. 'ಎಲ್ಲಾ ನಿಮ್ಮ ಪ್ರಸಾದ' ಎಂದು ಸೂರ್ಯಮಿತ್ರ ಗುರುಗಳೊಡನೆ ಸಂಚಾರಮಾಡುತ್ತ

ಉಜ್ಜಯಂತಗಿರಿಗೆ ಬಂದನು. ಅಲ್ಲಿ ಸುಧರ್ಮಾಚಾರ್ಯರು ತಪಸ್ಸು ಮಾಡಿ ಕರ್ಮವನ್ನು ನಿರ್ಮೂಲಿಸಿ ಕೈವಲ್ಯಕ್ಕೆ ಸಂದರು.

ಬಳಿಕ ಸೂರ್ಯಮಿತ್ರಮುನಿ ಅನಶನವೇ ಮುಂತಾದ ಅನೇಕ ವ್ರತಗಳನ್ನು ತಾಳಿ, ಕಾಯಕ್ಲೇಶವೇ ಮುಂತಾದ ತಪಸ್ಸುಗಳನ್ನು ಆಚರಿಸಿ ಮೈಯೆಲ್ಲ ಕೃಶವಾಗಿ ಬಡಕಲಾದನು. ಏಕವಿಹಾರಿಯಾಗಿ ಸಂಚಾರಮಾಡುತ್ತಾ ಅವನು ಕೌಶಂಬೀನಗರಕ್ಕೆ ಬಂದು ಉದಯವ್ರಾತಪರ್ವತದ ಸಿದ್ಧಕ್ಷೇತ್ರಗಳನ್ನು ವಂದಿಸುತ್ತಾ, ಉಪವಾಸದ ಪಾರಣೆಗಾಗಿ ನಗರದಲ್ಲಿ ಓಡಾಡುತ್ತಾ, ಅಗ್ನಿಭೂತಿಯ ಮನೆಗೆ ಬಂದನು. ಅವನನ್ನು ಕಂಡ ಕೂಡಲೇ ಅಗ್ನಿಭೂತಿ ತನ್ನ ಗುರುವೂ ಮಾವನೂ ಆದ ಸೂರ್ಯಮಿತ್ರನೆಂದು ಗುರುತುಹಿಡಿದು ಅವನನ್ನು ಮನೆಗೆ ಬರಮಾಡಿಕೊಂಡು ಭಕ್ತಿಯಿಂದ ಸತ್ಕರಿಸಿ ಮುನಿಗೆ ಆಹಾರಪಾನವನ್ನು ಮಾಡಿಸಿದನು. ಅವರು ಹರಸಿ ಹೋಗುವಾಗ, ಅಗ್ನಿಭೂತಿ 'ನಿಮ್ಮ ಕಿರಿಯ ಶಿಷ್ಯ ವಾಯುಭೂತಿಯನ್ನು ಕಂಡು ಹರಸಿರಿ' ಎಂದು ಹೇಳಿ ಅವರನ್ನು ತಮ್ಮನ ಮನೆಗೆ ಕರೆತಂದನು. ವಾಯುಭೂತಿ ಮುನಿಯನ್ನು ನೋಡಿ, ತಿಳಿದೂ ತಿಳಿಯದವನಂತೆ ಕುಳಿತ ಪೀಠದಿಂದ ಏಳದೆ, ವಿಪ್ರಸಭೆಗೆ ಉಪನ್ಯಾಸ ಮಾಡುತ್ತಾ ಗರ್ವದಿಂದ ಉದಾಸೀನನಾಗಿದ್ದನು. ಇದನ್ನು ಕಂಡು ಅಣ್ಣನಿಗೆ ತುಂಬ ವ್ಯಾಕುಲವಾಯಿತು. ನಮ್ಮ ಮಾವನೂ ಉಪಾಧ್ಯಾಯನೂ ಮುನಿಯೂ ಆದ ಇವರು ಬಂದರೆ ಹೀಗೆ ಕಡೆಗಣಿಸುವುದು ಸರಿಯಲ್ಲವೆಂದು ತಮ್ಮನಿಗೆ ಅಗ್ನಿಭೂತಿ ಹೇಳಿದನು ವಾಯುಭೂತಿ ಸೂರ್ಯಮಿತ್ರನ ಮುಖವನ್ನು ನೋಡಿ

ಮನೆಯೊಳ್ ಮೈಮೆಗೆ ಬಾತುಕೊಂಡು ಸಿರಿಯೊಳ್ ಕಣ್ಗಾಣದೊಡ್ಡಯ್ಸುವಂ
ದಿನ ನೀಮಾರ್ಗಲೆ ನಿಮ್ಮನಾವಱಿಯೆವೆಂದೆಮ್ಮಂ ತೊಡಂಕಿಕ್ಕುವಂ ।
ದಿನ ಭಿಕ್ಷಾನ್ನಮನಿಕ್ಕುವಲ್ಲಿ ಸತಿಯುಂ ಬೇಡೆಂದು ಕಣ್ಕೆತ್ತುವಂ
ದಿನ ಸೊರ್ಕಕ್ಕಟ ಮುಕ್ಕುವೋಗಿ ಕಡೆಯೊಳ್ ಭೈಕ್ಷಕ್ಕೆ ಪಕ್ಕಾದಿರೇ ॥

ಎಂದು ಕೋಪದಿಂದಲೂ ಪರಿಹಾಸದಿಂದಲೂ ಮೂದಲಿಸಿ

ನೀಂ ಬೇಡಾದೊಡೆ ನಿನ್ನ ಕು
ಟುಂಬಿನಿಯುಂ ಕಯ್ಪೆಸೊರೆಯ ಕುಡಿಯೇಂ ಮಿಡಿಯೇ
ನೆಂಬಂತೆ ದರಸಿಯೋದಳೆ
ದೇಂ ಬಳ್ಪಳ ಬಳದ ಬಂಧುತನಮಿಸಿದಾಯ್ತೋ ॥

ಎಂದು ಅತ್ತೆಯನ್ನೂ ಅವರ ನಂಟತನವನ್ನೂ ಹೀಯಾಳಿಸಿ

ತಿರಿದುಂಡು ಕಚ್ಚುಟವುನು
ಟ್ಟು ರಚ್ಚೆಯೊಳ್ ಪಟ್ಟು ಮುಟ್ಟುಗೆಟ್ಟುಬ್ಬೆಗಮು
ಬ್ಬರಿಸಿ ನಮೆದುದನದಂ ಮಱತೆ
ದಿರೆ ಮಾವಂ ದೇವನಾದೊನೇ ನಮುಗೀಗಳ್

ಎಂದು ಅಣ್ಣನಿಗೂ ಚುಚ್ಚುಮಾತಾಡಿ, ಪಡೆಯಲಾಗದ ಉತ್ತಮ ಕುಲವನ್ನು ಪಡೆದು ಅದನ್ನು ಬಿಟ್ಟು ಸವಣನಾದದ್ದು ನಿನ್ನ ಯೋಗ್ಯತೆಯನ್ನು ತಿಳಿಯಲು ಸಾಕೆಂದು ಆ ಮುನಿಮಾವನನ್ನು ಬೈದನು. ಇದನ್ನೆಲ್ಲ ಕೇಳಿಯೂ ಆ ಮುನಿ ಸಿಟ್ಟಾಗದೆ ಕ್ಷಮೆಯನ್ನೇ ಪರಿಭಾವಿಸಿ,ಸಮಾಧಾನಚಿತ್ತನಾಗಿ ಅಲ್ಲಿಂದ ಹೊರಟು ಉದಯವಾತಪರ್ವತದ ಕಡೆಗೆ ನಡೆಯಲನುವಾದಾಗ, ಅಗ್ನಿಭೂತಿ ಅವರ ಹಿಂದೆಯೇ ಹೋಗಿ "ತಮ್ಮನ ಮನೆಗೆ ನಿಮ್ಮನ್ನೊಡಗೊಂಡು ಹೋಗಿ ಅನ್ಯಾಯವಾಗಿ ನಿಮ್ಮ ಮನಸ್ಸಿಗೆ ಬೇಸರವನ್ನು ಮಾಡಿದೆ. ಈ ಪಾಪಕ್ಕೆ ಪ್ರಾಯಶ್ಚಿತ್ತವಾಗಿ ನನಗೆ ಜಿನದೀಕ್ಷೆಯನ್ನು ಕೊಡಿ" ಎಂದು ಬೇಡಿ, ಅವರ ಸಮಕ್ಷದಲ್ಲಿ ಯತಿಯಾಗಿ,ಅವರೊಡನೆ ಪರಿವ್ರಾಜಕನಾಗಿ ನಡೆಯುತ್ತ ಅಂಗದೇಶದ ಚಂಪಕಾನಗರಕ್ಕೆ ಬಂದನು. ಅಲ್ಲಿನ ಉದ್ಯಾನವನದ ನಾಗಮುಂಟಪದಲ್ಲಿ ಇಬ್ಬರೂ ತಂಗಿ ಆ ದಿವಸ ಉಪವಾಸವಿದ್ದರು. ಮರುದಿನ ಅಗ್ನಿಭೂತಿ ಗುರುವಿನನುಮತಿಯಿಂದ ಭಿಕ್ಷಕ್ಕಾಗಿ ನಗರಕ್ಕೆ ಹೊರಟನು.

ಬರುತ್ತ ದಾರಿಯಲ್ಲಿ ನೇರಳೆ ಮರದ ಕೆಳಗೆ ಉದುರಿದ ನೇರಳೆ ಹಣ್ಣುಗಳನ್ನು ತಡವರಿಸಿ ಆರಿಸಿ ಆರಿಸಿ ತಿನ್ನುತ್ತಿದ್ದ ಹುಟ್ಟುಗುರುಡಿ ಹೊಲೆಯರ ಹುಡುಗಿಯೊಬ್ಬಳನ್ನು ಅವನು ಕಂಡನು. ಅವಳ ಹೊಲಸು ನಾತಕ್ಕೆ, ಹುಣ್ಣುಗಳಿಂದ ಸುರಿವ ರಕ್ತಕ್ಕೆ, ಹೇನು ತುಂಬಿದ ತಲೆಗೆ ಅಸಹ್ಯಪಟ್ಟು ಕೆಲವರು ಅಯ್ಯೊ ಎಂದು ಮರುಗಿದರೆ, ಮತ್ತೆ ಕೆಲವರು ಅವಳನ್ನು ಹೊಡೆದು ಬಡಿದು ಥೂ ಎಂದು ಉಗುಳುತ್ತಿದ್ದರು. ಇದನ್ನು ನೋಡಿ ಅಗ್ನಿಭೂತಿಗೆ ಮನಕರಗಿತು ಆ ದುಃಖ ಜೀವಿಯಾದ ಕೂಸಿನಮೇಲೆ ಏಕೋ ಸೋದರ ಪ್ರೀತಿಯುಂಟಾಗಿ ತನ್ನ ಕುಂಚದ ಕಾವಿನಿಂದ ನೇರಲೆ ಹಣ್ಣುಗಳನ್ನು ನೂಕಿ ತಂದು ಹುಡುಗಿಯ ಮುಂದೆ ರಾಶಿ ಮಾಡಿದನು. ಇದರಿಂದ ಭಿಕ್ಷೆಗೆ ವಿಘ್ನವಾಗಿ ನಗರಕ್ಕೆ ಹೋಗದೆ ನೇರವಾಗಿ ತನ್ನ ಬೀಡುದಾಣಕ್ಕೆ ಅವನು ಹಿಂದಿರುಗಿದನು.

ಅವನು ಭಿಕ್ಷವಿಲ್ಲದೆ ಬರಿಗೈಯಲ್ಲಿ ಬಂದದ್ದನ್ನು ನೋಡಿ ಸೂರ್ಯಮಿತ್ರ ಅವಧಿಜ್ಞಾನದಿಂದ ಆ ಹೊಲೆಯರ ಕೂಸಿನ ವೃತ್ತಾಂತವನ್ನೆಲ್ಲ ತಿಳಿದು ಅಗ್ನಿ ಭೂತಿಗೂ ಹೇಳಿದನು. ಅಗ್ನಿಭೂತಿ ನನಗೆ ಆ ಮಗುವಿನ ಮೇಲೆ ಅಷ್ಟು ಪ್ರೀತಿ ಉಂಟಾದುದಕ್ಕೆ ಕಾರಣವನ್ನು ತಿಳಿಸಿರಿ ಎಂದು ಗುರುಗಳನ್ನು ಕೇಳಿದನು. "ಈ ಕೂಸು ನಿನ್ನ ತಮ್ಮನಾಗಿದ್ದ ವಾಯುಭೂತಿಯ ಜೀವ; ಅಂದು ನನ್ನನ್ನು ತಿರ ಸ್ಕರಿಸಿ ಬೈದ ಪಾಪದಿಂದಲೂ ನಿನ್ನ ಹೆಂಡತಿ ಸೋಮದತ್ತೆಯನ್ನು ಆಸ್ತಿಯನ್ನೆಲ್ಲಾ ಕಸಿದುಕೊಂಡು ಒದೆದು ಮನೆಯಿಂದ ಹೊರಕ್ಕೆ ತಳ್ಳಿದ ಪಾಪದಿಂದಲೂ ಅವನಿಗೆ ಕುಷ್ಠರೋಗ ಬಂದು ಹುಳಿತು ಸತ್ತು, ಕೌಶಂಬಿಪುರದ ದೊಂಬನ ಮನೆಯಲ್ಲಿ ಕತ್ತೆಯಾಗಿ ಹುಟ್ಟಿ ಸತ್ತು, ಆಮೇಲೆ ಹಂದಿಯಾಗಿ ಹೆಣ್ಣಾಯಾಗಿ ಹುಟ್ಟಿ ಸತ್ತು, ಈಗ ಈ ನಗರದಲ್ಲಿ ಈ ನಿಕೃಷ್ಟ ಜನ್ಮವನ್ನು ತಾಳಿದ್ದಾನೆ. ಆದ್ದರಿಂದ ನಿನಗೆ ಹಾಗೆ ಆ ಮಗುವಿನಮೇಲೆ ಅಷ್ಟು ಮೋಹವುಂಟಾಯಿತು. ನಿನ್ನ ಪತ್ನಿ ಸೋಮದತ್ತೆ ಇವನಮೇಲಿನ ಸಿಟ್ಟನಿಂದ ತಿರ್ಯಗ್ಜಾತಿಯಲ್ಲಿ ಹುಟ್ಟಿಬಂದಾದರೂ ಒದೆದ ಅವನ ಕಾಲುಗಳನ್ನು ತಿನ್ನದೆ ಬಿಡೆನೆಂದು, ಪ್ರತಿಜ್ಞೆಮಾಡಿ ಸತ್ತು ಜನ್ಮಾಂತರಗಳಲ್ಲಿ ಸುತ್ತುತ್ತಿದಾಳೆ" ಎಂದು ಸೂರ್ಯಮಿತ್ರ ಉತ್ತರವಿತ್ತು "ನೀನು ಉಪದೇಶ ಮಾಡಿ ವ್ರತಗಳನ್ನು ಕೊಟ್ಟರೆ ಆ ಹೊಲೆಯರ ಕೂಸು ಕೈಕೊಂಡು ಸದ್ಗತಿಯನ್ನು ಹೊಂದುವುದು" ಎಂದು ಹೇಳಿದನು. ಅಗ್ನಿಭೂತಿ ಆ ಮಗುವಿನ ಬಳಿಗೆ ಹೋಗಿ, ಹಿತೋಪದೇಶದಿಂದ ಅದಕ್ಕೆ ಧರ್ಮದಲ್ಲಿ ಅನುರಾಗವುಂಟಾಗುವಂತೆ ಮಾಡಿ, ಅಣು ವ್ರತಗಳನ್ನು ಕೈಕೊಳಿಸಿ, ಹರಸಿ ಬಂದು ಗುರುಗಳೊಡನೆ ಕ್ಷೇತ್ರವಿಹಾರಿಯಾಗಿ ಹೊರಟು ಹೋದನು. ಅದೇ ದಿನವೇ ಆ ಮಗು ಹಾವು ಕಡಿದು ಸತ್ತು ಆ ನಗರದ ದೊರೆ ಚಂದ್ರವಾಹನನ ಪುರೋಹಿತ ನಾಗಶರ್ಮನಿಗೂ ಅವನ ಹೆಂಡತಿ ತ್ರಿವೇದಿಗೂ ಮಗಳಾಗಿ ಹುಟ್ಟಿತು. ಅವಳಿಗೆ ನಾಗಶ್ರೀ ಎಂಬ ಹೆಸರಾಯಿತು. ಹಲವು ವರ್ಷಗಳು ಕಳೆದುವು. ಅವಳು ಚೆನ್ನಾಗಿ ಬೆಳೆದು ಸುಂದರಿಯಾದ ಕನ್ಯೆ ಯಾದಳು.

ಸೂರ್ಯಮಿತ್ರನೂ ಅಗ್ನಿಭೂತಿಯೂ ಎಲ್ಲೆಲ್ಲಿಯೋ ತಿರುಗಾಡುತ್ತಾ ಮತ್ತೆ ಒಂದು ಸಲ ಚಂಪಾಪುರಕ್ಕೆ ಬಂದು ಉದ್ಯಾನದ ಅದೇ ನಾಗಸ್ಥಾನದಲ್ಲಿ ತಂಗಿ ದರು. ನಾಗರಪೂಜೆಗೆಂದು ನಾಗಶ್ರೀ ತನ್ನ ಕೆಳದಿಯರೊಡನೆ ಅಲ್ಲಿಗೆ ಬಂದು ಅಗ್ನಿಭೂತಿಯನ್ನು ನೋಡಿ, ಹಿಂದಿನ ಜನ್ಮದ ನೆನಪು ಮನದಲ್ಲಿ ಸುಳಿದು, ಅವನಿಗೆ

ಗುರುಭಕ್ತಿಯಿಂದ ನಮಸ್ಕರಿಸಿದಳು. ಅಗ್ನಿಭೂತಿಗೂ ಅವಳನ್ನು ಕಂಡಕೂಡಲೇ ಮಿಗಿಲಾದ ಸ್ನೇಹಭಾವವುಂಟಾಯಿತು. ಇದಕ್ಕೆ ಕಾರಣವೇನೆಂದು ಅವನು ಗುರುಗಳನ್ನು ಕೇಳಿದಾಗ ಅವರು ಹಿಂದಿನಂತೆ ವಾಯುಭೂತಿಯ ಜೀವವೇ ನಾಗಶ್ರೀಯಾಗಿದೆಯೆಂದು ಹೇಳಿದರು. ಈ ಮಾತನ್ನು ಕೇಳಿದ ನಾಗಶ್ರೀಯೂ ಜನ್ಮಾಂತರ ವೃತ್ತಾಂತವನ್ನು ತಿಳಿದವಳಾಗಿ ಸೂರ್ಯಮಿತ್ರನಿಗೆ ಭಕ್ತಿಯಿಂದ ಬಾಗಿದಳು. ಆ ಯೋಗಿ ಅವಳಿಗೆ ತತ್ತ್ವೋಪದೇಶ ಮಾಡಿ ಆಕೆಗೆ ಅಯ್ದು ಅಣುವ್ರತಗಳನ್ನು ಕೊಟ್ಟನು. "ನಿನ್ನ ತಂದೆ ಈ ವ್ರತಗಳನ್ನು ತ್ಯಜಿಸು ಎಂದು ಹೇಳಿದರೆ ಅದನ್ನು ಬೇರೆಲ್ಲಿಯೂ ಬಿಡಬೇಡ; ನನ್ನ ಹತ್ತಿರಕ್ಕೆ ಬಂದು ಬಿಡು" ಎಂದು ಎಚ್ಚರಿಕೆಯನ್ನು ಸೂಚಿಸಿದನು. ನಾಗಶ್ರೀ ಗುರುಗಳನ್ನು ವಂದಿಸಿ ಮನೆಗೆ ಬರುವ ಮುನ್ನವೇ ಅವಳ ಕೆಳದಿಯರು ಬಂದು ನಾಗಶರ್ಮನಿಗೆ ನಾಗಶ್ರೀ ವ್ರತವನ್ನು ಕೈಕೊಂಡದ್ದನ್ನು ಹೇಳಿಬಿಟ್ಟರು. ಅವಳು ಮನೆಗೆ ಬಂದಮೇಲೆ ತಂದೆ "ಆ ಜೈನಿಗನಿಂದ ಉಪದೇಶ ಹೊಂದಿ ನನ್ನ ಕುಲವನ್ನು ಹಾಳುಮಾಡಿದೆ. ನನ್ನ ಗೌರವ ಪ್ರತಿಷ್ಠೆಗಳು ಹಾಳಾದುವು; ನಿನಗೇಕೆ ಈ ಕೆಟ್ಟ ಬುದ್ಧಿ ಬಂತು? ಅವರು ಹೇಳಿದ ವ್ರತಗಳನ್ನು ತೊರೆ" ಎಂದು ಮಗಳಮೇಲೆ ಕೋಪಿಸಿಕೊಂಡನು. ನಾಗಶ್ರೀ "ಅವನ್ನು ಅವನ ಬಳಿಯೇ ಬಿಟ್ಟು ಬರೋಣ ಬಾ" ಎಂದು ತಂದೆಯೊಡನೆ ಸೂರ್ಯಮಿತ್ರನಿದ್ದಲ್ಲಿಗೆ ಹೊರಟಳು.

ಹೋಗುವಾಗ ದಾರಿಯಲ್ಲಿ ಶೂಲಕ್ಕೇರಿಸಬೇಕೆಂದು ತಳವಾರ ಒಬ್ಬನನ್ನು ಶ್ಮಶಾನಕ್ಕೆ ಕರೆದುಕೊಂಡು ಹೋಗುತ್ತಿದ್ದನು. ಊರ ಜನರು ಗುಂಪು ಗುಂಪಾಗಿ ಹಿಂದೆ ಹಿಂದೆ ಬರುತ್ತಾ, ಹೊಡೆ ಬಡಿ ಇರಿ ತಿವಿ ಸುಡು ಎಂದು ಕೂಗಿಕೊಳ್ಳುತ್ತಾ ಗಲಾಟೆ ಮಾಡುತ್ತಿದ್ದರು. ಇದೇನೆಂದು ನಾಗಶ್ರೀ ತಂದೆಯನ್ನು ಕೇಳಿದಳು. ಅವನು ತಳವಾರನಿಂದ ವಿಷಯಗಳನ್ನೆಲ್ಲ ತಿಳಿದು "ಇವನು ಸುದತ್ತನೆಂಬ ವರ್ತಕನ ಮಗ ನರಸೇನನೆಂಬವನು; ಬಹಳ ಶ್ರೀಮಂತ; ಅಕ್ಷಧೂರ್ತನೊಡನೆ ಜೂಜಾಡಿ ಒಂದು ಲಕ್ಷ ಹೊನ್ನನ್ನು ಸೋತ; ಸೋತದ್ದನ್ನು ಸಲ್ಲಿಸದೆ ಹೋಗಬೇಡ, ಹೋದರೆ ಅರಸನಾಣೆ ಎಂದು ಅಕ್ಷಧೂರ್ತ ಹೇಳಿದ. ನರಸೇನನು ಇದನ್ನು ಲೆಕ್ಕಿಸದೆ ಅಕ್ಷಧೂರ್ತನನ್ನು ಕೊಂದ. ಇವನನ್ನು ಶೂಲಕ್ಕೇರಿಸಿ ಎಂದು ರಾಜ ಅಪ್ಪಣೆ ಮಾಡಲು ಇವನನ್ನು ಒಯ್ಯುತ್ತಿದ್ದಾರೆ" ಎಂದು

ಕಥೆಯನ್ನು ಹೇಳಿದನು. ಆಗ ನಾಗಶ್ರೀ ಕೊಲ್ಲದ ವ್ರತವನ್ನು ನಾನು ಬಿಟ್ಟರೆ ನನಗೂ ಇದೇ ಗತಿಯಾದೀತು ಎಂದಳು. ಹಾಗಾದರೆ ಆ ವ್ರತವೊಂದಿರಲಿ, ಉಳಿದುವನ್ನು ಬಿಡು ಎಂದು ಹೇಳುತ್ತ ನಾಗಶರ್ಮ ಸ್ವಲ್ಪದೂರ ನಡೆದನು. ಎದುರಿಗೆ ಜನರ ಮತ್ತೊಂದು ಗುಂಪು; ಅದಕ್ಕೆ ಹೆದರಿ ಅತ್ತ ಇತ್ತ ನುಗ್ಗುವ ಹೋರಿಗಳು. ನಾಗಶ್ರೀ ಕಂಡು ತಂದೆಯನ್ನು ಪ್ರಶ್ನೆ ಮಾಡಿದಳು. ಅದಕ್ಕೆ ಅವನು "ವಂಗದೇಶದ ರಾಜ ವಜ್ರಾಯುಧನು ನಮ್ಮ ರಾಜ ಚಂದ್ರವಾಹನನ ಮೇಲೆ ದಂಡೆತ್ತಿ ಬಂದ. ಇಬ್ಬರ ಸೈನ್ಯಗಳಿಗೂ ಯುದ್ಧವಾಗುತ್ತಿತ್ತು. ಆಗ ತಕ್ಷಕನೆಂಬ ಒಬ್ಬ ಚರನು ಯುದ್ಧರಂಗದಿಂದ ಓಡಿಬಂದು ನಿನ್ನ ಸೈನ್ಯ ಸೋತು ಹೋಯಿತು ಎಂದು ಚಂದ್ರವಾಹನನಿಗೆ ಹೇಳಿದ. ಅಷ್ಟರಲ್ಲಿ ಅವನ ದಂಡ ನಾಯಕ ಬಂದು ವಿಜಯವಾರ್ತೆಯನ್ನು ತಿಳಿಸಿದ. ರಾಜನಿಗೆ ಸಿಟ್ಟು ಬಂದು ಸುಳ್ಳು ಹೇಳಿದ ತಕ್ಷಕನನ್ನು ಹೂಟಿಗೆ ಹೂಡಿ ಹೋರಿಗಳಿಂದ ಎಳೆಯಿಸಿ ಕೊಲ್ಲಿರೆಂದು ಆಜ್ಞಾಪಿಸಿದ" ಎಂದು ವಿವರಣೆ ಹೇಳಿದನು. ಋಷಿಗಳು ಕೊಟ್ಟ ಹುಸಿಯದ ವ್ರತವನ್ನು ಬಿಟ್ಟರೆ ನನಗೂ ಇಂಥ ಕೇಡು ಸಂಭವಿಸಬಹುದೆಂದು ನಾಗಶ್ರೀ ತಂದೆಗೆ ಹೇಳಲು, ಅವನು "ಹೋಗಲಿ ಆ ವ್ರತವೊಂದನ್ನು ಇಟ್ಟುಕೊ, ಮಿಕ್ಕದ್ದನ್ನು ಬಿಡು" ಎಂದು ಮಗಳ ಜೊತೆಯಲ್ಲಿ ಮುಂದೆ ನಡೆದನು. ಮತ್ತೊಂದೆಡೆ ದಬ್ಬಳಗಳಿಂದ ತಿವಿಯುತ್ತ, ಹಾರೆಯ ಏಟಿನಿಂದ ಮೂಳೆಯನ್ನು ಮುರಿಯುತ್ತ ಒಬ್ಬನನ್ನು ಜನ ಗುಂಪಾಗಿ ಕೊಲ್ಲುತ್ತಿದ್ದರು. "ಇವನನ್ನು ಹೀಗೇಕೆ ಕೊಲ್ಲುತ್ತಾರೆ, ತಂದೆಯೇ" ಎಂದು ನಾಗಶ್ರೀ ಕೇಳಿದಳು. "ಸುಮಿತ್ರನೆಂಬ ವರ್ತಕನಿಗೆ ವಸುಕಾಂತೆಯೆಂಬ ಮಗಳು. ಅವಳು ವಿಶೇಷ ರೂಪವತಿ. ಒಂದು ದಿನ ಅವಳು ಅಂತಃಪುರಕ್ಕೆ ಹೋಗುತ್ತಿರುವಾಗ ಬಾಗಿಲ ಮೇಲಿದ್ದ ಒಂದು ಹಾವು ಅವಳನ್ನು ಕಚ್ಚಿತು. ಅವಳು ಸತ್ತಳೆಂದೇ ತಿಳಿದು ತಂದೆ ಅವಳನ್ನು ಪ್ರೇತಭೂಮಿಗೆ ತೆಗೆಯಿಸಿಕೊಂಡು ಹೋದನು. ಅಲ್ಲಿದ್ದ ಗರುಡನಾಭಿ ಎಂಬ ಮಂತ್ರವಾದಿ "ನನಗೆ ಇವಳನ್ನು ಮದುವೆ ಮಾಡುವುದಾದರೆ ನಾಳೆ ಸೂರ್ಯ ಹುಟ್ಟುವದಕ್ಕೆ ಮುಂಚಿತವಾಗಿಯೇ ಇವಳನ್ನು ಬದುಕಿಸಿಕೊಡುತ್ತೇನೆ" ಎಂದನು. ಸುಮಿತ್ರ ಒಪ್ಪಿ ನಾಲ್ವರು ಭಟರನ್ನು ರಾತ್ರಿ ಅಲ್ಲಿಗೆ ಕಾವಲಿಟ್ಟು, ಒಬ್ಬೊಬ್ಬನಿಗೆ ಸಾವಿರ ಹೊನ್ನನ್ನು ಕೊಡುವುದಾಗಿ ಹೇಳಿ, ಒಂದೊಂದು ಪೊಟ್ಟಳದಲ್ಲಿ ಸಾವಿರ ಹೊನ್ನನ್ನು ಇಟ್ಟು ಆ ನಾಲ್ಕನ್ನು ಒಂದು ಕಂತೆಯಾಗಿ ಮಾಡಿ

ಆ ನಾಲ್ವರ ನಡುವಿಟ್ಟು ಹೋದನು. ಆ ನಾಲ್ವರಲ್ಲಿ ಒಬ್ಬ ಉಳಿದ ಮೂವರಿಗೆ ತಿಳಿಯದಂತೆ ಕಂತೆಯನ್ನು ಬಿಚ್ಚಿ ನೋಡಿ, ಒಂದು ಪೊಟ್ಟಳವನ್ನು ಬಚ್ಚಿಟ್ಟನು. ಮಾರನೆಯದಿನ ಮಂತ್ರವಾದಿ ಕನ್ನೆಯನ್ನು ಸಪ್ರಾಣಿಸಿ ಅವಳನ್ನು ಮದುವೆ ಯಾದನು. ಆ ಭಟರಲ್ಲಿ ಮೂವರು ಒಂದೊಂದು ಸಾವಿರ ಹೊನ್ನಿನ ಪೊಟ್ಟಳ ವನ್ನು ತೆಗೆದುಕೊಂಡರು. ಇನ್ನೊಬ್ಬನಿಗೆ ಮಾತ್ರ ಇಲ್ಲ. ಸುಮಿತ್ರ ವಿಷಯ ವನ್ನು ತಿಳಿದು ಇವರು ತಮ್ಮಲ್ಲಿಯೇ ಒಬ್ಬೊಬ್ಬರನ್ನು ಮೋಸಮಾಡಿರಬೇಕೆಂದು ಭಾವಿಸಿ, ರಾಜನಲ್ಲಿ ದೂರು ಹೇಳಿದನು. ದೊರೆ ತಳಾರ ಚಂಡಕೀರ್ತಿಯನ್ನು ಕರೆದು ನಾಲ್ಕು ದಿನದಲ್ಲಿ ಕಳ್ಳನನ್ನು ಕಂಡುಹಿಡಿದು ಹಣವನ್ನೊಪ್ಪಿಸಬೇಕು; ಇಲ್ಲದಿದ್ದರೆ ಅವರಿಗೆ ಆಗುವ ಶಿಕ್ಷೆ ನಿನಗಾಗುತ್ತದೆ, ಎಂದು ಅಪ್ಪಣೆ ಮಾಡಿದನು. ಚಂಡಕೀರ್ತಿ ಆ ನಾಲ್ವರನ್ನು ಮನೆಗೆ ಕರೆದುಕೊಂಡು ಹೋಗಿ ಏನು ಮಾಡಲ್ಲೂ ತೋರದೆ, ಜೋಲು ಮೋರೆ ಹಾಕಿಕೊಂಡು ಚಿಂತಿಸುತ್ತ ಕುಳಿತನು. ಅವನ ಮಗಳು ಸುಮತಿ ಅವನ ಸ್ಥಿತಿಯನ್ನು ಕಂಡು "ಇದಕ್ಕೇಕೆ ಇಷ್ಟು ಚಿಂತೆ? ಉಪಾಯದಿಂದ ನಾನು ಕಳ್ಳನನ್ನೂ ಹಣವನ್ನೂ ಕಂಡು ಹಿಡಿಯುತ್ತೇನೆ" ಎಂದು ಆ ಭಟರಲ್ಲಿ ಒಬ್ಬೊಬ್ಬನನ್ನೂ ತನ್ನ ಅಂತಃಪುರಕ್ಕೆ ಕರೆದುಕೊಂಡು ಹೋಗಿ ಲಲ್ಲೆಮಾತುಗಳಿಂದ ಅವರನ್ನು ಮರುಳುಮಾಡಿದಳು. ಎಲ್ಲರೂ ತನ್ನೊಬ್ಬನನ್ನೇ ಸುಮತಿ ಪ್ರೀತಿಸುತ್ತಾಳೆಂದು ಭಾವಿಸಿದರು. ಮಾರನೆ ದಿನ ಆ ನಾಲ್ವರನ್ನೂ ಒಂದೆಡೆಗೆ ಬರಿಸಿ ಕುಳ್ಳಿರಿಸಿ ಸುಮತಿ ಅವರಿಗೆ ಒಂದು ಚಿತ್ರ ಕಥೆಯನ್ನು ಹೇಳಿದಳು.

"ಪಾಟಲೀಪುತ್ರದ ವಸುದತ್ತನೆಂಬ ಅರಸನಿಗೆ ಸುದಾಮೆಯೆಂಬ ಅತ್ಯಂತ ರೂಪವತಿಯಾದ ಕನ್ಯೆಯೊಬ್ಬಳಿದ್ದಳು. ಅವಳೊಂದು ದಿನ ಗಂಗೆಯಲ್ಲಿ ಸ್ನಾನ ಮಾಡುತ್ತಿರುವಾಗ ಮೊಸಳೆಯೊಂದು ಅವಳ ಕಾಲನ್ನು ಹಿಡಿದುಕೊಂಡಿತು. ಅವಳು ಹೆದರಿ ಹತ್ತಿರದಲ್ಲೇ ಮೀಯುತ್ತಿದ್ದ ತನ್ನ ಭಾವ ವನದೇವನನ್ನು ಕೂಗಿ ಕರೆದಳು. ಅವನು ಬಂದು ನಿನ್ನ ಮದುವೆಯ ಮೊದಲನೆಯ ದಿನದ ಅಲಂಕಾರ ವನ್ನು ನನಗೆ ತೋರಿಸುವುದಾದರೆ ಬಿಡಿಸುತ್ತೇನೆಂದು ಅವಳನ್ನು ಒಪ್ಪಿಸಿ ಮೊಸಳೆಯನ್ನು ಹೊಡೆದೋಡಿಸಿದ. ಸುದಾಮೆಗೆ ಮದುವೆಯ ಕಾಲ ಬಂತು. ಅವಳು ತನ್ನ ಭಾಷೆಗೆ ತಕ್ಕಂತೆ ಸಾಲಂಕೃತಳಾಗಿ ಕತ್ತಲಾದ ಮೇಲೆ ಹೊರಟು ಭಾವನ ಮನೆಗೆ ಬರುತ್ತಿದ್ದಳು. ದಾರಿಯಲ್ಲಿ ಒಬ್ಬ ಬ್ರಹ್ಮರಾಕ್ಷಸನು ಅಡ್ಡಗಟ್ಟಿ

ತಿಂದುಬಿಡುವೆನೆಂದು ಹೆದರಿಸಿದಾಗ ಸುದಾಮೆ "ನನಗೊಂದು ಕೆಲಸವಿದೆ, ಅದನ್ನು ಮುಗಿಸಿಕೊಂಡು ಬರುತ್ತೇನೆ, ಆಗ ನನ್ನನ್ನು ತಿನ್ನುವೆಯಂತೆ" ಎಂದು ಹೇಳಿದಳು. ರಾಕ್ಷಸನೂ ಒಪ್ಪಿದನು. ಅವಳೆಲ್ಲಿ ಹೋಗುವಳೋ ನೋಡೋಣವೆಂದು ಅವನು ಮೈಮರಸಿಕೊಂಡು ಅವಳ ಹಿಂದೆ ಹಿಂದೆಯೇ ಹೊರಟನು. ಕೊಂಚ ದೂರ ಸಾಗಿದಮೇಲೆ ಕಳ್ಳನೊಬ್ಬನು ಅವಳ ರತ್ನಾಭರಣಗಳನ್ನು ನೋಡಿ ಸುಲಿಗೆ ಮಾಡಲು ಸಮಿಾಪಿಸಿದಾಗ ತನ್ನ ಪ್ರತಿಜ್ಞೆಯನ್ನು ಸುದಾಮೆ ಅವನಿಗೆ ತಿಳಿಸಿ "ನಾನು ಬರುವವರೆಗೂ ಇಲ್ಲಿ ಕಾದಿರು" ಎಂದು ಹೇಳಲು ಅವನು ಒಪ್ಪಿ ಬಿಟ್ಟನು. ಮುಂದುವರಿದಾಗ ಬೀದಿ ಬೀದಿಯಲ್ಲಿ ಗಸ್ತು ತಿರುಗುವ ತಳವಾರ ಅವಳನ್ನು ಕಂಡು "ಎಲ್ಲಿ ಹೋಗುತ್ತೀಯೆ, ಈ ಹೊತ್ತಿನಲ್ಲಿ?" ಎಂದು ಅಬ್ಬರಿಸಲು ಅವಳು ತನ್ನ ಭಾಷೆಯನ್ನು ವಿವರಿಸಿದಳು. ಆಗ ತಳವಾರ ಇವಳನ್ನು ಹಿಡಿದುಕೊಂಡು ಹೋದರೆ ಒಡವೆಗೆ ಆಸೆ ಪಟ್ಟು ಹಿಡಿದನೆಂಬ ಅಪವಾದ ಬರುವುದು. ಇವಳೆಲ್ಲಿಗೆ ಹೋಗುವಳೋ ಹಿಂದೆಯೇಹೋಗಿ ನೋಡೋಣವೆಂದು ಅವಳನ್ನು ಬಿಟ್ಟನು. ಮೂವರೂ ಇವಳ ಬೆನ್ನಂಟಿದರು. ಕೊನೆಗೆ ಸುದಾಮೆ ಭಾವನ ಮನೆಗೆ ಹೋಗಿ ತನ್ನ ಭಾಷೆಯನ್ನು ಅವನ ನೆನಪಿಗೆ ತಂದುಕೊಟ್ಟು, ತನ್ನ ಅಲಂಕಾರವನ್ನೆಲ್ಲ ಅವನಿಗೆ ತೋರಿಸಿ "ನಿನಗೆ ಇಷ್ಟವಾದುದನ್ನು ಮಾಡು" ಎಂದಳು. ಅವನು ಅವಳ ಸತ್ಯಕ್ಕೆ ಮೆಚ್ಚಿ ಕೊಂಡಾಡಿ ಕಳಿಸಿಕೊಟ್ಟನು. ಹಿಂದೆ ಬಂದ ಆ ಮೂವರು ಇವರ ಮಾತನ್ನೆಲ್ಲ ಕೇಳಿ ವಿಸ್ಮಿತರಾಗಿ ಬೇಗ ಬೇಗನೆ ತಾವು ಮೊದಲಿದ್ದ ಸ್ಥಳಗಳಿಗೆ ಬಂದು ನಿಂತರು. ಸುದಾಮೆ ಮರಳಿ ಬರುವಾಗ ಮೊದಲು ತಳಾರ ನನ್ನು ಕಂಡು "ನನ್ನ ಭಾಷೆ ತೀರಿತು. ನಿನಗೇನು ಬೇಕೋ ತೆಗೆದುಕೊ" ಎನ್ನಲು ಅವನು ನಿನ್ನಂಥ "ಮಹಾಸತಿ ಯಾರೂ ಇಲ್ಲ, ಹೋಗು" ಎಂದು ಮುಂದಕ್ಕೆ ಕಳಿಸಿದನು. ಆಮೇಲೆ ಅವಳು ಕಳ್ಳನನ್ನು ಕಂಡು ಬೆಲೆಯುಳ್ಳ ಈ ಆಭರಣಗಳನ್ನು ತೆಗೆದುಕೊ ಎನ್ನಲು, ಅವನು 'ನೀನು ಸತ್ಯವಾದಿ' ಎಂದು ಮುಂದಕ್ಕೆ ಹೋಗಹೇಳಿದನು. ಬ್ರಹ್ಮರಾಕ್ಷಸನುಕೂಡ ಅವಳ ಸತ್ಯಕ್ಕೆ ಮೆಚ್ಚಿ ತಿನ್ನದೆ, "ಹೋಗು ತಾಯಿ" ಎಂದು ಹೇಳಲು ಅವಳು ತನ್ನ ಮನೆಗೆ ಬೇಗನೆ ಬಂದಳು. ಈ ನಾಲ್ವರಲ್ಲಿ ಯಾರು ಒಳ್ಳೆಯವರು ? ಎಂದು ಸುಮತಿ ಆ ನಾಲ್ಕು ಜನ ಭಟರಿಗೆ ಸಮಸ್ಯೆಯನ್ನೊಡ್ಡಿದಳು. ಧನದೇವನು ಒಳ್ಳೆಯವನೆಂದು ಒಬ್ಬ, ರಾಕ್ಷಸನಿಗೆ ಸಮಾನ ಯಾರೂ ಇಲ್ಲ ಎಂದು ಇನ್ನೊಬ್ಬ, ತಳವಾರನಿಗೆ ಸರಿಮಿ

ಗಿಲು ಯಾರೂ ಇಲ್ಲ ಎಂದು ಮತ್ತೊಬ್ಬ, ಕಳ್ಳನಂಥ ಒಳ್ಳೆಯವರು ಮೂರು ಲೋಕದಲ್ಲಿ ಯಾರೂ ಇಲ್ಲ ಎಂದು ಕೊನೆಯವ ತಮ್ಮ ತಮ್ಮ ಮೆಚ್ಚಿಗೆಯನ್ನು ವ್ಯಕ್ತಪಡಿಸಿದರು. ಕಳ್ಳನನ್ನು ಮೆಚ್ಚಿಕೊಂಡವನು ಕಳ್ಳನಿರಬೇಕೆಂದು ಸುಮತಿ ನಿಶ್ಚಯಿಸಿ, ಎಲ್ಲರನ್ನೂ ಹೋಗಹೇಳಿ, ಆಮೇಲೆ ಆ ಕಳ್ಳನೊಬ್ಬನನ್ನೇ ಏಕಾಂತಕ್ಕೆ ಬರಮಾಡಿಕೊಂಡು "ನನ್ನ ವಶದಲ್ಲಿ ಬೇಕಾದಷ್ಟು ದ್ರವ್ಯವಿದೆ. ಬಾ ನಾವಿಬ್ಬರೂ ಇಲ್ಲಿಂದ ಓಡಿ ಹೋಗೋಣ" ಎನ್ನಲು ಆ ಮಾತನ್ನು, ನಿಜವೆಂದೇ ನಂಬಿ "ನನ್ನಲ್ಲಿಯೂ ಸ್ವಲ್ಪ ಹಣವಿದೆ" ಎಂದು ಸಾವಿರ ಹೊನ್ನಿನ ಪೊಟ್ಟಳವನ್ನು ಅವಳ ಕೈಗೆ ಕೊಟ್ಟನು. "ಕೊಂಚ ಹೊತ್ತು ನಿದ್ದೆ ಮಾಡಿ ಹೊರಡೋಣ" ಎಂದು ಇಬ್ಬರೂ ಮಲಗಿ, ತಾನು ನಿದ್ದೆ ಮಾಡುವವಳಂತೆ ನಟಿಸುತ್ತ, ಕಳ್ಳನು ಗೊರಕೆ ಹೊಡೆಯುತ್ತಿದ್ದಾಗ ಎದ್ದು ಹೋಗಿ ಸುಮತಿ ತನ್ನ ತಂದೆ ಚಂಡಕೀರ್ತಿಗೆ ವಿಷಯವನ್ನು ತಿಳಿಸಿದ ಕೂಡಲೆ ಅವನು ಬಂದು ಇವನನ್ನು ಹಿಡಿದು ಚಂದ್ರವಾಹನ ರಾಜನಿಗೆ ಒಪ್ಪಿಸಿದನು. ದೊರೆ ಈ ಕಳ್ಳನನ್ನು ಕೊಚ್ಚಿ ಕೊಚ್ಚಿ ಕೊಲ್ಲಿರೆಂದು ಅಪ್ಪಣೆ ಮಾಡಿದನು. ಆದ್ದರಿಂದ ಇವನನ್ನು ಹೀಗೆ ಹಿಂಸಿಸುತ್ತಿದ್ದಾರೆ." ಎಂದು ನಾಗಶರ್ಮ ನಾಗಶ್ರೀಗೆ ಹೇಳಿದನು. ಕದಿಯದ ವ್ರತವನ್ನು ನಾನು ತೊರೆದರೆ ನನಗೂ ಇಂಥ ಕಠೋರ ಮರಣವೇ ಬರಬಹುದೆಂದು ನಾಗಶ್ರೀ ತಂದೆಗೆ ಹೇಳಿದಾಗ ಅವನು "ನಿನಗೆ ಆ ವ್ರತವೂ ಇರಲಿ, ಉಳಿದದ್ದನ್ನು ಆ ಸವಣನಿಗೆ ಒಪ್ಪಿಸು'' ಎಂದು ಇನ್ನೂ ಸ್ವಲ್ಪ ದೂರ ಮುಂದಕ್ಕೆ ನಡೆದನು.

ಇನ್ನೊಂದು ಸ್ಥಳದಲ್ಲಿ ಕಿವಿ ಮೂಗುಗಳನ್ನು ಕೊಯ್ಸಿಕೊಂಡು ಕೊರಳಿಗೆ ತಲೆಯೊಂದನ್ನು ಕಟ್ಟಿಸಿಕೊಂಡು ಒಬ್ಬಳು ತಳವಾರನ ಸಂಗಡ ಬರುತ್ತಿದ್ದಳು. ಅವಳನ್ನು ನಾಗಶ್ರೀ ನೋಡಿ "ಅವಳ ತಪ್ಪೇನು, ವಿಚಾರಿಸಿ'' ಎಂದು ತಂದೆಗೆ ಹೇಳಲು, ಅವನು ತಳವಾರನಿಂದ ಅದನ್ನು ತಿಳಿದು ಮಗಳಿಗೆ "ನಂದನೂ ಭದ್ರನೂ ಇಬ್ಬರು ವರ್ತಕ ಪುತ್ರರು. ಇವರ ಸೋದರಮಾವನ ಮಗಳು ಮದಾಳಿ ಯೆಂಬುವಳೇ ಈಕೆ. ನಂದನು ಸುವರ್ಣ ವ್ಯಾಪಾರಕ್ಕೆ ಹರದನಾಗಿ ಹೋಗುತ್ತ "ಹನ್ನೆರಡು ವರ್ಷಕ್ಕೆ ನಾನು ಹಿಂತಿರುಗಿ ಬರದಿದ್ದರೆ ಮದಾಳಿಯನ್ನು ನನ್ನ ತಮ್ಮ ಭದ್ರನಿಗೆ ಕೊಟ್ಟು ಮದುವೆ ಮಾಡಿ"ಎಂದು ಮಾವನಿಗೆ ಹೇಳಿ ಪ್ರಯಾಣ ಮಾಡಿದನು. ಹನ್ನೆರಡು ವರ್ಷ ಕಳೆಯಿತು. ನಂದನು ಬರಲಿಲ್ಲವೆಂದು ಅವನ

ಮಾವ ಭದ್ರನನ್ನೂ ಮದಾಳಿಯನ್ನೂ ಹಸೆಯಲ್ಲಿ ಕುಳ್ಳಿರಿಸಿ ಕೈನೀರೆರೆಯುವ ಹೊತ್ತಿಗೆ ಸರಿಯಾಗಿ ನಂದನು ಬಂದನು. "ನೀನೇ ಮದಾಳಿಯನ್ನು ಮದುವೆಯಾಗು" ಎಂದು ತಂದೆಯೂ ಮಾವನೂ ನಂದನಿಗೆ ಹೇಳಿದಾಗ, ಅವನು ತಮ್ಮನಿಗಾಗಿರುವ ಕನ್ನೆಯನ್ನು ಅಣ್ಣ ಸ್ವೀಕರಿಸಬಹುದೆ ಎಂದು ಒಪ್ಪದಾದ; ಅಣ್ಣನಿಗೆಂದು ಬೆಳೆದ ಕನ್ನೆ ನನಗೆ ಬೇಡವೆಂದು ತಮ್ಮನು ಬಿಟ್ಟ. ಹೀಗೆ ಮದಾಳಿಯ ಮದುವೆ ನಿಂತು ಹೋಗಿ ಅವಳು ತವರುಮನೆಯಲ್ಲಿದ್ದಳು. ಅದೇ ಊರಿನ ನಾಗಸೂರನೆಂಬ ವರ್ತಕ ಬಹುಪತ್ನೀಕನಾಗಿದ್ದರೂ ಮದಾಳಿಯೊಡನೆ ಸಲುಗೆ ಬೆಳೆಯಿಸಿ ಮರೆವಾಳುತ್ತಿದ್ದನು. ಇದನ್ನು ತಳವಾರನು ಹೇಗೋ ಕಂಡುಹಿಡಿದು, ಮದಾಳಿಯ ಕಿವಿ ಮೂಗುಗಳನ್ನು ಕೊಯ್ದು, ನಾಗಸೂರನ ತಲೆ ಕತ್ತರಿಸಿ ಅವಳ ಕೊರಳಲ್ಲಿಟ್ಟು, ಒಂದೇ ಹರೆಯನ್ನು ಹೊಡೆಯಿಸುತ್ತಾ ಹೋಗುತ್ತಿದ್ದಾನೆ" ಎಂದು ಹೇಳಿದನು. ನಾಗಶ್ರೀ ಕೇಳಿ ಪರದಾರ ನಿವೃತ್ತಿ ವ್ರತವನ್ನು ನಾನು ಬಿಡಲಾರೆನೆನ್ನಲು ತಂದೆ ಒಪ್ಪಿದನು.

ಮತ್ತೊಂದೆಡೆಯಲ್ಲಿ ಶೂಲಕ್ಕೇರಿಸಿದ ಒಬ್ಬನು ನೋವನ್ನು ತಾಳಲಾರದೆ ಸುಮ್ಮನೆ ಅರಚಿಕೊಳ್ಳುತ್ತಿದ್ದನು. ಇವನ ಕಥೆಯನ್ನು ನಾಗಶ್ರೀಗೆ ನಾಗಶರ್ಮ ಹೇಳುತ್ತಾನೆ—ಕೊಲೆಗೆ ಗುರಿಯಾದವನು ಚಂದ್ರವಾಹನನೆಂಬರಸನ ಪಶುಪಾಲಕ ವೀರಪೂರ್ಣನೆಂಬವನು. ಒಂದು ದಿನ ಇವನು ದೊರೆಯ ತುರುಹಟ್ಟಿಗೆ ಹೊಕ್ಕು ಊರವರ ಹಸು ಎಮ್ಮೆಗಳನ್ನು ಹೊಡೆದುಕೊಂಡು ಹೋಗಿ ರಾಜನಿಗೆ ತೋರಿಸಿದಾಗ, ಅವನು ಇವನ ಭಕ್ತಿಗೂ ಕಾರ್ಯದಕ್ಷತೆಗೂ ಮೆಚ್ಚಿ ಅವನ್ನೆಲ್ಲಾ ನೀನೇ ಇಟ್ಟುಕೊ ಎಂದು ಹೇಳಿದನು. ವೀರಪೂರ್ಣನಿಗೆ ಇದೇ ಒಂದು ಆಟವಾಯಿತು. ದೊರೆಯ ದಯೆ ತನ್ನ ಕಡೆಗಿದೆಯೆಂದು ಉಬ್ಬಿದನು. ಒಂದು ದಿವಸ ಅವನು ಚಂದ್ರಮತಿ ಮಹಾದೇವಿಯ ಹಸುಗಳನ್ನು ಹೀಗೆಯೇ ಸೇರಿ ಹೊಡೆದನು. ಚಂದ್ರಮತಿ ರಾಜನಲ್ಲಿಗೆ ಬಂದು ದೂರು ಹೇಳಿದಳು. ರಾಜನಿಗೆ ಸಿಟ್ಟು ಬಂತು. ತಮ್ಮ ತಮ್ಮ ಹಸುಗಳನ್ನೆಲ್ಲಾ ಕಳೆದುಕೊಂಡ ಊರವರೆಲ್ಲ ಒಟ್ಟಿಗೆ ಬಂದು ದೂರು ಹೇಳಿಕೊಂಡರು. "ದುರಾಶೆಯಿಂದ ಇವನು ಪ್ರಜೆಗಳ ಆಸ್ತಿಯನ್ನು ಆಕ್ರಮಿಸಿಕೊಂಡಿದ್ದಾನೆ. ಇವನನ್ನು ಹಲವು ದಿವಸ ನವೆಯುವಂತೆ ಮಾಡಿ ಕೊಲ್ಲಿರಿ" ಎಂದು ದೊರೆ ಆಜ್ಞಾಪಿಸಿದನು. ಆದ್ದರಿಂದ ಅವನನ್ನು ಹೀಗೆ ಕೊಲ್ಲುತ್ತಿದ್ದಾರೆ. ನಾಗಶ್ರೀ ಈ ಕಥೆಯನ್ನು ಕೇಳಿ ಅತಿಕಾಂಕ್ಷೆ

ಯನ್ನು ತೊರೆಯುವ ವ್ರತವನ್ನು ನಾನು ಬಿಡುವುದಿಲ್ಲವೆಂದಳು. ನಾಗಶರ್ಮ "ಹಾಗೆಯೇ ಆಗಲಿ, ಋಷಿಗಳು ಹೇಳಿದ ಐದು ವ್ರತಗಳೂ ನಿನಗಿರಲಿ, ಆದರೂ ಗರ್ವದಿಂದ ಇದನ್ನು ನಿನಗೆ ಕೊಟ್ಟ ಆ ಯತಿಯನ್ನು ಚೀಮಾರಿ ಮಾಡಿ ಬರ್ಪೋಣ" ಎಂದು ಮಗಳೊಡನೆ ನಾಗಸ್ಥಾನಕ್ಕೆ ಬಂದನು.

ಬಂದು ಸೂರ್ಯಮಿತ್ರ ಯತಿಯನ್ನು ಕುರಿತು "ವಿಪ್ರೋತ್ತಮನೂ, ರಾಜ ಪೂಜಿತನೂ ಆದ ನನ್ನ ಮಗಳಿಗೆ ಈ ರೀತಿ ಉಪಾಯದಿಂದಲೂ ಮೋಸ ದಿಂದಲೂ ಬಲಾತ್ಕಾರದಿಂದಲೂ ವ್ರತಗಳನ್ನು ಕೊಡುವುದು ಸರಿಯೆ?" ಎಂದನು. "ಆ ಮಗು ನನ್ನ ಮಗು." ನಿನ್ನ ಮಗಳಲ್ಲ, ಎಂದು ಆ ಯತಿ ಹೇಳಿ ದಾಗ ನಾಗಶ್ರೀ ಅವನಿಗೆ ವಂದನೆ ಮಾಡಿ ಅವನ ಪಕ್ಕದಲ್ಲಿ ಕುಳಿತಳು. ನಾಗ ಶರ್ಮನಿಗೆ ಏನು ಮಾಡಲೂ ಆಗದೆ, ತನ್ನರಸು ಚಂದ್ರವಾಹನನ ಬಳಿಗೆ ಬಂದು "ಯಾವನೋ ಒಬ್ಬ ಯತಿ ನನ್ನ ಮಗಳನ್ನು ತನ್ನ ಮಗಳೆಂದು ಹೇಳುತ್ತ ಅವ ಳನ್ನು ನಿನಗೆ ಕೊಡುವುದಿಲ್ಲ. ನಿನ್ನ ರಾಜ ಬಂದು ಹೇಳಿದರೂ ನಾನು ಲೆಕ್ಕಿಸು ವುದಿಲ್ಲವೆಂದು ಜೋರಿನಿಂದ ಹೇಳುತ್ತಿದಾನೆ. ಇದಕ್ಕೆ ತಕ್ಕದ್ದನ್ನು ಮಾಡಿರಿ" ಎಂದನು. ರಾಜನಿಗೆ ಆಶ್ಚರ್ಯವಾಗಿ ಮಹಾದೇವಿಯೊಡನೆ ಪರಿವಾರಸಮೇತ ನಾಗಿ ಯತಿಗಳ ಹತ್ತಿರ ಬಂದು, ವಿನಯದಿಂದ ವಂದಿಸಿ "ಈ ನಾಗಶರ್ಮ ಒಂದೇ ಸವನೆ ಹುಯ್ಯಲಿಡುತ್ತಿದ್ದಾನೆ. ಏನಾಯಿತು ತಿಳಿಸಿರಿ" ಎಂದನು. ಅದಕ್ಕೆ ಅವನು "ನನ್ನ ಈ ಮಗಳು ವ್ರತಗಳನ್ನು ಕೊಂಡರೆ ಇವನು ಜಗಳಕ್ಕೆ ಬಂದ" ಎಂದನು. ನಾಗಶರ್ಮನು "ನಿಮಗೂ ತಿಳಿದಿದೆ. ಲೋಕಕ್ಕೂ ತಿಳಿದಿದೆ ನಾನು ಈ ಮಗಳನ್ನು ನಾಗರಿಗೆ ಹರಸಿ ಪಡೆದ ವಿಷಯ" ಎಂದನು. "ಹಾಗಾ ದರೆ ನೀನು ಈ ಕೂಸಿಗೆ ವೇದಗಳನ್ನೂ ಷಡಂಗಗಳನ್ನೂ ತರ್ಕವನ್ನೂ ವ್ಯಾಕರ ಣವೇ ಮುಂತಾದ ಅನೇಕ ಶಾಸ್ತ್ರಗಳನ್ನೂ ಕಲಿಸಿದ್ದೀಯಾ" ಎಂದು ಸೂರ್ಯ ಮಿತ್ರ ನಾಗಶರ್ಮನನ್ನು ಕೇಳಿದನು. ಅವನು ಇಲ್ಲವೆನ್ನಲು "ನಾನು ಇವನ್ನೆಲ್ಲ ಇವಳಿಗೆ ಚೆನ್ನಾಗಿ ಹೇಳಿಕೊಟ್ಟಿದ್ದೇನೆ. ಆದ್ದರಿಂದ ಇವಳು ನನ್ನ ಮಗಳು. ಈ ಮಾತು ಸುಳ್ಳಲ್ಲ" ಎಂದು ಸೂರ್ಯಮಿತ್ರ ಹೇಳುವಾಗ, ರಾಜ "ನಾಗಶ್ರೀ ಯಿಂದ ಇವನ್ನೆಲ್ಲ ಹೇಳಿಸಿ ಸಂದೇಹ ನಿವೃತ್ತಿ ಮಾಡಿರಿ" ಎಂದನು. ಸೂರ್ಯ ಮಿತ್ರ ನಾಗಶ್ರೀಯ ತಲೆಯಮೇಲೆ ಕೈಯಿಟ್ಟು "ಮಗಳೆ, ನೀನು ವಾಯುಭೂತಿ ಯಾಗಿದ್ದ ಜನ್ಮದಲ್ಲಿ ನಿನಗೆ ಓದಿಸಿದ ವೇದಾದಿಗಳನ್ನು ಈ ರಾಜನ ಮುಂದೆ

ಹೇಳಿ ನಿನ್ನ ಪಾಂಡಿತ್ಯವನ್ನು ಮೆರೆ" ಎಂದು ಹೇಳಿದ ಕೂಡಲೆ ಅವಳು ಸಾಕ್ಷಾತ್ ಸರಸ್ವತಿಯೇ ತಾನೆಂಬಂತೆ, ಸಭಾಸದರೂ ವಿದ್ವಜ್ಜನರೂ ಮೆಚ್ಚಿ ಹೊಗಳುವಂತೆ, ರಾಜನು ಅಚ್ಚರಿಗೊಳ್ಳುವಂತೆ ವೇದಘೋಷವನ್ನು ಮಾಡಿ ವ್ಯಾಕರಣ ತರ್ಕಶಾಸ್ತ್ರಾದಿಗಳನ್ನು ಅನುಕ್ರಮವಾಗಿ ಹೇಳಿದಳು.

ಆಗ ರಾಜನು 'ಸ್ವಾಮಿ, ಇವಳಿಗೆ ಈ ವಿದ್ಯೆಯೆಲ್ಲ ಹೇಗೆ ಬಂತು, ತಿಳಿಯಲು ಕುತೂಹಲವಾಗುತ್ತಿದೆ' ಎಂದನು. ಆ ಯತಿ ಎಲ್ಲವನ್ನೂ ತಿಳಿಸಿ ರಾಜನಿಗೆ ಜಿನತತ್ವದ ಸ್ವರೂಪವನ್ನು ಸಂಕ್ಷೇಪವಾಗಿ ವಿವರಿಸಿದನು. ರಾಜನಿಗೆ ವೈರಾಗ್ಯ ಹುಟ್ಟಿ ತನ್ನ ಮಗ ಜಿತಶತ್ರುವಿಗೆ ರಾಜ್ಯವನ್ನು ಕೊಟ್ಟು ಜಿನದೀಕ್ಷೆಯನ್ನು ತಾಳಿದನು. ನಾಗಶ್ರೀಯೂ ದೀಕ್ಷೆಯನ್ನು ಗ್ರಹಿಸಿದಳು. ಇದನ್ನೆಲ್ಲ ನೋಡಿದ ನಾಗಶರ್ಮನೂ ಅವನ ಹೆಂಡತಿ ತ್ರಿವೇದಿಯೂ ವಿರಕ್ತಿ ತಲೆದೋರಿ ದೀಕ್ಷೆಗೊಂಡರು. ಸೂರ್ಯಮಿತ್ರನಿಗೆ ಮನಃಪರ್ಯಯಜ್ಞಾನವೂ ಅಗ್ನಿಭೂತಿಗೆ ಅವಧಿಜ್ಞಾನವೂ ಬಂದನಂತರ ಅವರಿಬ್ಬರೂ ಅನೇಕ ಧರ್ಮಕ್ಷೇತ್ರಗಳಲ್ಲಿ ಸಂಚಾರ ಮಾಡುತ್ತ ರಾಜಗೃಹಕ್ಕೆ ಬಂದು, ಅಲ್ಲಿಯ ಸುಬಳಮಹಾರಾಜನಿಂದ ಸತ್ಕೃತರಾಗಿ ಆಗ ಅಲ್ಲಿಗೇ ಬಂದು ಇದ್ದ ವತ್ಸದೇಶದ ದೊರೆ ಅತಿಬಳನಿಗೆ ಉಪದೇಶಮಾಡಿ, ಅವನಿಗೂ ದೀಕ್ಷಾಪ್ರಸಾದವನ್ನು ನೀಡಿದರು. ಅಲ್ಲಿಂದ ಹೊರಟು ವಾರಣಾಸಿಗೆ ಅವರು ಬಂದರು. ಅಲ್ಲಿ ಸೂರ್ಯಮಿತ್ರನು ತಪಸ್ಸು ಮಾಡಿ ಕೇವಲಜ್ಞಾನವನ್ನು ಪಡೆದು ದೇವತೆಗಳಿಂದ ಪೂಜಿತನಾಗಿ ಮುಕ್ತಿಗೆ ಸಂದನು. ಅಗ್ನಿಭೂತಿಯೂ ಕರ್ಮಕ್ಷಯವನ್ನು ಮಾಡಿ ಮೋಕ್ಷವನ್ನು ಪಡೆದನು. ನಾಗಶ್ರೀಯೂ ತಪಸ್ಸು ಮಾಡಿ ಹಲವು ನೋಂಪಿಗಳನ್ನು ಆಚರಿಸಿ, ಸಲ್ಲೇಖನೆಯಿಂದ ಮುಡಿದು ಹದಿನಾರನೆಯ ಸ್ವರ್ಗದಲ್ಲಿ ಪದ್ಮಪ್ರಭನೆಂಬ ದೇವನಾಗಿ ಹುಟ್ಟಿ ಸುರಲೋಕ ಸುಖವನ್ನು ಅನುಭವಿಸುತ್ತಿದ್ದಳು.

ಇತ್ತ ಅವಂತೀ ದೇಶದ ಉಜ್ಜೇನಿಯೆಂಬ ಪುರದಲ್ಲಿ ವೃಷಭಾಂಕನೆಂಬ ರಾಜನು ಆಳುತ್ತಿದ್ದನು; ಅವನ ರಾಣಿ ಲಕ್ಷ್ಮಣಾದೇವಿ. ಅವನ ಪ್ರಧಾನ ಶ್ರೇಷ್ಠಿ ಇಂದ್ರದತ್ತನೆಂಬವನು, ಅತಿಶ್ರೀಮಂತನು; ಇವನ ಮಡದಿ ಶೀಲವತಿಯೂ ಗುಣವತಿಯೂ ಆದ ಮನೋರಮೆ. ಈ ಇಬ್ಬರಿಗೂ ಮಗ ಸೂರದತ್ತ. ಅವನ ಹೆಂಡತಿ ಯಶೋಭದ್ರೆ, ಮಕ್ಕಳಿಲ್ಲದ ಚಿಂತೆಯಿಂದ ಕೊರಗುತ್ತಿದ್ದಳು. ಒಂದು ದಿನ ಅಭಿನಂದನ ಮುನೀಂದ್ರರೆಂಬ ಯತಿಗಳು ಅಲ್ಲಿಗೆ ಬಂದರು.

ರಾಜನೂ ರಾಣಿಯೂ ಅವರನ್ನು ಇದಿರುಗೊಂಡು ಗೌರವಿಸಿದರು. ಯಶೋಭದ್ರೆಯೂ ಆ ಯತಿಯನ್ನು ಕಂಡು ತನಗೆ ಮುಂದೆ ಮಗನಾಗುತ್ತಾನೆಂಬ ಭವಿಷ್ಯವನ್ನು ಅವರಿಂದ ಕೇಳಿ ಸಂತೋಷಪಟ್ಟಳು. ಆದರೆ ಪುತ್ರಮುಖವನ್ನು ಕಂಡಕೂಡಲೆ ಅವನ ತಂದೆ ತಪಸ್ಸಿಗೆ ಹೋಗುವನೆಂದೂ ಯತಿಯ ರೂಪವನ್ನು ಕಂಡಾಗಲೆ ಮಗನೂ ವಿರಕ್ತನಾಗುವನೆಂದೂ ಅವರು ಹೇಳಿದ ಮಾತು ಅವಳಿಗೆ ದುಃಖವನ್ನೂ ಉಂಟುಮಾಡಿತು. ಕೆಲವು ತಿಂಗಳಾದನಂತರ ಯಶೋಭದ್ರೆಯ ಗರ್ಭದಲ್ಲಿ ಪದ್ಮಪ್ರಭನೆಂಬ ದೇವತೆ ಅವತರಿಸಿದನು. ಒಂಬತ್ತು ತಿಂಗಳು ಕಳೆದ ನಂತರ ಯಶೋಭದ್ರೆ ಮಗನನ್ನು ಹೆತ್ತಳು. ಊರಲ್ಲೆಲ್ಲ ಉತ್ಸವವಾಯಿತು. ಮಗುವನ್ನು ನೋಡಲು ಬಂದ ಸೂರದತ್ತ ತನ್ನ ಮನೋರಥ ಸಫಲವಾಯಿತೆಂದು ಸಂತೋಷಪಟ್ಟು, ವಿರಕ್ತನಾಗಿ, ಸುಷೇಣರೆಂಬ ಮುನಿಯಿಂದ ದೀಕ್ಷೆಯನ್ನು ತಾಳಿದನು. ಯಶೋಭದ್ರೆ ಪುತ್ರಮೋಹಕ್ಕೆ ಸಿಕ್ಕಿ ಇನಿಯನ ಹಿಂದೆ ಹೋಗಲಾರದೆ ಜಿನನಿಗೆ ಅಭಿಷೇಕ ಮಾಡಿಸಿದಳು; ಮಗನಿಗೆ ಸುಕುಮಾರನೆಂದು ನಾಮಕರಣಮಾಡಿಸಿದಳು. ಮಗು ದಿನದಿನಕ್ಕೆ ಬೆಳೆಯುತ್ತ ಹರೆಯಕ್ಕೆ ಕಾಲಿಡುತ್ತಿರಲು ಯಶೋಭದ್ರೆಗೆ 'ಇವನೂ ತನ್ನ ತಂದೆಯಂತೆ ಸಂನ್ಯಾಸಿಯಾದರೆ ಏನುಗತಿ' ಎಂಬ ಹೆದರಿಕೆಯುಂಟಾಗಿ, ಮಗನನ್ನು ಯಾರೂ ಕಾಣಕೂಡದೆಂದು, ಅರಮನೆಯನ್ನು ಕಟ್ಟಿಸಿ ಅದರ ಸುತ್ತ ವಿಶಾಲವಾದ ನಂದನವನವನ್ನು ಮಾಡಿಸಿ, ಅಲ್ಲಿ ಮಗನನ್ನು ಇರಿಸಿದಳು. ಯತಿ ಹೋಗಲಿ, ಯತಿಯ ಚಿತ್ರ ಕೂಡ ಅವನ ಕಣ್ಣಿಗೆ ಬೀಳದಂತೆ ಆಕೆ ಎಚ್ಚರಿಕೆಯಿಂದಿದ್ದಳು. ಹೀಗೆ ಸುಕುಮಾರನು ಬೆಳೆದು ಹದಿನಾರುವರ್ಷದ ಚೆಲುವನಾದನು; ಯೌವನ ವಿಭೂತಿ ಅವನ ತನುವನ್ನು ಆವರಿಸಿತು. ಮಗನಿಗೆ ಮದುವೆಯ ಕಾಲ ಸಮೀಪಿಸಿತೆಂದು ತಾಯಿ ಸಮಾನ ಕುಲರೂಪ ವಿಭವಗಳನ್ನುಳ್ಳ ಮೂವತ್ತೆರಡು ಕನ್ಯೆಯರನ್ನು ತಂದು ವೈಭವದಿಂದ ಅವನಿಗೆ ಮದುವೆ ಮಾಡಿದಳು. ಅವರೆಲ್ಲ ತಂತಮ್ಮ ವಿಲಾಸ ವಿಭ್ರಮಗಳಿಂದ ಸುಕುಮಾರನ ಮನಸ್ಸನ್ನು ಒಲಿಸಿ, ನಾನಾ ವಿನೋದಗಳನ್ನು ಅವನಿಗೆ ಸಲ್ಲಿಸಿ ಸುಖವಾಗಿದ್ದರು. ತನ್ನ ಹೆಂಡಿರಲ್ಲದೆ ಬೇರೆ ಹೆಂಗಸರನ್ನು ಅವನು ಕಾಣನು; ರತ್ನದ ನೆಲಗಟ್ಟಿನ ಮೇಲೆ ನಡೆದವನೇ ಹೊರತು ನೆಲದ ಮೇಲೆ ಹೆಜ್ಜೆ ಇರಿಸಿದವನಲ್ಲ. ಎಲ್ಲ ಭೋಗಗಳನ್ನೂ ಅವನನುಭವಿಸುತ್ತಾ ಪ್ರಪಂಚದ ಕಷ್ಟ ಕಾರ್ಪಣ್ಯದ ಅರಿವೇ ಇಲ್ಲದಂತೆ ಬಾಳುತ್ತಿದ್ದನು.

ಒಂದು ದಿನ ಝುಂಝೂವೇಗನೆಂಬ ವ್ಯಾಪಾರಿ ಆ ಊರಿಗೆ ರತ್ನಕಂಬಳಿಯನ್ನು ಮಾರುವುದಕ್ಕಾಗಿ ಬಂದು, ದೊರೆಯಾದ ವೃಷಭಾಂಕನನ್ನು ಕಂಡು, ಅಪೂರ್ವವಸ್ತುಗಳನ್ನು ನಿನಗಾಗಿ ತಂದಿದ್ದೇನೆಂದು ತೊಳಗಿ ಬೆಳಗುವ ರತ್ನಗಂಬಳಿಯೊಂದನ್ನು ಅವನ ಮುಂದಿರಿಸಿದನು. ದೊರೆ ಅಚ್ಚರಿಪಟ್ಟು, ಇಂಥ ವಸ್ತುಗಳನ್ನು ಹಣಕೊಟ್ಟು ತೆಗೆದುಕೊಳ್ಳಲು ತನಗೆ ಸಾಮರ್ಥ್ಯವಿಲ್ಲವೆಂದು, ವ್ಯಾಪಾರಿಗೆ ತಾಂಬೂಲ ಕೊಟ್ಟು ಕಳಿಸಿಬಿಟ್ಟನು. ಊರಲ್ಲಿ ಯಾರಾದರೂ ಶ್ರೀಮಂತರಾದ ವರ್ತಕರಿದ್ದರೆ ಅವರಿಗೆ ತಿಳಿಸೋಣವೆಂದು ಆ ಹರದನು ಅಲ್ಲಿ ಇಲ್ಲಿ ಅಲೆದಾಡುತ್ತಾ ಯಶೋಭದ್ರೆಯ ಮನೆಗೆ ಬಂದು ರತ್ನಗಂಬಳಿಯನ್ನು ತೋರಿಸಿದಾಗ, ಅವಳು ಅದಕ್ಕೆ ಬೆಲೆ ಕಟ್ಟಿಸಿ ಅದನ್ನು ಕೊಂಡುಕೊಂಡಳು. ಮಗನು ಹೊದೆಯಲೆಂದು ಅದನ್ನು ಅವಳು ಅವನಿಗೆ ಕಳಿಸಿದಾಗ ಮಗ ನೋಡಿ "ಇದನ್ನು ಹೊದೆದರೆ ಸೆಕೆಯಾಗುತ್ತದೆ. ಇದು ನನಗೆ ಬೇಡ. ನಿಮಗೆ ಮೆಚ್ಚಿಗೆಯಾದ ಸೊಸೆಗೆ ಇದನ್ನು ಕೊಡಿ" ಎಂದು ಹಿಂದಕ್ಕೆ ಕಳಿಸಿಬಿಟ್ಟನು. ಒಬ್ಬಳಿಗೆ ಕೊಟ್ಟರೆ ಪಕ್ಷಪಾತವಾದೀತೆಂದು ಆಕೆ ಅದನ್ನು ತುಂಡುಮಾಡಿಸಿ ಎಲ್ಲರಿಗೂ ಮೆಟ್ಟುವ ಹಾವುಗೆಗಳನ್ನು ಮಾಡಿಸಿಕೊಟ್ಟಳು. ಈ ವಿಷಯ ವೃಷಭಾಂಕನಿಗೆ ತಿಳಿದು ತಾನು ಕೊಳ್ಳಲಾಗದ ವಸ್ತುವನ್ನು ಕೊಂಡವರು ಯಾರೆಂದು ವಿಸ್ಮಿತನಾಗಿ, ಕಣ್ಣಿಂದ ನೋಡೋಣವೆಂದು ಆ ರಾಜ ಯಶೋಭದ್ರೆಯ ಮನೆಗೆ ಬಂದನು.

ಯಶೋಭದ್ರೆ ಬಂದ ರಾಜನನ್ನು ತಕ್ಕ ಮನ್ನಣೆಗಳಿಂದ ಸತ್ಕರಿಸಿದ ಮೇಲೆ ರಾಜ "ನಮ್ಮ ತಮ್ಮನೆಲ್ಲಿ? ಅವನನ್ನು ನೋಡಲು ಬಂದೆ" ಎಂದನು. ಕೂಡಲೆ ಸುಕುಮಾರನನ್ನು ಕರೆತರುವಂತೆ ಸೇವಕರಿಗೆ ಯಶೋಭದ್ರೆ ಸೂಚಿಸಲು ಅವರು ಹೋಗಿ ಅವನನ್ನು ಕರೆತಂದರು. "ಈತ ನಮ್ಮ ದೊರೆ, ಸ್ವಾಮಿ, ನಿನ್ನನ್ನು ನೋಡಲು ಮನೆಗೆ ಬಂದಿದ್ದಾರೆ. ಭಕ್ತಿಯಿಂದ ನಮಸ್ಕರಿಸು" ಎಂದು ತಾಯಿ ಮಗನಿಗೆ ಹೇಳಿದಳು. ಇದೆಲ್ಲ ಏಕೆ ಎಂದು ದೊರೆ ತನ್ನ ಸುಖಾಸನಾರ್ಧದಲ್ಲಿ ಸುಕುಮಾರನನ್ನು ಕುಳ್ಳಿರಿಸಿಕೊಂಡನು. ಐದೆಯರು ಅಕ್ಷತೆಯನ್ನು ತಳಿದರು. ಈ ದೃಶ್ಯವನ್ನು ನೆರೆದ ನಗರ ನಾರಿಯರೆಲ್ಲ ನೋಡುತ್ತಿರಲು, ಸುಕುಮಾರನೊಡನೆ ಊಟಕ್ಕೇಳಬೇಕೆಂದು ರಾಜನನ್ನು ಒಪ್ಪಿಸಿ ಯಶೋಭದ್ರೆ ರುಚಿ ರುಚಿಯಾದ ಭೋಜನವನ್ನು ಬಡಿಸಿದಳು. ಆರೋಗಣೆಯಾದ ಮೇಲೆ

ಗಂಧತಾಂಬೂಲಾದಿಗಳನ್ನು ಸ್ವೀಕರಿಸಿ ಆಸನದಲ್ಲಿ ಕುಳಿತುಕೊಂಡು ದೊರೆ "ಸುಕುಮಾರನು ನಿಜವಾಗಿಯೂ ಸುಖಿ. ಆದರೆ ನನಗೊಂದು ಚಿಂತೆ. ಪೀಠದ ಮೇಲೆ ಅವನು ಸುಖವಾಗಿ ಕುಳ್ಳಿರಲಾರ; ಕಣ್ಣು ತುಂಬ ನೀರು ಸೋರುತ್ತದೆ; ಒಂದಗುಳನ್ನು ಉಗುಳಿ ಇನ್ನೊಂದನ್ನು ಕ್ಲೇಶದಿಂದ ನುಂಗುತ್ತಾನೆ; ಸುಮ್ಮನೆ ಬೆಚ್ಚಿದ ಹಾಗೆ ಆಡುತ್ತಾನೆ. ಏನೋ ಜಾಡ್ಯ ಇರಬೇಕು. ವೈದ್ಯರಿಗೆ ತೋರಿಸಿ ಮದ್ದು ಕೊಡಿಸಿರಿ" ಎಂದನು ಈ ಮಾತನ್ನು ಕೇಳಿ ನಗುತ್ತಾ ಯಶೋಭದ್ರೆ "ನಿಮ್ಮ ತಮ್ಮನ ರೀತಿಯನ್ನು ಏನೆಂದು ಹೇಳಲಿ! ಹುಟ್ಟಿದಾಗಿನಿಂದ ಅವನು ಸ್ವಾಮಿ-ಭೃತ್ಯ, ಒಡೆಯ—ಬಡವ, ಹಗಲು-ಇರುಳು ಮುಂತಾದ ಭೇದವನ್ನು ಕಂಡರಿಯ; ಉಪ್ಪರಿಗೆಯಿಂದ ಕೆಳಕ್ಕೆ ಇಳಿದವನೇ ಅಲ್ಲ; ನೀವು ಬಂದದ್ದರಿಂದ ಇಂದು ಇಲ್ಲಿಯವರೆಗೆ ಬಂದ. ಪೀಠದ ಮೇಲೆ ಬಿದ್ದ ಅಕ್ಷತೆಯ ಕಾಳು ಕುಳಿತು ಕೊಂಡಾಗ ಒತ್ತಲು ಅಲುಗಾಡುತ್ತಿದಾನೆ. ರತ್ನದೀಪದ ಬೆಳಕಲ್ಲದೆ ಬೇರೆ ಬೆಳಕು ಅವನಿಗೆ ಹಿತವಾಗದು; ಇಂದು ಎತ್ತಿದ ಮಂಗಳಾರತಿಯ ಬೆಳಕನ್ನು ನೋಡಿ ಕಣ್ಣಲ್ಲಿ ನೀರು ಬಂತು. ಚಂದ್ರಕಾಂತಶಿಲೆಯ ಜಲ, ತೆಂಗಿನ ಎಳನೀರು, ಕಬ್ಬಿನ ರಸ–ಇವುಗಳನ್ನು ಹಾಯಿಸಿ ಬೆಳಸಿದ ಗಂಧಶಾಲಿಯ ಭತ್ತದೊಡನೆ ನಮ್ಮ ಗೃಹೋದ್ಯಾನದ ಕಮಲ ಪುಷ್ಪಗಳನ್ನು ಸೇರಿಸಿ, ಹಿಂದಿನ ದಿನವೇ ಕುಟ್ಟಿ ಕಟ್ಟಿಟ್ಟ ಅಕ್ಕಿಯನ್ನು ತಿನ್ನುವ ಅಭ್ಯಾಸ ಆತನಿಗೆ. ಇಂದು ತಾವು ಬಂದುದ ರಿಂದ ಆ ಅಕ್ಕಿಯೊಡನೆ ಬೇರೆ ಸ್ವಲ್ಪ ಅಕ್ಕಿಯನ್ನು ಸೇರಿಸಿ ಅಡುಗೆ ಮಾಡಿತ್ತು. ಆದ್ದರಿಂದ ಆತ, ಪುಷ್ಪವಾಸನೆಯುಳ್ಳ ಅನ್ನದ ಅಗುಳನ್ನು ನುಂಗಿ ವಾಸನೆಯಿಲ್ಲದ ಅಗುಳನ್ನು ಉಗುಳುತ್ತಿದ್ದಾನೆ. ಇಂದಿನವರೆಗೆ ಆತನು ತನ್ನ ಪರಿಚಾರಕ ರನ್ನೂ ವಧೂಜನರನ್ನೂ ಹೊರತು ಬೇರೊಬ್ಬರ ಪ್ರಸಂಗವನ್ನು ಕಂಡವನಲ್ಲ. ಇಂದು ದೇವರು ದಯಮಾಡಿಸಿರುವುದರಿಂದ ಜನ ಸಂಕೀರ್ಣ ಹೆಚ್ಚಿ ಆತ ಬೆಚ್ಚಿದಂತೆ ಕಾಣಿಸುತ್ತಾನೆ. ಅಷ್ಟೇ ಹೊರತು ಈ ಕಲ್ಯಾಣಶರೀರಿಗೆ ಯಾವ ರುಜೆಯೂ ಇಲ್ಲ" ಎಂದಳು. ಆತನ ಈ ವಿಭೂತಿಗೆ ರಾಜನು ಆಶ್ಚರ್ಯಪಟ್ಟು, ಸುಕುಮಾರನೆಂಬ ಆತನ ಹೆಸರು ಅನ್ವರ್ಥವಾಗಿ ಸಾರ್ಥಕ ವಾಗಿದೆಂದು ಹೊಗಳಿ, ಯಶೋಭದ್ರಾಂಬಿಕೆಯಿಂದ ಅನರ್ಘ್ಯವಾದ ಬಹುಮಾನ ಗಳನ್ನು ಪಡೆದು ಸಂತೋಷದಿಂದ ಅರಮನೆಗೆ ಹಿಂದಿರುಗಿದನು.

ಹೀಗೆ ಸುಕುಮಾರನು ವೈಭವದಲ್ಲಿ ದೇವೇಂದ್ರನನ್ನೂ ಸೌಂದರ್ಯದಲ್ಲಿ

ಮನ್ಮಥನನ್ನೂ ಕಾಂತಿಯಲ್ಲಿ ಚಂದ್ರನನ್ನೂ ಭೋಗದಲ್ಲಿ ಆದಿಶೇಷನನ್ನೂ ಐಶ್ವರ್ಯದಲ್ಲಿ ಕುಬೇರನನ್ನೂ ಮೀರಿಸಿ, ಅತ್ಯಂತ ಸುಖದಿಂದ ಜೀವಿಸುತ್ತಿದ್ದನು. ಹೀಗಿರುತ್ತಿರಲು ಒಂದು ಆಷಾಢಮಾಸದ ಶುಕ್ಲ ಚತುರ್ದಶಿಯ ದಿನ ಯಶೋಭದ್ರಸ್ವಾಮಿಗಳೆಂಬ ಕೇವಲ ಜ್ಞಾನಿಗಳು ಸುಕುಮಾರನ ಭವ್ಯತೆಯ ಕಾಲವನ್ನರಿತು, ಪೂರ್ವಾರ್ಜಿತ ಪುಣ್ಯವೇ ಸಾರಿಬಂದಂತೆ ಆತನ ಗೃಹೋದ್ಯಾನದಲ್ಲಿದ್ದ ಜಿನಾಲಯಕ್ಕೆ ಬಂದು ತಂಗಿದರು. ಪೂರ್ವಾಶ್ರಮದಲ್ಲಿ ಅವರು ಸುಕುಮಾರನ ಸೋದರಮಾವಂದಿರಾಗಿದ್ದವರು. ಅವರ ಆಗಮನ ವೃತ್ತಾಂತವನ್ನು ಕೇಳಿದೊಡನೆಯೇ ಯಶೋಭದ್ರಾಂಬಿಕೆ ಪೂಜಾದ್ರವ್ಯಗಳೊಡನೆ ಅವರ ಬಳಿಗೆ ಬಂದು, ಅವರನ್ನು ಯಥಾವಿಧಿಯಾಗಿ ಪೂಜಿಸಿದಳು. ಹಿಂದೆ ಅಭಿನಂದನ ಮುನಿಗಳು ಹೇಳಿದ್ದ ಮಾತನ್ನು ಜ್ಞಾಪಿಸಿಕೊಂಡು, ಯತಿದರ್ಶನದಿಂದ ಮಗನೆಲ್ಲಿ ವಿರಕ್ತನಾಗುವನೋ ಎಂಬ ಹೆದರಿಕೆಯಿಂದ ಆಕೆ ಮುನಿಯನ್ನು ಕುರಿತು "ಭಟ್ಟಾರಕರೆ, ನೀವಿಲ್ಲಿರಬೇಡಿರಿ. ಬೇರೆಲ್ಲಿಗಾದರೂ ಬಿಜಯಮಾಡಿಸಿ" ಎಂದಳು. ಆದರೆ ಯಶೋಭದ್ರಸ್ವಾಮಿಗಳು ಆಗಲೇ ಚಾತುರ್ಮಾಸದ ವ್ರತವನ್ನು ಕೈಕೊಂಡಿದ್ದುದರಿಂದ ಅಲ್ಲಿಂದ ಕದಲುವುದು ಅಸಾಧ್ಯವೆಂದು ಹೇಳಲು, ಆಕೆಯು "ನೀವು ಇಲ್ಲಿರುವವರೆಗೆ ಮೌನದಿಂದಿರಬೇಕು" ಎಂದು ಪ್ರಾರ್ಥಿಸಿದಳು. ಮುನಿಗಳು ಹಾಗೆ ಆಗಲೆಂದು ಒಪ್ಪಿಕೊಳ್ಳಲು ಆಕೆ ನಿಶ್ಚಿಂತೆಯಿಂದ ಮನೆಗೆ ಹೊರಟುಹೋದಳು.

ಯಶೋಭದ್ರಸ್ವಾಮಿಗಳ ಚಾತುರ್ಮಾಸದ ವ್ರತ ಕಾರ್ತಿಕ ಪೂರ್ಣಿಮೆಗೆ ಕೊನೆಗೊಂಡಿತು. ಅಂದು ಅರ್ಧರಾತ್ರಿಯಾದ ಮೇಲೆ ಅವರು ಮೌನವನ್ನು ಮುರಿದು ತ್ರಿಲೋಕ ಪ್ರಜ್ಞಪ್ತಿಯನ್ನು ಹಾಡಿದರು. ಆಗ ಸುಕುಮಾರ ತನ್ನ ಅರಮನೆಯ ಉಪ್ಪರಿಗೆಯ ಮೇಲೆ ಹಂಸತೂಲಿಕಾತಲ್ಪದಲ್ಲಿ ಮಡದಿಯ ತೋಳ್ತೆಕ್ಕೆಯಲ್ಲಿ ಸುಖನಿದ್ರಾಸಕ್ತನಾಗಿದ್ದನು. ಮುನಿಯ ಹಾಡಿನಿಂದ ಆತನಿಗೆ ಎಚ್ಚರವಾಯಿತು. ಅದನ್ನು ಕೇಳುತ್ತಾ ಹೋದಂತೆ ಆತನಿಗೆ ಪೂರ್ವಜನ್ಮಸ್ಮರಣೆಯಾಯಿತು. ಅದರೊಡನೆ ಉತ್ಕಟವಾದ ವೈರಾಗ್ಯವೂ ಉದಿಸಿತು.

ಅನುಪಮ ದಿವಿಜ ಸುಖಾಮೃತ
ವನನಿಧಿಯಂ ಪೀರ್ದು ತೀರ್ದು ತೃಷ್ಣೆ ಪೋಗದೆ ಮಾಯ್ದೀ
ಮನುಜಸುಖಮೆಂಬ ಮಂಜಿನ
ಪನಿಪುಲ್ಲಂ ನಕ್ಕೆ ತೃಷ್ಣೆತಾಂ ಪೋದಪುದೆ?

ಎಂದುಕೊಂಡು,

ಕಡೆಯಿಲ್ಲದ ಸಂಸಾರದ
ಕಡೆಯಂ, ಕಡೆಯುಪ್ಪೆ ಕಟ್ಟೆ ಕಡೆನೂಲ್ಪಿ ಗುಣಂ
ಕಡೆಗೋಡಿವರಿಯೆ ಮೋಕ್ಷದ
ಕಡೆಯಿಲ್ಲದ ಪರಮಸುಖಮನೀಗಳೆ ಪಡೆವೆಂ

ಎಂದು ನಿಶ್ಚಯಿಸಿದನು. ಆದರೆ ಕಾಪಿನ ಭಟರು ಸದಾ ಎಚ್ಚರವಾಗಿರುವುದರಿಂದ ಯಾರೂ ಅರಿಯದಂತೆ ಮನೆಯನ್ನು ಬಿಟ್ಟು ಹೊರಡಲು ಸಾಧ್ಯವಿರಲಿಲ್ಲ. ಆದ್ದರಿಂದ ತನ್ನ ದಿವ್ಯವಸ್ತ್ರಗಳನ್ನು ಒಂದನ್ನೊಂದು ಗಂಟಿಕ್ಕಿ ಆ ವಸ್ತ್ರಮಾಲೆಯನ್ನು ಮಹಡಿಯ ಮೇಲಿನ ಕಂಭಕ್ಕೆ ಬಿಗಿದು ಕೆಳಕ್ಕೆ ಇಳಿಯಬಿಟ್ಟನು. ಅನಂತರ ಅದನ್ನು ಹಿಡಿದುಕೊಂಡು ಸಂಸಾರ ಮಹಾಪರ್ವತದಿಂದ ಕೆಳಗಿಳಿಯುವಂತೆ ಉಪ್ಪರಿಗೆಯಿಂದ ಕೆಳಕ್ಕಿಳಿದವನೇ ನೇರವಾಗಿ ಗೃಹೋಪವನದ ಜಿನಾಲಯಕ್ಕೆ ನಡೆದು, ಅಲ್ಲಿನ ಮುನಿಪದಕ್ಕೆರಗಿ" ದೀಕ್ಷೆಯಿಚ್ಛಾಮಿ" ಎಂದನು. ಒಡನೆಯೇ ಮುನಿಗಳು "ಧರ್ಮವೃದ್ಧಿಯಕ್ಕೆ'' ಎಂದು ಆಶೀರ್ವದಿಸಿ "ಅಯ್ಯಾ, ಆಯುರವಧಿ ಇನ್ನು ಮೂರುದಿನಗಳು ಮಾತ್ರ. ಅಷ್ಟರಲ್ಲಿ ನಿನ್ನ ಉದ್ಧಾರ ಮಾರ್ಗವನ್ನು ನೋಡಿಕೊ'' ಎಂದರು. ಸುಕುಮಾರನು ತನ್ನ ಅಪರಿಮಿತವಾದ ಐಶ್ವರ್ಯವನ್ನೆಲ್ಲಾ ಕೊಳೆತ ಹುಲ್ಲುಕಡ್ಡಿಯೊಂದನ್ನು ಕಿತ್ತು ಒಗೆಯುವಂತೆ ತ್ಯಜಿಸಿ, ಮುನಿಗಳಿಂದ ದೀಕ್ಷೆಯನ್ನು ಪಡೆದನು. ತಪಸ್ಸನ್ನಾಚರಿಸಲು ತಕ್ಕಷ್ಟು ಕಾಲವ್ಯವಧಾನವಿಲ್ಲದುದರಿಂದ ಆತನು ತ್ರಿಕರಣಶುದ್ಧಿಯಿಂದ ಸಂನ್ಯಸನವನ್ನು ಸ್ವೀಕರಿಸಿ, ಪ್ರಾಯೋಪವೇಶದಿಂದ ಆತ್ಮಾನುಸಂಧಾನದಲ್ಲಿ ನಿರತನಾಗುವಂತೆ ಗುರುಗಳು ಅಪ್ಪಣೆಮಾಡಿದರು. ಅವರ ಬೋಧಾಮೃತದಿಂದ ಸಂತೃಪ್ತನಾದ ಸುಕುಮಾರನು ಅವರನ್ನು ಭಕ್ತಿಯಿಂದ ಸ್ತುತಿಸುತ್ತಿರುವಷ್ಟರಲ್ಲಿ ಬೆಳಕು ಹರಿದು ನೇಸರು ಮೂಡಿತು. ಯಶೋಭದ್ರಮುನಿಗಳು ಜಿನಾಲಯಕ್ಕೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ, ದಕ್ಷಿಣದಿಕ್ಕಿಗೆ ಪ್ರಯಾಣಮಾಡಿ, ಉಜ್ಜಯಿನಿಯ ಬಹಿರುದ್ಯಾನದಲ್ಲಿದ್ದ ತ್ರಿಭುವನ ತಿಲಕವೆಂಬ ಚೈತ್ಯಾಲಯವನ್ನು ಸೇರಿದರು. ಸುಕುಮಾರಸ್ವಾಮಿಯು ಉತ್ತರದಿಕ್ಕನ್ನು ಹಿಡಿದು ಪ್ರಯಾಣಮಾಡಿದನು. ನೆಲದ ಮೇಲೆ ಹೆಜ್ಜೆಯಿಟ್ಟು ಅರಿಯದ ಆ ಸುಕುಮಾರನು ಕಲ್ಲುಮುಳ್ಳುಗಳನ್ನು ತುಳಿಯುತ್ತಾ ನಡೆಯುತ್ತಿರಲು ಆತನ ಪಾದ

ಗಳಿಂದ ನೆತ್ತರು ಚಿಮ್ಮಿ ಹರಿಯಿತು. ಆದರೂ ಆ ಸಂಯಮಿಯು ಎದೆಗುಂದದೆ ಮುಂದೆ ನಡೆದು, ಮಹಾಕಾಳವೆಂಬ ಶ್ಮಶಾನವನ್ನು ಪ್ರವೇಶಿಸಿದನು. ಅಲ್ಲಿ ಯೋಗ ಯೋಗ್ಯವಾದ ಒಂದು ಸ್ಥಳವನ್ನು ಹುಡುಕಿ ತಪಸ್ಸಿಗೆ ಕುಳಿತನು.

ಇತ್ತ ಸುಕುಮಾರನ ಅರಮನೆಯಲ್ಲಿ, ಗಂಡನೊಡನೆ ಪವಡಿಸಿದ್ದ ಮನೋಹರಿಯೆಂಬವಳು ಬೆಳಗಾದೊಡನೆ ಮೇಲಕ್ಕೆದ್ದು ತನ್ನ ಮನೋವಲ್ಲಭನನ್ನು ಕಾಣದೆ ತಳಮಳಗೊಳ್ಳುತ್ತಾ ದಾಸಿಯರೊಡನೆ ಉಪ್ಪರಿಗೆಯಲ್ಲಿದ್ದ ಕೊಠಡಿಗಳಲ್ಲೆಲ್ಲಾ ಹುಡುಕಿದರೂ ಆತನು ಕಾಣದಿರಲು, ಅತ್ತೆಯೊಡನೆ ಆ ವಿಚಾರವನ್ನು ತಿಳಿಸಿದಳು. ಇದನ್ನು ಕೇಳಿದ ಯಶೋಭದ್ರಾಂಬಿಕೆ ಭಯಾತಂಕಗಳಿಂದ ಒಡನೆಯೇ ಮೂರ್ಛೆ ಹೋದಳು. ಸುತ್ತುಮುತ್ತಿದ್ದವರು ಮಾಡಿದ ಶೈತ್ಯೋಪಚಾರದಿಂದ ಎಚ್ಚತ್ತ ಆಕೆ ಸೊಸೆಯರೆಲ್ಲರನ್ನೂ ಕರೆದುಕೊಂಡು ಅರಮನೆಯ ಒಂದು ಭಾಗವನ್ನೂ ಬಿಡದೆ ಅರಸುತ್ತ ಬರಲಾಗಿ, ಕಡೆಗೆ ಉಪ್ಪರಿಗೆಯ ಮೇಲೆ ಕಂಭಕ್ಕೆ ಕಟ್ಟಿ ಇಳಿಯಬಿಟ್ಟಿದ್ದ ವಸ್ತ್ರ ಕಾಣಿಸಿತು. ಮಗನು ಅಲ್ಲಿಂದಲೇ ಇಳಿದು ಹೋಗಿರುವನೆಂದು ಯಶೋಭದ್ರೆಗೆ ನಿಶ್ಚಯವಾಯಿತು. ಆಕೆ ಆತ್ಮೀಯರಾದವರೊಡನೆ ಗೃಹೋದ್ಯಾನವನ್ನೆಲ್ಲಾ ಕೇವಲ ಉತ್ಕಂಠಿತಳಾಗಿ, ಹುಡುಕ ಹೊರಟಳು. ಸುಕುಮಾರನ ಮೂವತ್ತೆರಡು ಜನ ಮಡದಿಯರೂ ಅತ್ಯಂತ ಶೋಕ ವಿಹ್ವಲರಾಗಿ

ಎಳೆಮಾವೇ ಲತೆಯೇ ತಮಾಳ ಚಯಮೇ ಪೆಣ್ಣಂಚೆಯೇ ಕೊಂಚೆಯೇ
ವಿಲಸಚ್ಚಂಪಕಮೇ ಲಸತ್ಪುಳಿನಮೇ ಪುನ್ನಾಗಮೇ ಪೂಗಮೇ
ಕೊಳನೇ ಪಂಕಜಮೇ ನಮೇರುಕುಜಮೇ ಬಾಲ್ಚಿಬ್ಬೊಂಪಮೇ ಕೋಗಿಲೇ
ಗಿಳಿಯೇ ಕಂಡಿರೆ ಪೇೞಿಮೆಮ್ಮ ಪತಿಯಂ ಶ್ರೀರೂಪ ಕಂದರ್ಪನಂ

ಎಂದು ತರು, ಲತೆ, ವನಚರಗಳನ್ನೆಲ್ಲಾ ಕೇಳಿ ಗೋಳಾಡಲಾರಂಭಿಸಿದರು. ಎಲ್ಲಿ ಹುಡುಕಿದರೂ ಸುಕುಮಾರನ ಸುಳಿವೇ ಇಲ್ಲದುದರಿಂದ, ಹುಡುಕುತ್ತಿದ್ದವರೆಲ್ಲರೂ ಆಶಾಭಂಗದಿಂದ ಮನೆಗೆ ಹಿಂತಿರುಗಿದರು. ಪದ್ಮವಿಲ್ಲದ ಸರೋವರದಂತೆ, ಸುಕುಮಾರನಿಲ್ಲದೆ ಬಿಮ್ಮೆನುತಿದ್ದ ಕರುಮಾಡವನ್ನು ಕಂಡು, ಯಶೋಭದ್ರೆ ಕಾಡ ಮರಳಿನಲ್ಲಿ ಬಿದ್ದ ಎಳವಾಳೆಯಂತೆ ಸಂಕಟದಿಂದ ಸೊರಗಿಹೋದಳು.

ಈ ಕಡೆ, ಸುಕುಮಾರಸ್ವಾಮಿಗೆ ಪೂರ್ವಜನ್ಮದ ಅತ್ತಿಗೆಯಾದ ಸೋಮದತ್ತೆ ಹುಟ್ಟುಸಾವುಗಳ ರಾಟಳದಲ್ಲಿ ತೊಳಲುತ್ತಾ ಹೆಣ್ಣು ನರಿಯಾಗಿ ಹುಟ್ಟಿದ್ದವಳು,

ತನ್ನ ಎರಡು ಮರಿಗಳೊಡನೆ ಆಹಾರವನ್ನು ಹುಡುಕುತ್ತಾ, ಸುಕುಮಾರಸ್ವಾಮಿ ನಡೆದ ಹಾದಿಯಲ್ಲಿದ್ದ ಆತನ ಅಡಿವಜ್ಜೆಯ ನೆತ್ತರ ನಾತವನ್ನು ಹಿಡಿದು ಮಹಾ ಕಾಳ ಶ್ಮಶಾನವನ್ನು ಸೇರಿದಳು. ಅಲ್ಲಿ ಕರಣಗಳನ್ನೆಲ್ಲಾ ನಿರೋಧಿಸಿ, ನಿಷ್ಪಂದ ಶರೀರನಾಗಿ ಕುಳಿತಿದ್ದ ಋಷಿರೂಪಕನನ್ನು ಬರಿಯ ಒಂದು ಶವವೆಂದು ಭಾವಿಸಿ, ಆ ನರಿ ತಾನು ಒಂದು ಕಾಲನ್ನೂ ಮರಿಗಳು ಮತ್ತೊಂದು ಕಾಲನ್ನೂ ತೋಡಿ, ಸೀಳಿ, ತಿಂದುಹಾಕಿದುವು. "ಜೀವ ಬೇರೆ ಶರೀರ ಬೇರೆ" ಎಂಬ ಪರಮಾರ್ಥ ವನ್ನು ಅರಿತಿದ್ದ ಸುಕುಮಾರಸ್ವಾಮಿ ಆಕಡೆ ಗಮನಿಸಲೇ ಇಲ್ಲ. ಆತನ ಅಂತಃ ಕರಣವು ದ್ವಾದಶಾನುಪ್ರೇಕ್ಷೆಗಳ ಸ್ಮರಣೆಯಲ್ಲಿ ಮುಳುಗಿ ಹೋಗಿತ್ತು. ನರಿಗಳು ಮತ್ತೆರಡು ದಿನ ಬಂದು ಆತನ ದೇಹವನ್ನು "ಸೀಳ್ದು ಸೀರುಂಬುಳಾಡಿ" ತಿಂದು ಹಾಕಿದವು. ಆತನು

ಘುಗುಘುಗನುರ್ಚಿ ಪಾಯ್ದುಪಸಲೆ ದೇಹರಸಂ ಬಿಡುತೋಡಿತೆಲ್ಲಿಯುಂ
ಮೊಗರಸಮೋಡಿತಿಲ್ಲ; ದಿನಪಾಂಶುಗಳಟ್ಟುಪ್ಪಿ ಶರೀರಯಷ್ಟಿ ತೊ
ಟ್ಟಗೆ ಕಡುಗಂದಿ ಕುಂದಿ ಬಡವಾದುದು ಯೋಗನಿಯೋಗ ಭಾವದೊಳ್
ಬಗೆ ಬಡವಾದುದಿಲ್ಲ ನೆಗಟ್ದಾ ಸುಕುಮಾರ ಮಹಾಮುನೀಂದ್ರನಾ

ಆತನು ಸಿದ್ಧ ಪರಮೇಷ್ಠಿಗಳ ಅಷ್ಟಗುಣಗಳನ್ನು ನೆನೆಯುತ್ತಾ ಶುಕ್ಲಧ್ಯಾನ ದಲ್ಲಿರಲು ಆಯುಷ್ಯವು ಕೊನೆಗೊಂಡು ಆತನ ಪ್ರಾಣಪಕ್ಷಿ ದೇಹಪಂಜರದಿಂದ ಹಾರಿಹೋಯಿತು. ಹೀಗೆ ದೇಹವನ್ನು ತ್ಯಜಿಸಿದ ಸುಕುಮಾರಸ್ವಾಮಿ ಮೋಕ್ಷದ ನೆರೆಮನೆಯೆನಿಸಿದ್ದ ಸರ್ವಾರ್ಥಸಿದ್ಧಿಯೆಂಬ ವಿಮಾನದಲ್ಲಿ ಅಹಮಿಂದ್ರನಾಗಿ ಜನಿಸಿ ದನು. ಆತನ ಸುಖವೈಭವಗಳನ್ನು ವರ್ಣಿಸುವುದೆಂತು?

ಅಮರರ ಸುಖಮೆಲ್ಲಮನೊಂ
ದುಮಾಡಿ ಕೊಡಿದೊಡಮೆಂದುಮಹಮಿಂದ್ರರ ಸೌ
ಖ್ಯಮನೆಯ್ದೆವಾರವೆನೆ ಮ
ತ್ತೆ ಮನುಜರೇನೆಂದು ಪೊಗಟ್ವರಲ್ಲಿಯ ಸುಖಮಂ

ಇತ್ತ ಯಶೋಭದ್ರೆ ಸೊಸೆಯರೊಡನೆಯೂ, ಪರಿವಾರದೊಡನೆಯೂ ಎರಡು ದಿನ ಗಳು ಆಹೋರಾತ್ರಿ ಮಗನನ್ನು ಅರಸಿ ಕಾಣದೆ, ಮೂರನೆಯ ದಿನದ ಬೈಗಿನಲ್ಲಿ ದೇವತೆಗಳು "ಅಹೋ ಶೂರ! ಅಹೋ ಮಹಾಪುರುಷ! ಅಹೋ ಧೈರ್ಯ ವಂತ! ಅಹೋ ಸಂಸಾರಭೀರು!" ಎಂದು ಆಕಾಶದಲ್ಲಿ ದೇವದುಂದುಭಿಯ

ರವದೊಡನೆ ಹೊಗಳುತ್ತಿರುವುದನ್ನು ಕೇಳಿದಳು. ಆಕೆಗೆ ತನ್ನ ಮಗನು ದೇಹತ್ಯಾಗ ಮಾಡಿರುವನೆಂದು ನಿಶ್ಚಯವಾಯಿತು. ಒಡನೆಯೇ ಸೊಸೆಯರನ್ನು ಕುರಿತು "ನಿಮ್ಮ ಇನಿಯನು ನಿಮ್ಮಮೇಲೆ ಕೋಪಿಸಿಕೊಂಡು ಹೋಗಿದ್ದಾನೆ. ನೀವೆಲ್ಲರೂ ಈಗಲೇ ಹೋಗಿ ಅಲಂಕಾರ ಭರಿತರಾಗಿ ಬನ್ನಿರಿ; ಆತನನ್ನು ಸಮಾಧಾನ ಮಾಡಿ ಕರೆತರೋಣ" ಎಂದಳು. ಸೊಸೆಯರು ಅದರಂತೆ ವಸ್ತ್ರ ಭೂಷಣಗಳಿಂದ ಅಲಂಕೃತರಾಗಿ ಬರಲು, ಯಶೋಭದ್ರಾದೇವಿ ಅವರೆಲ್ಲರೊಡನೆ, ಮಹಾಕಾಳ ಶ್ಮಶಾನಕ್ಕೆ ಬಂದು ಅಲ್ಲಿ ದೇವತೆಗಳ ಪುಷ್ಪವೃಷ್ಟಿಯಿಂದ ಮುಚ್ಚಿಹೋಗಿದ್ದ ಮಗನ ಕಳೇಬರ ವನ್ನು ಸೊಸೆಯರಿಗೆ ತೋರಿ "ಅಲ್ಲಿರುವನು ನಿಮ್ಮಿನಿಯ" ಎಂದಳು. ಆಗ ಆ ಮೂವತ್ತೆರಡು ಜನ ಸುಂದರಿಯರೂ ಓಡಿಹೋಗಿ ಹೂಗಳನ್ನು ಓರೆಮಾಡಿ ನೋಡುತ್ತಾರೆ, ಗಂಡನ ಕಳೇಬರ! ಆಗ ಅವರೆಲ್ಲರೂ ಗಂಡನ ರೂಪಗುಣಶೀಲ ಗಳನ್ನು ನೆನೆನೆನೆದು ಗಟ್ಟಿಯಾಗಿ ರೋದಿಸಿದರು. ಬಹುಕಾಲ ಅತ್ತು ಅತ್ತು, ಕಡೆಗೆ ಗರ್ಭವತಿಯರಾಗಿದ್ದ ಎಂಟು ಜನರ ಹೊರತು ಉಳಿದ ಹೆಂಡತಿಯರೆಲ್ಲರೂ ಅತ್ತೆಯೊಡನೆ ಗುರುಗಳಾದ ದಯಾಭದ್ರರಲ್ಲಿ ದೀಕ್ಷೆಯನ್ನು ಪಡೆದು ಕಂತಿಯ ರಾಗಿ, ಸದ್ಗತಿಯನ್ನು ಪಡೆದರು. ಉಜ್ಜಯನಿಯ ತೆಂಕ ದಿಕ್ಕಿನಲ್ಲಿ ಈಗಲೂ ಸುಕುಮಾರಸ್ವಾಮಿ ಕಾಲವಾದೆಡೆಯನ್ನು ಪರಮ ಪವಿತ್ರಸ್ಥಳವೆಂದು ಭವ್ಯರು ಭಾವಿಸುತ್ತಾರೆ. ದೇವತೆಗಳು ಆತನನ್ನು ಪೂಜಿಸಿದ ಸುಗಂಧ ದ್ರವ್ಯಗಳು ಕರಗಿ "ಗಂಧವತಿ" ಯೆಂಬ ತೊರೆಯಾಗಿ ಹರಿಯುತ್ತಿದೆ. ದೇವತೆಗಳು ಹೊಗಳಿದ ಕಳಕಳಧ್ವನಿಯನ್ನು ಅಲ್ಲಿನ "ಕಳಕಳಾಯತ" ವೆಂಬ ಸಿದ್ಧಾಯತನವು ನೆನಪು ಮಾಡಿಕೊಡುತ್ತಿದೆ.

## ಕಥೆಯ ಮೂಲ ಇತ್ಯಾದಿ

ಸುಕುಮಾರ ಸ್ವಾಮಿಯ ಕಥೆ ಜೈನಸಾಹಿತ್ಯದಲ್ಲಿ ಪ್ರಸಿದ್ಧವಾದುದೂ ಜನಪ್ರಿಯವಾದುದೂ ಆಗಿದೆ. ಪ್ರಾಕೃತ ಸಂಸ್ಕೃತ ಕನ್ನಡ ಭಾಷೆಗಳಲ್ಲಿ ಈ ಕಥೆ ಯನ್ನು ವಿಧವಿಧವಾಗಿ ನಿರೂಪಿಸಿದೆ. ಹಲವು ಕವಿಗಳು ತಮ್ಮ ಧರ್ಮಾನುರಾಗ ವನ್ನೂ ಕಾವ್ಯ ಕಲೆಯ ಮೇಲ್ಮೆಯನ್ನೂ ಪ್ರದರ್ಶಿಸುವುದಕ್ಕಾಗಿ ಈ ಕಥೆಯನ್ನು ಪ್ರತಿಪಾದಿಸಿದ್ದಾರೆ. ಜೈನ ಸಂನ್ಯಾಸಿಗಳಿಗೆ ತಪೋವಿಘ್ನಕಾರಕವಾಗಿ ಒದಗುವ ಉಪಸರ್ಗಗಳಲ್ಲಿ ಒಂದಾದ ತಿರ್ಯಗುಪಸರ್ಗವನ್ನು ವಿವರಿಸುವ ಸಂದರ್ಭದಲ್ಲಿ ಈ

ಕಥೆ ಅದಕ್ಕೆ ದೃಷ್ಟಾಂತವಾಗಿ ಬರುತ್ತದೆ. ಕೆಲವರು ಕಥಾ ಸೂಚನೆಯನ್ನು ಮಾತ್ರ ಮಾಡುತ್ತಾರೆ. ಕೆಲವರು ಅದನ್ನು ವಿವರವಾಗಿ ಅಲ್ಲದಿದ್ದರೂ ದೀರ್ಘವಾಗಿ ಹೇಳಿದ್ದಾರೆ. ಮತ್ತೆ ಕೆಲವರು ಈ ಕಥೆಯನ್ನೇ ಎತ್ತಿಕೊಂಡು ಅದನ್ನು ಇಡೀ ಕಾವ್ಯವೊಂದಕ್ಕೆ ವಸ್ತುವನ್ನಾಗಿ ಮಾಡಿಕೊಂಡಿದ್ದಾರೆ. "ಸಂಠಾರಪ ಇಣ್ಣ" ವೆಂಬ ಪ್ರಾಚೀನ ಜೈನಾಗಮಿಕ ಗ್ರಂಥವು ಸುಕೋಸಲ ಚಾಣಕ್ಯ ಮುಂತಾದ ಹೆಸರುಗಳೊಡನೆ ಸುಕುಮಾರನ ಹೆಸರನ್ನೂ ಹೇಳುತ್ತದೆ. "ಭರತೇಶ್ವರ ಬಾಹುಬಲಿ ಸ್ವಾಧ್ಯಾಯ ಕಥಾಕೋಶ" ವೆಂಬ ಪ್ರಾಕೃತ ಗ್ರಂಥದಲ್ಲಿ ಹೆಸರಿಸಿರುವ ಹಲವು ಜೈನ ಯತಿಗಳಲ್ಲಿ ಅವಂತಿ ಸುಕುಮಾರನ ಹೆಸರೂ ಒಂದಾಗಿದೆ. ಕ್ರಿ. ಶ. ೯೩೩ ರಲ್ಲಿದ್ದ ದೇವಸೇನನ "ಆರಾಧನಾ ಸಾರ" ದ ೪೯ ನೆಯ ಗಾಹೆಯಲ್ಲಿ ಸುಕುಮಾರನ ಹೆಸರು ಕಾಣುತ್ತದೆ. ಈ ಗ್ರಂಥಗಳಿಗೆ ಇರುವ ವ್ಯಾಖ್ಯಾನಗಳಲ್ಲಿ ಈ ಸುಕುಮಾರನ ಕಥೆಯನ್ನು ಸ್ವಲ್ಪ ವಿಸ್ತಾರವಾಗಿ ವ್ಯಾಖ್ಯಾನಕಾರರು ಹೇಳಿದ್ದಾರೆ. ಅಲ್ಲಿ ಪ್ರಾಸಂಗಿಕವಾಗಿ ಬಂದ ಆ ಕಥೆಗೆ ಎಷ್ಟು ಸ್ಥಾನವಿರಬೇಕೋ ಅಷ್ಟನ್ನು ಮಾತ್ರ ಕೊಟ್ಟಿದೆ. ಅದನ್ನು ಸಾಲಂಕಾರವಾಗಿ ಸಪರಿಕರವಾಗಿ ಹೇಳುವ ಅವಕಾಶ ಆ ಕಥಾವಸ್ತುವನ್ನು ಸಮಗ್ರಕಾವ್ಯಕ್ಕಳವಡಿಸಿಕೊಂಡಾಗ ಉಂಟಾಗುತ್ತದೆ. ಸಕಲಕೀರ್ತಿ ಎಂಬಾತನು ಬರೆದ 'ಸುಕುಮಾಲಸ್ವಾಮಿ ಚರಿತ್ರ' ವೆಂಬುದು ೧೦೫೦ ಶ್ಲೋಕಗಳನ್ನೊಳಕೊಂಡ ೯ ಸರ್ಗಗಳ ಸಂಸ್ಕೃತ ಕಾವ್ಯವಾಗಿದೆ; ವಾದಿಚಂದ್ರನು ಬರೆದಿರುವ "ಸುಕುಮಾಲಸ್ವಾಮಿ ಚರಿತ್ರ" ವೆಂಬ ಇನ್ನೊಂದು ಕಾವ್ಯವೂ ಉಂಟು; ಇದೇ ಹೆಸರಿನ ಇನ್ನೊಂದು ಸಂಸ್ಕೃತ ಗ್ರಂಥ, ಅಚ್ಯುತ ಕರ್ತೃಕವಾದದ್ದು, ದೊರೆಯುತ್ತದೆ* ಪುಷ್ಪಭದ್ರ (ಪೂರ್ಣಭದ್ರ)ನಿಂದ ರಚಿತವಾದ ಸುಕುಮಾಲಸ್ವಾಮಿ ಚರಿತವು ಅಪಭ್ರಂಶ ಭಾಷೆಯಲ್ಲಿದೆ. ಇಷ್ಟೇ ಅಲ್ಲದೆ ೧೮೯ ಗಾಹೆಗಳಲ್ಲಿ ಹೇಳಿರುವ "ಅವನ್ತಿ ಸುಕುಮಾಲ ಕಥಾ" ಎಂಬೊಂದು ಗ್ರಂಥವೂ "ಅವನ್ತಿ ಸುಕುಮಾಲ ಸಂಧಿ" ಎಂಬ ಮತ್ತೊಂದು ಗ್ರಂಥವೂ ದೊರೆಯುತ್ತವೆ. ವಾಸ್ತವವಾಗಿ ಈ ಕಥೆಯನ್ನು ಎಷ್ಟು ಜನ ಕವಿಗಳು ಹೇಳಿದ್ದಾರೆಂಬ ಅಂಶವನ್ನು ಇಲ್ಲಿ ಸೂಚಿಸಲು ಪ್ರಯತ್ನಿಸಿಲ್ಲ; ನಿದರ್ಶನಕ್ಕಾಗಿ ಮಾತ್ರ ಕೆಲವನ್ನು ಹೇಳಿದೆ. ಕನ್ನಡದಲ್ಲೂ ಈ ಕಥೆ ಕವಿಪ್ರಿಯವಾಗಿತ್ತೆಂಬ ಅಂಶವನ್ನು ಮುಂದೆ

---

* "ಜಿನರತ್ನಕೋಶ" ವನ್ನು ನೋಡಿ.

ತಿಳಿಸಲಾಗುತ್ತದೆ. ಸುಕುಮಾರನ ಕಥೆಗೆ ಜೈನ ಸಾಹಿತ್ಯದಲ್ಲಿ ಯಾವ ಆದರದ ಸ್ಥಾನವಿದೆಯೆಂಬುದು ಇದರಿಂದ ವ್ಯಕ್ತವಾಗುತ್ತದೆ.

ಮೇಲೆ ಹೇಳಿರುವ ಗ್ರಂಥಗಳಲ್ಲಿ ಕೆಲವು ಕನ್ನಡ ಕವಿ ಶಾಂತಿನಾಥನಿಗಿಂತ ಪ್ರಾಚೀನವಾದವು; ಇವು ಮುಖ್ಯವಾಗಿ ಬಹುಶಃ ಪ್ರಾಕೃತಭಾಷೆಯಲ್ಲಿವೆ. ಸಂಸ್ಕೃತ ದಲ್ಲಿರುವವು ಶಾಂತಿನಾಥನ ಕಾಲಕ್ಕಿಂತ ಈಚಿನವು. ಆದ್ದರಿಂದ ಇವನ್ನು ಅವನ ಕೃತಿಗೆ ಮೂಲವನ್ನಾಗಿ ಭಾವಿಸಲಾಗುವುದಿಲ್ಲ. ಕ್ರಿ. ಶ. ೯೩೧-೯೩೨ ರಲ್ಲಿ ರಚಿತ ವಾದ ಹರಿಷೇಣನ "ಬೃಹತ್ಕಥಾಕೋಶ" ವೆಂಬ ಸಂಸ್ಕೃತ ಗ್ರಂಥದಲ್ಲಿ ಅವಂತಿ ಸುಕುಮಾರನ ಕಥೆ ವಿಸ್ತಾರವಾಗಿಯೇ ೨೬೦ ಶ್ಲೋಕಗಳಲ್ಲಿ ಹೇಳಿದೆ. (ಬೃಹತ್ಕಥಾ ಕೋಶ. Ed. Dr A. N. Upadhye M.A., D. LIT., ಕಥೆಯ ಸಂಖ್ಯೆ126) ಇಲ್ಲಿನ ಕಥಾ ಸಂದರ್ಭಗಳ ಆನುಪೂರ್ವಿಯೂ "ಕನ್ನಡ ಸುಕುಮಾರಚರಿತೆ" ಯದೂ ಒಂದನ್ನೊಂದು ಹೋಲುತ್ತಿದ್ದರೂ ಹೆಚ್ಚಿನ ವಿವರಗಳು ಶಾಂತಿನಾಥನು ಹೇಳಿರುವ ಕಥೆಯಲ್ಲಿವೆ. ಇವುಗಳಲ್ಲಿ ಕೆಲವನ್ನು ಶಾಂತಿನಾಥನೇ ಕಲ್ಪಿಸಿರುವನಾದರೂ ಮತ್ತೆ ಕೆಲವಕ್ಕೆ ಮೂಲ "ವಡ್ಡಾರಾಧನೆ"ಯ ಸುಕುಮಾರಸ್ವಾಮಿಕಥೆಯಲ್ಲಿ ದೊರೆಯು ತ್ತವೆ. ಆದ್ದರಿಂದ ಶಾಂತಿನಾಥನು ತನ್ನ ಗ್ರಂಥವನ್ನು ರಚನೆಮಾಡುವಾಗ "ವಡ್ಡಾರಾಧನೆ" ಯ ಆ ಕಥೆಯಿಂದ ಸ್ವಲ್ಪಮಟ್ಟಿಗೆ ಉಪಕೃತನಾಗಿರಬಹುದೆಂಬ ಶಂಕೆ ತಲೆದೋರುತ್ತದೆ. ಎರಡಕ್ಕೂ ಇರುವ ಸಾಮ್ಯಗಳನ್ನು ಹಿಡಿದು ನೋಡಿ ದರೆ ಈ ವಿಷಯದಲ್ಲಿ ಖಚಿತವಾದ ಅಭಿಪ್ರಾಯಕ್ಕೆ ಅವಕಾಶವಾಗುವುದು.

(I) ವಡ್ಡಾರಾಧನೆಯ ಆ ಕಥೆಯಲ್ಲಿ ಬರುವ ಕೆಲವು ಶಬ್ದವಿನ್ಯಾಸಗಳೂ ಅಭಿಪ್ರಾಯಗಳೂ ಶಾಂತಿನಾಥನ ಕಾವ್ಯದಲ್ಲಿ ದೊರೆಯುತ್ತವೆ.

| ವಡ್ಡಾರಾಧನೆ | ಸುಕುಮಾರಚರಿತೆ |
|---|---|
| (೧) ಇವಂದಿರ್ಗೆ ಪಸರಂಗೊಟ್ಟಿನ ಪ್ಪೊಡೆ (ಪು—೩) | (೧) ಆನಿವಂದಿರನಾದರಿಸಿ ಪಸರಂಗೊ ಟ್ಟಿನಪ್ಪೊಡೆ(ಪು—೩೧) |
| (೨) ಸೂರ್ಯಮಿತ್ರನೆಂಬ ಪೆಸರಿನ ಗುಂಟು ನಿಮ್ಮ ಮಾವನಪ್ಪ ಸೂರ್ಯಮಿತ್ರನಲ್ಲೆನ್ (೩) | (೨) ಸೂರ್ಯಮಿತ್ರ ಪೆಸರುಂಟು........ ನಿಮ್ಮಮಾವನೆನಿಸಿರ್ದ ಸೂರ್ಯ ಮಿತ್ರನಲ್ಲೆಂ. (೩೧) |
| (೩) ನೀಮೂರ್ಗಾರಾದೊಡಮೇಂ(೩) | (೩) ನೀ ಮೂರ್ಗಾರ್ದೊಡಮಕ್ಕೆ(೩೧) |

(೪) ತಿರಿದುತಂದ ಕೂೞಿತ್ಗೆ ನೆರವೆಣ್ಣೆ ಯೆನಕ್ಕುಪ್ಪನಕ್ಕೆ ಕೞಿಯನ ಕ್ಕೆಂದಪ್ಪೊಡಮಿಕ್ಕಿಯುಮೆಱ್ತೆ ಯಿಸಿಯುಮಱ್ತಿಯಂ (೪)

(೪) ತಿರಿದು ತಂದ ಕೂೞಮೇಗಣ್ಣಿಂ ದಾಗಿಯುಮಿನಿಸೆಣ್ಣೆಯುಮ ನುಪ್ಪುಮಂ ಮೊದಲಾಗಿಯು ಮೆ ಱ್ತೆ ಯ ಲು ಮಿ ಕ್ಕ ಲು ೦ ಬೇಡ. (೩೨)

(೫) ಮಹಾಪ್ರಸಾದವೆಂದೆಱ್ಗಿ ಪೊಡೆ ವಟ್ಟು ಕೈಕೊಂಡು ಸುಖ ದೊಳ್ ಬಾೞುತ್ತಂ ಪಲಂ ಬರಂ ಪಂಡಿತರ್ಕಳ್ಗೋದುಗ ಳಂ ವಕ್ಖಾಣಿಸುತ್ತಂ ಲೋಕದೊ ಳರಮನೆಯೊಳಂ ಪೂಜ್ಯರಾಗಿ (೪-೫)

(೫) ಮಹಾಪ್ರಸಾದವೆಂದು ಕೈಕೊಂ ಡು ಬೀಡಿಂಗೆ ವಂದು ಸಕಲ ಶಾಸ್ತ್ರಂಗಳಂ ಪಲರ್ಗಂ ವಕ್ಖಾಣಿಸುತ್ತಂ ಭುವನದೊ ಳಂ ರಾಜಭವನದೊಳಂ ಮಾ ನ್ಯರುಂ ಧನ್ಯರುಮಾಗಿ (೩೮)

(೬) ನೀನಾದಿತ್ಯಂಗೆ ನೀರಂ ಸೂಸಿ ಪೊಡೆಮಡುವಾಗಳಾ ನೀರ್ವೆ ರಸು ಸೂಸಿ ತಾಮರೆಗೆಱ್ತಿಯೊ ಳಗೆ ಮುೞುಗಿರ್ದ ಮುಗುಳ ಮೇಗೆ ತಗುಳ್ದಿರ್ದ್ದುದು ನಾಳೆ ನೇಸಱ್ ಮೂಡುವಾಗಳ್ ನೀರಿಂದಂ ಮೇಗೆ ನೆಗೆದಿರ್ದುದಂ ಗುರವಂ ಕಾಣಲಕ್ಕುಂ (೧೫)

(೬) ನೀವಮಾ ಸರೋರುಹಾಕರದೊ ಳ್ ಮಿಂದಾದಿತ್ಯಂಗರ್ಘ್ಯಮ ನೆತ್ತುವಾಗಳ್ ಬೆರಲಿಂ ಸಡಿ ಲ್ದು ಬಿಳ್ದ ತತ್ಸರೋರುಹಾ ಕರದೊಳಗಣ ಸರೋಜಕುಟ್ಮ ಲದೊಳ್ ಸಿಲ್ಕಿರ್ದುದಾಮುಗ ಳ್ ನಾಳೆ ನೇಸಮೂರ್ಡುವಾ ಗಳ್ ನೀರ ಮೇಲೆ ನಾಲ್ವೆರ ಲಂತರಂ ಮೇಲೆ ಬೆಳಗೆದಾರ್ ಗಳುಂಗುರಮಂ ಕಾಣ್ಬರ್....

(೭) ತಮ್ಮ ಎಮ್ಮ ಜೋಯಿಸಮೆ ಮ್ಮಂತಪ್ಪ ರೂಪಿನ ರುಷಿಯು ಗಳ್ಲದೆ ಪೇೞಲುಂ ಕಲಲು ಮಾಗದು. (೬)

(೭) ಅಮ್ಮ.... ಜ್ಯೋತಿಜ್ಞಾನಮಪ್ಪೊ ಡೆಮ್ಮನ್ನರಪ್ಪ ಋಷಿರೂಪಕ ರ್ಗಲ್ಲದೆ ಕಲಲುಂ ಕಲಿಸಲುಂ ಬಾರದು (೪೬)

ಇಂಥ ಸಾದೃಶ್ಯಗಳು ಎರಡು ಕಥೆಗಳಲ್ಲೂ ಇನ್ನೂ ಹೇರಳವಾಗಿ ಕಾಣು ತ್ತವೆ. ವಾಯುಭೂತಿ ತನ್ನ ಮನೆಗೆ ತನ್ನನ್ನು ನೋಡಿ ಹರಸಲು ಬಂದ ಸೂರ್ಯಮಿತ್ರ ಋಷಿಯನ್ನು ಬಾಯ್ಗೆ ಬಂದಂತೆ ಬೈದು ತಿರಸ್ಕರಿಸಿದಾಗ ಆ ಋಷಿ "ಣಿಂದಂತಂಸಿಳಹಂತಂ" ಎಂದಾರಂಭವಾಗುವ ಗಾಹೆಯನ್ನು ಭಾವಿಸಿ ಉಪಶಮಿತ ಚಿತ್ತನಾದನೆಂದು ವಡ್ಡಾರಾಧನೆ ಹೇಳಿದರೆ ಅದೇ ಸಂದರ್ಭದಲ್ಲಿ ಅದೇ ಗಾಹೆಯನ್ನು ಶಾಂತಿನಾಥನು ಅನುವದಿಸಿರುವುದು ಗಮನಾರ್ಹವಾಗಿದೆ.

(II) "ವಡ್ಡಾರಾಧನೆ" ಯಲ್ಲಿ ಅತಿಸಂಗ್ರಹವಾಗಿ ಸೂಚಿತವಾಗಿರುವ ಅಂಶ ಗಳು ಶಾಂತಿನಾಥನಲ್ಲಿ ವಿಸ್ತೃತ ರೂಪವನ್ನು ತಾಳಿ ಕಥೆ ಬೆಳೆದಿರುವ ರೀತಿ ಯನ್ನು ಕಾಣಿಸುತ್ತಿರುವುದೇ ಅಲ್ಲದೆ ಭಾವರಸಗಳ ಅಭಿವ್ಯಕ್ತಿಗೆ ಅವಕಾಶವನ್ನು ಕಲ್ಪಿಸಿವೆ.

(i) ಅಗ್ನಿಭೂತಿ ವಾಯುಭೂತಿಗಳು "ತಾಯ್ ತಂದೆವಿರ ಕೇಳ್ಪಿಯಂಗೆ ಯ್ಯದಾ ವೇದಂ ಮೊದಲಾಗೊಡೆಯ ಶಾಸ್ತ್ರಂಗಳನೋದದೆ ತಂದೆ ಪಡೆದ ಕಡ ವರಮುಂ ಬಿಯಂಗೆಯ್ಯುತ್ತಂ ಸಪ್ತವ್ಯಸನಾಭಿಭೂತರಾಗಿ" ಕೆಟ್ಟು ಹೋದರೆಂದು "ವಡ್ಡಾರಾಧನೆ" ಯಲ್ಲಿನ ಕಥಾಂಶ. ಇದನ್ನು ಒಂದು ವಚನ ಮೂರು ವೃತ್ತ ಗಳಲ್ಲಿ ಸವಿವರವಾಗಿಯೂ, ಸಹಜವಾಗಿಯೂ, ಶಾಂತಿನಾಥನು ನಿರೂಪಿಸಿದ್ದಾನೆ. (ii —೫ಗ—೮) ಇದರಿಂದ ಕಥೆಗೆ ವಾಸ್ತವಿಕತೆ ಅಧಿಕವಾಗಿ ಉಂಟಾಗಿದೆ. "ವಡ್ಡಾರಾಧನೆ" ಯಲ್ಲಿ ಸೂಚಿತವಾದದ್ದು ಇಲ್ಲಿ ವ್ಯಕ್ತವಾಗಿದೆ

(ii) ಒಂದು ದಿನ ಅತಿಬಳ ರಾಜನು ಅಗ್ನಿಭೂತಿ ವಾಯುಭೂತಿಗಳನ್ನು ತನ್ನ ಸಭೆಗೆ ಬರಿಸಿ "ನೀವಾವೋದುಗಳಂ ಬಲ್ಲಿರೆಂದಿರ್ವರುಮಂ ಬೆಸಗೊಂಡೊಡ ವರ್ಗಳ್ ತಲೆಯಂ ಬಾಗಿ ಮಱುಮಾತುಗುಡದೆ ಕಣ್ಣ ನೀರಂ ತೀವಿ ನೆಲನಂ ಬರೆಯುತ್ತಿರೆ" ಸಭಾಸದರು ಇವರು ಮೂರ್ಖರೆಂದೂ ಸಪ್ತವ್ಯಸನಾಭಿಭೂತ ರೆಂದೂ ಹೇಳಿದಾಗ ದೊರೆ ಅವರಿಬ್ಬರನ್ನೂ ಅಟ್ಟಕಳೆದಂತೆ "ವಡ್ಡಾರಾಧನೆ" ಕಥೆ ಹೇಳುತ್ತದೆ. ವಿಜಯಜಿಹ್ವನೆಂಬ ವಿದ್ಯಾಡಂಬರವಾದಿ ದೊರೆಯ ಆಸ್ಥಾ ನಕ್ಕೆ ಬಂದು ವಾದ ಹೂಡಿದಾಗ ಅವನಿಗೆ ಪ್ರತ್ಯುತ್ತರ ಕೊಡಲು ಅಲ್ಲಿದ್ದ ವಿದ್ವಾಂ ಸರು ಅಸಮರ್ಥರಾದರೆಂದೂ ದೊರೆ ಅಗ್ನಿಭೂತಿ ವಾಯುಭೂತಿಗಳನ್ನು ಅಲ್ಲಿಗೆ ಬರಮಾಡಿಕೊಂಡನೆಂದೂ ಅವರು ಬೆದರಿ ಬಾಯ್ಬಿಡದೆ "ಬೆಕ್ಕಂ ಕಂಡಿಲಿಯಂತಿರೆ ಉಸಿರ್ ಕುಸಿದು" ಕುಗ್ಗಿದರೆಂದೂ ಇದರಿಂದ ದೊರೆಗೆ ಅವಮಾನವಾಗಿ ಅವರಿ

ಬ್ಬರನ್ನೂ ಆಸ್ಥಾನದಿಂದ ಅಟ್ಟಿ ಕಳೆದು ಪರವಾದಿಯನ್ನು ಸನ್ಮಾನಿಸಿ ಕಳುಹಿಸಿದ ನೆಂದೂ ಶಾಂತಿನಾಥನ ವಿಸ್ತರದ ವರ್ಣನೆ (ii ೧೪೫–೨೯೫)

(iii) ಅತಿಬಳನಿಂದ ತಿರಸ್ಕೃತರಾದ ಅಗ್ನಿಭೂತಿ ವಾಯುಭೂತಿಗಳು "ಉಬ್ಬೆಗಂಬಟ್ಟು ವೈರಾಗ್ಯಪರಾಯಣರಾಗಿ ಕಪ್ಪಡಮುಟ್ಟು ಬೈಕಂದಿರಿದಿನ್ನಪ್ಪೊಡ ಮೋದುವಮೆಂದು" ತಾಯಿಗೆ ನುಡಿಯಲು ಅವಳು ತನ್ನ ತಮ್ಮನಾದ ಸೂರ್ಯ ಮಿತ್ರನ ಬಳಿಗೆ ತನ್ನಿಬ್ಬರು ಮಕ್ಕಳನ್ನು "ಓಲೆಯಂ ಬರೆಯಿಸಿ" ಅಟ್ಟಿದಳು (ವ. ರಾ. ೩ ಪಂಕ್ತಿ ೧–೬). ಅಗ್ನಿಭೂತಿ ವಾಯುಭೂತಿಗಳು ಚಿಂತಾಕ್ರಾಂತರಾಗಿ ತಾಯಿಯ ಮುಖವನ್ನು ನೋಡಲು ನಾಚಿ ಕಣ್ಣೀರಿಡುತ್ತಿದ್ದುದನ್ನು ಅವಳು ಕಂಡದ್ದು, ಅವರ ದುಃಖಕ್ಕೆ ಕಾರಣ ತಿಳಿದದ್ದು, ಅವಳೂ ದುಃಖಿಸಿದ್ದು, ಮಕ್ಕಳು ತಮ್ಮ ಮುನ್ನಿನ ತಪ್ಪಿಗಾಗಿ ಪಶ್ಚಾತ್ತಾಪಪಟ್ಟು ಇನ್ನು ಮುಂದಾದರೂ ವಿದ್ಯಾ ರ್ಜನೆಮಾಡಲೇಬೇಕೆಂದು ಸಂಕಲ್ಪತೊಟ್ಟದ್ದು, ತಾಯಿ ತನ್ನ ತಮ್ಮ ಸೂರ್ಯ ಮಿತ್ರನ ವಿಚಾರವನ್ನು ಅವರಿಗೆ ತಿಳಿಸಿದ್ದು, ತಮ್ಮನಿಗೆ ವಿನಯಪತ್ರವನ್ನು ಬರೆಯಿಸಿದ್ದು—ಈ ವಿವರಗಳೆಲ್ಲಾ ಶಾಂತಿನಾಥನ ಕೃತಿಯಲ್ಲಿ ರಮಣೀಯವಾಗಿ ರೂಪುಗೊಂಡಿವೆ (ii ೩೦–೪೫). ಮುಂದೆ ಆ ಓಲೆಯ ವಿಸ್ತಾರವಾದ ಒಕ್ಕಣೆಯೂ ಇದೆ (ii ೫೦–೫೨೧)

(iv) ಸೂರ್ಯಮಿತ್ರನು ತನಗೆ ಸುಬಲಮಹಾರಾಜನಿಂದ ಬಂದ ಉಂಗುರ ವನ್ನು ಕಳೆದುಕೊಂಡು ಸುಧರ್ಮರೆಂಬಾಚಾರ್ಯರ ಅವಧಿಜ್ಞಾನದ ಸಹಾಯ ದಿಂದ ಮರಳಿ ಅದನ್ನು ಪಡೆದ ಮೇಲೆ ಸೂರ್ಯಮಿತ್ರ ಅಂಥ ಜ್ಞಾನವನ್ನು ತಾನೂ ಸಂಪಾದಿಸಬೇಕೆಂದು "ಮನೆಗೆ ಬಂದು ಸುದೇವಿಯೆಂಬ ತನ್ನ ಪಾರ್ವಂತಿಗೆ ಸ್ವಾಭಿಪ್ರಾಯಮೆಲ್ಲಮಂಪೇಳ್ದು" ಹೊರಟನೆಂದು "ವಡ್ಡರಾಧನೆ" ಯಲ್ಲಿ ಕಾಣುವ ಸೂಚನೆ; "ಸುಕುಮಾರ ಚರಿತ" ದಲ್ಲಿ ಸೂರ್ಯಮಿತ್ರನು ತನ್ನ ಹೆಂಡತಿಗೆ ಹೇಳಿದ ಮಾತು ಏಳು ಪದ್ಯಗಳ ತುಂಬ ಹರಡಿಕೊಂಡಿದೆ. (iii ೧೬–೨೩).

ಹೀಗೆ ಶಾಂತಿನಾಥನು ಸುಕುಮಾರನ ಇಡೀ ಕಥೆಯಲ್ಲಿ ಅವಕಾಶ ದೊರೆ ತಾಗಲೆಲ್ಲ "ವಡ್ಡಾರಾಧನೆ" ಯಲ್ಲಿ ಕಾಣುವ ಸಣ್ಣ ಸಣ್ಣ ಸೂಚನೆಗಳನ್ನು ಅವ ಲಂಬಿಸಿ ಅವನ್ನು ಪರಿಷ್ಕಾರವಾಗಿ ವಿಸ್ತರಿಸುತ್ತ ಮುಂದುವರಿದಿರುವುದು ಕಾಣು ತ್ತದೆ. ಇಷ್ಟೇ ಅಲ್ಲದೆ "ವಡ್ಡಾರಾಧನೆ" ಯಲ್ಲಿ ಎಲ್ಲಿಯಾದರೂ ಸಂಗ್ರಹವಾಗಿ

ಜಿನತತ್ತ್ವೋಪದೇಶ ಬಂದಿದ್ದರೆ ಅಲ್ಲಿಯೂ ಶಾಂತಿನಾಥನು ವಿಸ್ತರಿಸಿ ಹೇಳಿರುವನು. ಇವನ್ನೆಲ್ಲಾ ನೋಡಿದರೆ ಶಾಂತಿನಾಥನ "ಸುಕುಮಾರ ಚರಿತ್ರೆ" ಗೆ ಮೂಲ ಕನ್ನಡದ "ವಡ್ಡಾರಾಧನೆ" ಯಲ್ಲಿರುವ "ಸುಕುಮಾರಸ್ವಾಮಿಯ ಕಥೆ" ಎಂಬ ಅನುಮಾನ ಪ್ರಬಲವಾಗುತ್ತದೆ.

ಆದರೆ ಶಾಂತಿನಾಥನ ಕೃತಿಯೇ "ವಡ್ಡಾರಾಧನೆ" ಯ ಆ ಕಥೆಗೆ ಮೂಲ ವಾಗಿರಬಹುದೆಂಬುದೂ ಎರಡಕ್ಕೂ ಬೇರೆ ಇನ್ನಾವುದಾದರೂ ಕೃತಿ ಅವಲಂಬನ ವಾಗಿರಬಹುದೆಂಬುದೂ ಸಹಜವಾಗಿ ಏಳುವ ಸಂದೇಹಗಳು. ಎರಡಕ್ಕೂ ಮೂಲ ವಾಗಿರಬಹುದಾದ ಬೇರೊಂದು ಕೃತಿಯ ವಿಚಾರವಾಗಿ ಇದುವರೆಗೆ ಏನೂ ತಿಳಿದಿಲ್ಲ. ಹರಿಷೇಣನ "ಕಥಾಕೋಶ" ವು ವಡ್ಡಾರಾಧನೆಗೆ ಮೂಲವಲ್ಲವೆಂಬ ಅಂಶವನ್ನು ಡಾ॥ ಉಪಾಧ್ಯೆ ಆಗಲೇ ಸ್ಥಾಪಿಸಿದ್ದಾರೆ. (ಬೃಹತ್‌ಕಥಾಕೋಶ, ಪ್ರಸ್ತಾವನೆ ೬೭) ಹಾಗೆಯೇ ಅಲ್ಲಿರುವ ಸುಕುಮಾರನ ಕಥೆ ಶಾಂತಿನಾಥನ ಕೃತಿಗೆ ಆಕರವಾಗಿಲ್ಲವೆಂಬ ಅಂಶ, ಎರಡನ್ನೂ ಹೋಲಿಸಿ ನೋಡಿದಾಗ ತಿಳಿಯುತ್ತದೆ; ಸೂರ್ಯಮಿತ್ರ ಅಗ್ನಿ ಭೂತಿಯ ಮನೆಗೆ ಬಂದಾಗ ಅಲ್ಲಿ ನೆರೆದಿದ್ದ ವಿಪ್ರಸಭೆಗೆ ಕಾರಣ ಅಗ್ನಿಭೂತಿಯ ಮಗನ ಉಪನಯನವೆಂದೂ ಅಗ್ನಿಭೂತಿಯಿಂದ ಆ ಮುನಿಗೆ ಸ್ವಾಗತ ಸತ್ಕಾರ ಪಾರಣೆಗಳಾದ ಮೇಲೆ ಆಶ್ಚರ್ಯಪಂಚಕಗಳಾದುವೆಂದೂ "ಕಥಾಕೋಶ" ದಲ್ಲಿ ಹೇಳಿದ್ದರೆ ಶಾಂತಿನಾಥನು ಇವನ್ನೆಲ್ಲಾ ಬಿಟ್ಟು "ವಡ್ಡಾರಾಧನೆ" ಯಲ್ಲಿರುವಂತೆಯೇ ಕಥೆಯನ್ನು ಹೇಳಿರುವುದು ಅವನಿಗೆ "ಕಥಾಕೋಶವು" ಮೂಲವಲ್ಲವೆಂಬುದಕ್ಕೆ ಒಂದು ನಿದರ್ಶನ. ಇನ್ನು ಉಳಿದಿರುವ ಸಂದೇಹ ವಡ್ಡಾರಾಧನೆಗೆ ಶಾಂತಿನಾಥನ ಕೃತಿ ಮೂಲವಾಗಿರಬಹುದಾದದ್ದು. ಇದು ಅಸಂಭವವೆಂಬುದಕ್ಕೆ ಆಧಾರಗಳಿವೆ.

(೧) ವಡ್ಡಾರಾಧನೆಯ ಪದಪ್ರಯೋಗ, ಭಾಷೆ, ಶೈಲಿ, ಹಿನ್ನೆಲೆಗಳು ಶಾಂತಿ ನಾಥನ "ಸುಕುಮಾರ ಚರಿತ" ಕ್ಕಿಂತ ಪ್ರಾಚೀನವಾದುವು. ವಾಸ್ತವವಾಗಿ ಪಂಪನ (ಕ್ರಿ. ಶ. ೯೪೧) ಕಾವ್ಯಗಳಲ್ಲಿ ದೊರೆಯದಿರುವ ಅಥವಾ ಕ್ವಚಿತ್ತಾಗಿ ದೊರೆಯುವ ಹಳೆಯ ಪ್ರಯೋಗಗಳು "ವಡ್ಡಾರಾಧನೆ" ಯಲ್ಲಿ ಮೇಲಿಂದ ಮೇಲೆ ದೊರೆಯುತ್ತಿರುವುದು—ಅರ್ವಾಚೀನನೊಬ್ಬನು ಹಳೆಯ ನುಡಿಗಟ್ಟಿನಲ್ಲಿ ಪರಿಣತ ನಾಗಿದ್ದು ಅದರಲ್ಲೇ ಗ್ರಂಥರಚನೆ ಮಾಡಿರಬಹುದೆಂಬ ಸಂಭವತೆಯನ್ನು ಸದ್ಯಕ್ಕೆ ದೂರೀಕರಿಸಿದರೆ–ಅದರ ಪ್ರಾಚೀನತೆಗೆ ಸಾಕ್ಷಿ.

(೨) ಶಾಂತಿನಾಥನು ಪಂಪ ರನ್ನ ಪೊನ್ನರ ಕಾವ್ಯಗಳಿಂದ ತುಂಬ ಉಪಕೃತ

ನಾಗಿರುವ, ಅನುಕರಣ ಶೀಲನಾದ ಕವಿ; ಅಂತೆಯೇ ಅವನು "ವಡ್ಡಾರಾಧನೆ" ಯನ್ನೂ ಅನುಕರಿಸಿರುವುದು ಅವನಿಗೆ ಸಹಜವೇ ಆಗಿದೆ. "ವಡ್ಡಾರಾಧನೆ" ಯಲ್ಲಿ ಇತರ ಕವಿಗಳ ಅನುಕರಣ ಇದೆಯೋ ಇಲ್ಲವೋ ಎಂಬುದಕ್ಕೆ ಆಧಾರವಿಲ್ಲ.

(೩) ಯಾವುದಾದರೂ ಕಥೆ ಬೆಳೆಯುವುದು ಸಂಕ್ಷಿಪ್ತತೆಯಿಂದ ವಿಸ್ತಾರದ ಕಡೆಗೆ: ಈ ದೃಷ್ಟಿಯಿಂದ ನೋಡಿದರೆ ಸುಕುಮಾರ ಚರಿತೆಯು "ವಡ್ಡಾರಾಧನೆ" ಯ ಪ್ರಸಕ್ತ ಕಥೆಯ ವಿಸ್ತರೀಕರಣವೆಂಬುದು ಸ್ಪಷ್ಟವಾಗಿದೆ. ಇದಕ್ಕೆ ನಿದರ್ಶನ ಗಳನ್ನು ಮೇಲೆಯೇ ಹೇಳಿದೆ.

ಈ ಮೂರು ಆಧಾರಗಳು ಶಾಂತಿನಾಥನ ಕೃತಿಗೆ "ವಡ್ಡಾರಾಧನೆ" ಯ "ಸುಕುಮಾರಸ್ವಾಮಿಯ ಕಥೆ" ಮೂಲವೆಂಬುದನ್ನು ಸಾಕಷ್ಟು ಖಚಿತವಾಗಿ ಸೂಚಿಸುತ್ತಿವೆ.

ಈ ಮೂಲವನ್ನು ಶಾಂತಿನಾಥನು ಅಳವಡಿಸಿಕೊಂಡಿರುವ ವಿಧಾನವನ್ನು ಪರಿಶೀಲಿಸಬಹುದು. ಅದರಲ್ಲಿ ಅವನು ಯಾವುದನ್ನು ಬಿಟ್ಟಿದ್ದಾನೆ, ಯಾವುದನ್ನು ಹೊಸದಾಗಿ ಸೇರಿಸಿದ್ದಾನೆ, ಯಾವುದನ್ನು ಮಾರ್ಪಡಿಸಿಕೊಂಡಿದ್ದಾನೆ ಎಂಬು ದನ್ನೂ ಅವುಗಳಿಂದ ಅವನ ಕಾವ್ಯದ ಮೇಲಾಗಿರುವ ಪರಿಣಾಮವನ್ನೂ ವಿಮ ರ್ಶಿಸಿ ನೋಡಿದಾಗ ಅವನ ಕವಿತಾಶಕ್ತಿಯ ನಿಜವಾದ ಸ್ವರೂಪವನ್ನು ತಿಳಿಯಲು ಸಾಧ್ಯವಾಗುವುದು.

ಶಾಂತಿನಾಥನು "ವಡ್ಡಾರಾಧನೆ"ಯ ಸುಕುಮಾರನ ಕಥೆಯ ಸರಣಿಯನ್ನೇ ಹಿಡಿದು ಸಾಗಿದ್ದರೂ ಅಲ್ಲಲ್ಲಿ ಕೆಲವು ಕಥಾನಕಗಳನ್ನು ಅವನು ಬಿಟ್ಟಿದ್ದಾನೆ. ಇವನ್ನು ಅವನು ಏಕೆ ಬಿಟ್ಟನೆಂಬುದನ್ನೂ, ಅದರಿಂದ ಕಥೆಯ ರಚನೆಗೆ ಏನು ಪ್ರಯೋಜನವಾಗಿದೆಯೆಂಬುದನ್ನೂ ತಿಳಿಯಬೇಕು. ನಾಗಶರ್ಮಭಟ್ಟನು ತನ್ನ ಮಗಳಾದ ನಾಗಶ್ರೀಗೆ ಅವಳು ಜೈನಯತಿಗಳಿಂದ ಕೊಂಡ ಅಹಿಂಸೆ, ಅಸ್ತೇಯ, ಸತ್ಯ, ಬ್ರಹ್ಮಚರ್ಯ, ಅಪರಿಗ್ರಹ ಎಂಬ ಪಂಚಾಣುವ್ರತಗಳಿಗೆ ಸಂಬಂಧಿಸಿದ ಕಥೆಗಳನ್ನು, ಆಯಾ ವ್ರತಗಳನ್ನು ಪರಿಪಾಲನೆಮಾಡದವರು ಯಾವ ದುರ್ಗತಿಗೆ ಹೇಗೆ ಬರುವರೆಂಬುದನ್ನು ತಿಳಿಸುವಾಗ, ಹೇಳುತ್ತಾನೆ. ಇವುಗಳಲ್ಲಿ ಅಸ್ತೇಯ,

---

* ಇದರಿಂದ "ವಡ್ಡಾರಾಧನೆ" ರಚಿತವಾದ ಕಾಲ ಶಾಂತಿನಾಥನ ಕೃತಿರಚನಾ ಕಾಲಕ್ಕಿಂತ ಎಂದರೆ ಕ್ರಿ.ಶ. ಸು ೧೦೬೦ಕ್ಕಿಂತ ಹಿಂದಿದ್ದಿರಬೇಕೆಂದು ಗೊತ್ತಾಗುತ್ತದೆ.

ಅಸತ್ಯಗಳಿಗೆ ಸೇರಿದ ಕಥೆಗಳನ್ನು "ವಡ್ಡಾರಾಧನೆ" "ಕಥಾಕೋಶ"ಗಳಲ್ಲಿ ಬೇರೆಬೇರೆಯಾಗಿ ಹೇಳದೆ ಒಟ್ಟಾಗಿ ಬೆಸೆದು ಹೇಳಿದೆ. ವೈನಯಿಕನೆಂಬ ಕಳ್ಳ ಚಿತ್ರಕಥೆಗಳನ್ನು ಬರೆದ ಚಿತ್ರಪಟಗಳನ್ನು ಜನರಿಗೆ ತೋರಿಸುತ್ತ ಆ ಕಥೆಗಳನ್ನು ಹೇಳುತ್ತ ಬತ್ತವನ್ನು ಕದಿಯುವುದರಲ್ಲಿ ನಿಪುಣನಾಗಿದ್ದನು; ಅವನ ಸಹಾಯಕ ರಾಗಿ ವೈಕವ್ಯೋಮಕರೆಂಬ ಮತ್ತಿಬ್ಬರು ಕಳ್ಳರಿದ್ದರು. ಕನ್ನೆಯ ಕಥೆ, ಬಂಟನ ಕಥೆ, ವೃದ್ಧಸ್ತ್ರೀಯ ಕಥೆ ಎಂಬಿವು ಅವನು ಹೇಳಿದ ಮೂರು ಚಿತ್ರಕಥೆಗಳು. ಕಥಾಕೋಶದಲ್ಲಿ ತಾರಕನೆಂಬ ಕಳ್ಳ ಈ ಕೆಲಸವನ್ನು ಮಾಡುವನು; ಆದರೆ ಅಲ್ಲಿ ಈ ಮೂರು ಕಥೆಗಳ ವಿಷಯವಿಲ್ಲ; ಕನ್ನೆಯ ಕಥೆಯ ಸ್ವಲ್ಪಭಾಗ ಮಾತ್ರವಿದೆ. ಶಾಂತಿನಾಥನಾದರೆ ಕನ್ನೆಯ ಕಥೆಯೊಂದನ್ನು ಮಾತ್ರ ಸವಿಸ್ತಾರವಾಗಿ ಹೇಳಿ ಬಂಟ ವೃದ್ಧಸ್ತ್ರೀಯರ ಕಥೆಗಳನ್ನು ಬಿಟ್ಟಿದ್ದಾನೆ; ಅಲ್ಲದೆ ವೈನಯಿಕನೆಂಬವನ ಹೆಸರನ್ನೇ ಅವನು ಹೇಳಿಲ್ಲ. ಈ ಕಥೆಗಳನ್ನು ಅವನು ಹೇಳದೆ ಬಿಟ್ಟಿರುವುದು ಉಚಿತವಾಗಿಯೇ ಇದೆ ಎಂದು ಹೇಳಬಹುದು. ಅಸ್ತೇಯವ್ರತವನ್ನು ಪರಿಪಾಲಿಸ ದಿದ್ದರೆ ಆಗುವ ಕೇಡು ಎಂತಹುದೆಂಬುದನ್ನು ತಿಳಿಸುವುದು ಈ ಸಂದರ್ಭದ ಮುಖ್ಯ ಉದ್ದೇಶ. ಕನ್ನೆಯ ಕಥೆಯಲ್ಲಿಯೇ ಒಬ್ಬ ಕಳ್ಳನ ಕಥೆ ಬರುವುದ ರಿಂದಲೂ ಅವನಿಗೆ ತಕ್ಕ ದಂಡನೆ ಆಗಿರುವುದರಿಂದಲೂ ಆ ಕಥೆಯಷ್ಟೇ ಸಾಕು, ಪ್ರಕೃತ ಉದ್ದೇಶಸಾಧನೆಗೆ. ಆದ್ದರಿಂದ ವೈನಯಿಕ ಮತ್ತು ಅವನ ಇಬ್ಬರು ಸಹಾಯಕರ ಕಥೆ ಬೇಕಿಲ್ಲ. ಬಂಟ ವೃದ್ಧಸ್ತ್ರೀಯರ ಕಥೆಗಳು ಮುಖ್ಯಕಥೆಗೆ ಸಂಬಂಧಪಟ್ಟಿಲ್ಲ; ಅವುಗಳಲ್ಲಿ ಅಸ್ತೇಯವ್ರತದ ಉಲ್ಲಂಘನೆಯೂ, ಅದರಿಂದಾಗುವ ಹಾನಿಯೂ ಇಲ್ಲ. ಅಪ್ರಸಕ್ತವಾದ ಈ ಕಥೆಗಳನ್ನು ಶಾಂತಿನಾಥನು ಬಿಟ್ಟಿರು ವುದು ಕಥಾ ಸರಣಿಯಲ್ಲಿ ದೊಡ್ಡ ತೊಡಕನ್ನು ಪರಿಹರಿಸಿದಂತಾಗಿದೆ; ಕಥೆಯ ಓಟ ಸುಗಮವಾಗಿದೆ. "ವಡ್ಡಾರಾಧನೆ"ಯ ಈ ಭಾಗದಲ್ಲಿ ಒಂದು ಕಥೆ ಮುಗಿಯುವುದರೊಳಗೆ ಒಂದಾಗುತ್ತಲು ಮತ್ತೊಂದು ಕಥೆ ಬಂದು ಪ್ರಕೃತ ಕಥೆ ಮರೆತುಹೋಗಿ ಓದುವವರ ಗಮನವು ಬೇರೆ ವಿಷಯಕ್ಕೆ ಹೊರಳುವ ಹಾಗಾ ಗುತ್ತದೆ; ಅಲ್ಲದೆ ಕಥೆ ಹೇಳುವುದರಲ್ಲಿ ಜಟಿಲತೆಯೂ ಬಂದೊದಗುತ್ತದೆ. ಇವ ನ್ನೆಲ್ಲ ಶಾಂತಿನಾಥನು ಬಿಟ್ಟಿರುವುದು ಅವನ ವಿಮರ್ಶನ ಶಕ್ತಿಗೂ, ಔಚಿತ್ಯ ಜ್ಞಾನಕ್ಕೂ ಸಾಕ್ಷಿಯಾಗಿದೆ. ಅಲ್ಲದೆ ಅಸತ್ಯಕ್ಕೆ ನಿದರ್ಶನವಾಗಿ ಒಂದು ಕಥೆ, ಅಸ್ತೇಯಕ್ಕೆ ಉದಾಹರಣೆಯಾಗಿ ಒಂದು ಕಥೆ, ಹೀಗೆ ಅವನು ಪೃಥಕ್ಕರಿಸಿ ಪ್ರತಿಪಾದಿಸಿರುವುದು ಮೆಚ್ಚುಗೆಗೆ ತಕ್ಕ ಅಂಶ.

ಶಾಂತಿನಾಥನು ಬಿಟ್ಟಿರುವ ಇನ್ನೊಂದು ಸಂದರ್ಭ "ವಡ್ಡಾರಾಧನೆ" ಯಲ್ಲುಂಟು; ಸುಕುಮಾರಸ್ವಾಮಿಯನ್ನು ಕಣ್ಣಾರ ಕಂಡು ಸಂತೋಷಪಡಬೇಕೆಂದು ಉಜ್ಜಯಿನಿಯ ರಾಜ ವೃಷಭಾಂಕ ಅವನ ಅರಮನೆಗೆ ಹೋದನು. ಅಲ್ಲಿ ಅವನ ತಾಯಿಯಿಂದ ಸತ್ಕೃತನಾಗಿ, ಅವಳ ಅಪ್ಪಣೆಯಂತೆ ತನ್ನ ಪ್ರಾಸಾದದ ಮೇಲಣ ನೆಲೆಯಿಂದ ಇಳಿದು ಬಂದ ಸುಕುಮಾರನನ್ನು ನೋಡಿ, "ಕಣ್ಬೆತ್ತ ಫಲಮನಿಂದು ಪೆತ್ತೆನೆಂದು"(cf. ಸು.ಚ. ಕಣ್ಪಡೆದ ಫಲವಂ ಪೆತ್ತೆನೆಂದು ಪು.204) ರಾಜ ಅವನನ್ನು ಅಪ್ಪಿಕೊಂಡು ತನ್ನ ಅರ್ಧಾಸನದಲ್ಲಿ ಕುಳ್ಳಿರಿಸಿಕೊಂಡನು. ಆ ಮೇಲೆ ಆರೋಗಣೆಗೆ ಮುಂಚೆ ದೊರೆಯನ್ನು ಮಜ್ಜನಕ್ಕೇಳುವಂತೆ ತಾಯಿ ಬೇಡುತ್ತಾಳೆ. ವೃಷಭಾಂಕನು ಹಾಗೆಯೇ ಆಗಲೆಂದು ಸ್ನಾನಕ್ಕಾಗಿ "ಅಮರಸನ್ನಿಭಮಣಿಕುಟ್ಟಿಮಮಪ್ಪ ಬಾವಿಯಂ ಪೊಕ್ಕು ಮಿಂದಲ್ಲಿಯನರ್ಘ್ಯಮಪ್ಪ ತನ್ನ ಬೆರಲ ಮಾಣಿಕದುಂಗುರಂ ಬಿೞ್ದದನಱಸಲ್ವೇಡಿ ಛಿದ್ರಕ ದ್ವಾರದ ತೂಂತನುರ್ಚಿ ನೀರಂ ಕಳೆದಾಗಳಿಂದ್ರನ ಭಂಡಾರಂ ತೆಱೆದಂತಪ್ಪ ಲೇಸಪ್ಪ ನಾನಾ ಮಣಿಮಯ ವಿಚಿತ್ರ ಭೂಷಣಂಗಳಂ ಕಂಡು ಮಹಾಶ್ಚರ್ಯಭೂತನಾಗಿ ನೋಡು" ತ್ತಿದ್ದನಂತೆ ! (ವಡ್ಡಾ. ಪು. ೨೬-ಪಂ. ೨೨-೨೬) ಇದು ತುಂಬ ಸೊಗಸಾಗಿರುವ ದೃಶ್ಯ. ಸುಕುಮಾರನಿಗೆ ದಿನವೂ ಸ್ನಾನ ಮಾಡುವುದಕ್ಕೆಂದೇ ಪ್ರಾಸಾದದ ಒಂದು ಭಾಗದಲ್ಲಿ ಮಾಡಿರುವ ಬಾವಿ; ಅದರ ತುಂಬ ಸುಖೋಷ್ಣವೂ ಪರಿಮಳಯುಕ್ತವೂ ಆದ ನೀರು; ಒಂದು ಸಲ ಸ್ನಾನಕ್ಕೆ ಬಂದ ನೀರು ಅಲ್ಲಿರದೆ ಹೊರಕ್ಕೆ ಹೋಗಲು ಬಾವಿಗಿಟ್ಟಿರುವ ತೂಬು; ಮರಳಿ ಹೊಸ ನೀರು, ಹೊಸ ಪರಿಮಳ; ಸ್ನಾನಕ್ಕಿಳಿಯುವಾಗ ತೊಟ್ಟ ಒಡವೆಗಳನ್ನು ತೆಗೆದಿಡದ ಮರವೆಯೊ, ಯಾರು ತೆಗೆಯುವವರು, ವೃಥಾ ಕೈ ನೋಯಿಸಿಕೊಳ್ಳುವುದೇಕೆ ಎಂಬ ಆಲಸಿಕೆಯ ಸೌಕುಮಾರ್ಯವೋ; ಸ್ನಾನ ಮಾಡುವಾಗ ಕೈ ಕಾಲು ಕೊರಳುಗಳಿಂದ ಜಾರಿ ನೀರಲ್ಲಿ ಬಿದ್ದು ಮುಳುಗಿದ ರತ್ನಖಚಿತವಾದ ಒಡವೆಗಳು ಅವೆಷ್ಟೊ; ಬಿದ್ದ ಒಡವೆಗಳನ್ನು ಎತ್ತಿಕೊಳ್ಳದಿರುವ ಉಪೇಕ್ಷೆ; ಅದರಿಂದ ಸೂಚಿತವಾಗುವ ಅವನ ಸಂಪತ್ತಿನ ವಿಪುಲತೆ; ಇಂದ್ರನ ಭಂಡಾರ ಬಾವಿಯಲ್ಲಿ ಬಿದ್ದ ಇವನ ಒಡವೆಗಳಿಗೆ ಸಾಟಿಯಾದರೆ ಅವನ ಮಿಕ್ಕ ಒಡವೆಗಳ ಮಾತೇನು; ತನ್ನ ಬೆರಳಿಂದ ಜಾರಿ ಆ ಬಾವಿಯಲ್ಲಿ ಬಿದ್ದ ಉಂಗುರವನ್ನು ಬಿಡಲಾರದೆ ಹುಡುಕಿದ ವೃಷಭಾಂಕನೆಲ್ಲಿ, ಲೆಕ್ಕವಿಲ್ಲದಷ್ಟು ಅಂಥ ಉಂಗುರಗಳೂ ರತ್ನದೊಡವೆಗಳೂ ಬಾವಿಯ ತಳದಲ್ಲಿ

ಕಿಕ್ಕಿರಿದು ತುಂಬಿದ್ದರೂ ಅವನ್ನು ಹುಡುಕುವ ಮಾತಿರಲಿ, ಅವನ್ನು ನೆನಪಿಗೇ ತಂದುಕೊಳ್ಳದ ಸುಕುಮಾರನೆಲ್ಲಿ? ಪ್ರಜೆಯಾದ ಸುಕುಮಾರನ ಐಶ್ವರ್ಯದೆದುರಿಗೆ ದೊರೆಯ ಸಿರಿ ತಲೆತಗ್ಗಿಸಿತು. ಬಿಟ್ಟ ಕಣ್ಣು ಬಿಟ್ಟಂತೆ ಅಚ್ಚರಿಯಿಂದ ರಾಜನು ಬಾವಿಯ ತಳದ ತೊಡವುಗಳನ್ನು ನೋಡುತ್ತ ನಿಂತನೆಂದರೆ ಸುಕುಮಾರನ ಆಭರಣಭೋಗದ ವೈಭವದ ವಿಸ್ತಾರದ ಮೇರೆಯನ್ನು ಬೇರೆ ಮಾತುಗಳಿಂದ ಹೇಗೆ ಹೇಳುವುದು? ಇಷ್ಟೆಲ್ಲಾ ಅರ್ಥವನ್ನು "ವಡ್ಡಾರಾಧನೆ"ಯ ಆ ನಾಲ್ಕು ಮಾತುಗಳು ಧ್ವನಿಸಲು ಸಮರ್ಥವಾಗಿವೆ. ಇಷ್ಟು ಸುಂದರವಾದ ಈ ದೃಶ್ಯವನ್ನು ಶಾಂತಿನಾಥನು ಏಕೆ ಬಿಟ್ಟನೋ!

ಕಥೆ ಹೇಳುವಾಗ ಕೆಲವು ನವೀನ ಸನ್ನಿವೇಶಗಳನ್ನು ತಂದಿರುವುದು ಶಾಂತಿನಾಥನ ಸಂವಿಧಾನ ಕೌಶಲವನ್ನು ವ್ಯಕ್ತಪಡಿಸುತ್ತವೆ; ಕೆಲವು ಸೊಗಸಾಗಿವೆ; ಮತ್ತೆ ಕೆಲವು ಅಷ್ಟೇನೂ ಉತ್ತಮವಾಗಿಲ್ಲ. ಇದಕ್ಕೆ ಉದಾಹರಣೆಗಳು ಅವನ ಗ್ರಂಥವಲ್ಲಿ ಹೇರಳವಾಗಿ ದೊರೆಯುತ್ತವೆ: ಅವನ್ನೆಲ್ಲ ಇಲ್ಲಿ ಸವಿಸ್ತಾರವಾಗಿ ವಿಮರ್ಶೆ ಮಾಡುವುದು ಅಪ್ರಕೃತ. ಕೆಲವನ್ನು ಮಾತ್ರ ಆರಿಸಿಕೊಂಡು ಅವುಗಳ ಗುಣಾವಗುಣಗಳನ್ನು ಸೂಚಿಸಿದೆ.

(೧) ಅಗ್ನಿಭೂತಿ ವಾಯುಭೂತಿಗಳನ್ನು ಅತಿಬಳ ರಾಜನು ಒಂದು ದಿನ ತನ್ನ ಆಸ್ಥಾನಕ್ಕೆ ಬರಿಸಿ "ನೀವಾವೋದುಗಳಂ ಬಲ್ಲಿರ್" ಎಂದು ಕೇಳಿದನೆಂದೂ ಅವರು ತಲೆಬಾಗಿ ಉತ್ತರ ಹೇಳದೆ ಕಣ್ಣೀರನ್ನು ಸುರಿಸುತ್ತ ನಿಂತಿದ್ದರೆಂದೂ ಸಭಾಸದರು ಇವರು ಮೂರ್ಖರೆಂದು ಹೇಳಿದ ಕೂಡಲೆ ರಾಜ ಅವರನ್ನು ಅಲ್ಲಿಂದ ತೊಲಗಿಸಿ ಅವರ ಮಂತ್ರಿಪದವಿಯನ್ನು ಅವರ ದಾಯಾದಿಗೇ ಕೊಟ್ಟನೆಂದೂ "ವಡ್ಡಾರಾಧನೆ" ಯಲ್ಲಿರುವ ಕಥಾಂಶ. ಇಲ್ಲಿ ಆ ದೊರೆಗೆ ಆ ಅಣ್ಣ ತಮ್ಮಂದಿರನ್ನು ಆಸ್ಥಾನಕ್ಕೆ ಕರಸಿಕೊಂಡುದರ ಕಾರಣ ನಿರೂಪಿತವಾಗಿಲ್ಲ; ದೊರೆಗೆ ಏಕೋ ಏನೋ ಹಾಗೆ ತೋರಿತೆಂದು ಸಮಾಧಾನ ಪಡಬೇಕಾಗಿದೆ. ಈ ಸಂದರ್ಭದಲ್ಲಿ ವಿಜಯ ಜಿಹ್ವನೆಂಬ ವಾದಿಯೊಬ್ಬನು ಅತಿಬಳನ ಸಭೆಗೆ ಬಂದು ವಾದ ಹೂಡಿದಂತೆಯೂ ಅದಕ್ಕೆ ಪ್ರತ್ಯುತ್ತರ ಹೇಳಲು ಅವನ ಇತರ ವಿದ್ವಾಂಸರು ಅಸಮರ್ಥರಾದಾಗ ಈ ಅಣ್ಣ ತಮ್ಮಂದಿರಿಗೆ ಹೇಳಿ ಕಳುಹಿಸಿ ಬರಮಾಡಿದನೆಂದೂ ಶಾಂತಿನಾಥನ ನೂತನ ಪಾತ್ರ ನಿಯೋಜನೆ. ಇದರಿಂದ ಕಥೆಗೆ ವಾಸ್ತವಿಕತೆಯುಂಟಾಗಿರುವುದೊಂದೇ ಅಲ್ಲದೆ, ಆ ವಾದಿಯ ವಾದಪ್ರಚಂಡತೆಯನ್ನೂ ಅವ

ನೆದುರಿಗೆ ನಿಂತ ಅಗ್ನಿಭೂತಿ ವಾಯು ಭೂತಿಗಳ ಹೆದರೆದೆಯ ದೀನಮೌನಾವಸ್ಥೆಯನ್ನೂ ಸಭಾಸದರು ಅವರನ್ನು ತಿರಸ್ಕರಿಸಿ ನುಡಿದುದನ್ನೂ ರಾಜನಿಗೆ ಅವರ ತಂದೆಯ ನೆನಪು ಬಂದು ಅಂಥವನ ಬಸಿರಲ್ಲಿ ಇಂತಹ ನಿಕೃಷ್ಟರು ಹುಟ್ಟಿದರಲ್ಲ, ಅವರಿಂದ ತನಗೂ ತನ್ನ ಸಭೆಗೂ ಅವಮಾನವಾಯಿತಲ್ಲ ಎಂಬ ವ್ಯಾಕುಲವನ್ನೂ ಸರಸವಾಗಿ ಚಿತ್ರಿಸುವ ಅವಕಾಶವುಂಟಾಗಿದೆ; ಕಥೆಯು ಮತ್ತಷ್ಟು ಕ್ರಿಯೆಯಿಂದ ಕೂಡಿ ಕುತೂಹಲಕಾರಕವಾಗಿ ಬೆಳೆಯುತ್ತದೆ. ಅಲ್ಲದೆ ಅಗ್ನಿಭೂತಿ ವಾಯು ಭೂತಿಗಳಿಗೆ ತಾವು ಮೊದಲು ತಾಯ್ತಂದೆಗಳ ಮಾತನ್ನು ಕೇಳದೆ ಉನ್ಮಾರ್ಗಿಗಳಾಗಿ ಕೆಟ್ಟು ಹೋದೆವಲ್ಲಾ ಎಂದು ಮುಂದೆ ಹುಟ್ಟಿದ ಪಶ್ಚಾತ್ತಾಪದ ತೀವ್ರತೆಗೆ ಈ ಸಂದರ್ಭವು ಪರಿಪೋಷಕವಾಗಿಯೂ ಪರಿಣಮಿಸಿದೆ. ಶಾಂತಿನಾಥನ ನವೀನ ಕಲ್ಪನಾ ಸಾಮರ್ಥ್ಯವನ್ನು ಇದು ತೋರಿಸುತ್ತದೆ.

(೨) ತನ್ನ ದೊರೆ ತನಗೆ ನ್ಯಾಸವಾಗಿ ಕೊಟ್ಟಿದ್ದ ಉಂಗುರವನ್ನು ನೀಗಿಕೊಂಡ ಸೂರ್ಯಮಿತ್ರ ತನಗೆ ತಿಳಿದ ಜೋಯಿಸವನ್ನು ಮೊದಲು ಪ್ರಯೋಗಿಸಿ ಉಂಗುರ ಎಲ್ಲಿ ಹೇಗೆ ನಷ್ಟವಾಯಿತೆಂಬುದನ್ನು ತಿಳಿಯಲಾರದವನಾಗಿ ಸುಬಲ ಮಹಾರಾಜನ ನಂಬಿಕೆಗೆ ಪಾತ್ರನಾಗಿದ್ದ ಪರಮಹಂಸಸ್ವಾಮಿ ಎಂಬ ಜೋಯಿಸನನ್ನು ಮನೆಗೆ ಬರಿಸಿ, ಸತ್ಕರಿಸಿ, ಪ್ರಶ್ನೆ ಕೇಳಿದನೆಂದು ಶಾಂತಿನಾಥನು ಹೇಳಿರುವ ಕಥೆ. ಇದು ಹೊಸ ಯೋಜನೆ. ಇದರಲ್ಲಿ ಕಥೆಗೆ ಸಹಜತ್ವ ಏರ್ಪಟ್ಟಿದೆ. ಹಾಳಾದ ಉಂಗುರದ ವಿಷಯವನ್ನು ತಿಳಿಯಲು ಸೂರ್ಯಮಿತ್ರನು ಬೇರೆ ಪ್ರಯತ್ನವನ್ನೇನೂ ಮಾಡದೆ ನೇರಾಗಿ ದಿವ್ಯಜ್ಞಾನಿಗಳಾದ ಸುಧರ್ಮಾಚಾರ್ಯರೆಂಬ ಜೈನರ್ಷಿಯ ಬಳಿಗೆ ಹೋದನೆಂಬುದಕ್ಕಿಂತ ಅವನು ಮೊದಲು ಮಾಡಿದ ಪ್ರಯತ್ನವನ್ನು ತಿಳಿಸುವ ಈ ಕಥೆ ಮೆಚ್ಚತಕ್ಕದ್ದಾಗಿದೆ. ಕಣಿ ಹೇಳಲು ಕುಳಿತ ಆ ರಾಜಪೂಜಿತ ಪರಮಹಂಸ ಆಡಿದ ಆಟಗಳನ್ನೆಲ್ಲಾ ವರ್ಣಿಸಿ ಶಾಂತಿನಾಥ ಅವನನ್ನು ಪರಿಹಾಸಮಾಡಿ ಓದುವವರನ್ನು ಕೊಂಚ ನಗಿಸುತ್ತಾನೆ. ಏನೂ ತಿಳಿಯದವನಾಗಿದ್ದರೂ ಸರ್ವಜ್ಞನಂತೆ ನಟಿಸುವ ಆ ಜೋಯಿಸ ಕೊನೆಗೆ "ಸೂರ್ಯಮಿತ್ರ ವ್ಯಾಪಕ, ಪ್ರಭಾವಶಾಲಿ, ದೊರೆಯ ಬಳಿಗೆ ದಿನವೂ ಹೋಗಿ ಬರುವವನು. ನನಗೆ ಗೊತ್ತಿಲ್ಲವೆಂದರೆ ನನ್ನನ್ನು ಅಜ್ಞಾನಿಯೆಂದು ತೆಗಳಿಯಾನು" ಎಂದು ತನ್ನಲ್ಲಿಯೇ ಯೋಚಿಸಿ ಏನೋ ಕಣಿಯನ್ನು ಅರ್ಥವಾಗದ ರೀತಿಯಲ್ಲಿ ಹೇಳಿಬಿಡುತ್ತಾನೆ. ಇವನ ಜಳ್ಳುತನವನ್ನು ಮನಗಂಡ ಸೂರ್ಯಮಿತ್ರ ಹೆಚ್ಚು ಮಾತಿನಿಂದ

ಪ್ರಯೋಜನವಿಲ್ಲವೆಂದೂ ಸುಮ್ಮನೆ ಏಕೆ ದ್ವೇಷ ಕಟ್ಟಿಕೊಳ್ಳಬೇಕೆಂದೂ ಅವನನ್ನು ಹೊಗಳಿ ಮನೆಯಿಂದ ಹೊರವಡುತ್ತಾನೆ. ಈ ಮಿಥ್ಯಾಜ್ಞಾನಿಗೂ ಆ ದಿವ್ಯಜ್ಞಾನಿ ಜೈನ ಮುನಿಗೂ ಇರುವ ಅಂತರವೆಷ್ಟೆಂಬುದರ ಕಲ್ಪನೆಯೂ ಈ ಸಂದರ್ಭದಿಂದ ಹೊಳೆಯುತ್ತದೆ. ಆ ಪರಮಹಂಸನು ಆಡಿದ್ದನ್ನೆಲ್ಲಾ ವರ್ಣಿಸುವ ಶಾಂತಿನಾಥನ ರೀತಿ ದುರ್ಯೋಧನನು ಜೂಜಾಡುವಾಗ 'ಡೊಂಬರ ಕೋಡಗನಂತಾಡಿ'ದ್ದನ್ನು ವರ್ಣಿಸುವ ಪಂಪನ ರೀತಿಯನ್ನು ನೆನಪಿಗೆ ತರುವುದಾಗಿದ್ದು (ಪಂ. ಭಾ. ೬-೭೨ವ) ಆ ಕಾರಣದಿಂದಲೂ ಅದು ಹೃದ್ಯವಾಗಿ ತೋರುತ್ತದೆ.

(೩) ನಾಗಶ್ರೀ ಕೈಕೊಂಡ 'ಪುಸಿಯದ ವ್ರತ' ಕ್ಕೆ ಸಂಬಂಧಿಸಿದ ಹೊಸ ಕಥೆಯನ್ನು ಶಾಂತಿನಾಥನು ಹೇಳಿದ್ದಾನೆ. ವಂಗದೇಶದ ರಾಜ ವಜ್ರಾಯುಧನು ಚಂಪಾನಗರದ ಚಂದ್ರವಾಹನನೊಡನೆ ಯುದ್ಧ ಮಾಡಬೇಕೆಂದು ದಂಡೆತ್ತಿ ಬಂದು ಬೀಡನ್ನು ಬಿಟ್ಟು, ಚಂದ್ರವಾಹನನ ಬಳಿಗೆ ಒಬ್ಬ ದೂತನನ್ನು ಕಳುಹಿಸಿದನು. ಈ ಸುದ್ದಿಯನ್ನು ಕೇಳಿ ಚಂದ್ರವಾಹನ ತನ್ನ ದಂಡಾಧಿನಾಯಕನಾದ ಬಳನನ್ನು ತನ್ನ ಸಕಲ ಸೈನ್ಯದೊಡನೆ ಸಮರಕ್ಕೆ ಕಳುಹಿಸಿಬಿಟ್ಟನು. ಎರಡು ಸೈನ್ಯಗಳಿಗೂ ಕಾಳಗ ಗಂಟಿಕ್ಕಿ ಭರದಿಂದ ಸಾಗುತ್ತಿರುವಾಗ ಅದನ್ನು ಕಂಡು ಹೆದರಿದ ತಕ್ಷಕನೆಂಬ ಬಂಟನು ತನ್ನ ದೊರೆ ಚಂದ್ರವಾಹನನಲ್ಲಿಗೆ ಬಂದು ಯುದ್ಧದಲ್ಲಿ ವಜ್ರಾಯುಧನೇ ಗೆದ್ದನೆಂದು ಸುಳ್ಳು ಸುದ್ದಿಯನ್ನು ಹೇಳಿದನು. ಚಂದ್ರವಾಹನ ಖಿನ್ನನಾಗಿ ಮುಂದೇನು ಮಾಡಬೇಕೆಂಬ ಚಿಂತೆಗೊಳಗಾಗಿರುವಾಗ ಬಳನು ಅಟ್ಟಿದ ಒಬ್ಬ ಲೇಖವಾಹಕ ಬಂದು ಚಂದ್ರವಾಹನನಿಗೆ ವಿಜಯ ದೊರೆತ ಶುಭವಾರ್ತೆಯನ್ನು ತಿಳಿಸಿದನು. ನಿಜವನ್ನು ತಿಳಿದ ಚಂದ್ರವಾಹನ ಹುಸಿ ಸುದ್ದಿಯನ್ನು ಹಬ್ಬಿಸಿದ ತಕ್ಷಕನನ್ನು ಶೂಲಕ್ಕೇರಿಸುವಂತೆ ಅಪ್ಪಣೆ ಮಾಡಿದನು. ಈ ಕಥೆಗೆ ಮೂಲವಾಗಲಿ, ಅದಕ್ಕೆ ಸೇರಿದ ಸೂಚನೆಯಾಗಲಿ 'ವಡ್ಡಾರಾಧನೆ' 'ಕಥಾಕೋಶ' ಗಳಲ್ಲಿಲ್ಲ. ಕಥೆಯೂ ಅಷ್ಟೇನೂ ಸ್ವಾರಸ್ಯವಾಗಿಲ್ಲ. ಆದರೆ ಒಂದು ಕಥೆಯ ಚೌಕಟ್ಟಿನಲ್ಲಿನ್ನೊಂದು ಕಥೆ, ಅಡಕುಪಾತ್ರೆಯಂತೆ ಒಂದರೊಳಗೊಂದಿರುವುದನ್ನು, ಬೇರೆ ಬೇರೆ ಹೇಳಿದರೆ ಕಥಾಸರಣಿ ಸುಲಭವಾಗುತ್ತದೆಂದು ಶಾಂತಿನಾಥ ಈ ಹೊಸ ಕಥೆಯನ್ನು ಹೇಳಿರುವಂತೆ ಕಾಣುತ್ತದೆ. ಇದಕ್ಕಿಂತ ಮಿಗಿಲಾದ ಬೇರೆ ಉಪಯೋಗ ಕಥೆಗೆ ಉಂಟಾಗಿಲ್ಲ. ಆದ್ದರಿಂದ ಈ ಸಂವಿಧಾನದಲ್ಲಿ ಗುಣಾಧಿಕ್ಯವೇನೂ ಇಲ್ಲವೆಂದು ಹೇಳಬಹುದು.

(೪) ನಾಗಶ್ರೀಯ ಪಾಂಡಿತ್ಯವನ್ನು ಪ್ರಕಟಿಸಿಯಾದಮೇಲೆ ಸೂರ್ಯಮಿತ್ರಾಚಾರ್ಯನು ಋಷಿ ಸಮುದಾಯ ಸಹಿತನಾಗಿ, ನಾನಾಧರ್ಮ ಕ್ಷೇತ್ರಗಳಿಗೆ ವಿಹಾರಿಸುತ್ತಾ, ಧರ್ಮೋಪದೇಶ ಮಾಡುತ್ತ, ಮಗಧ ದೇಶದ ರಾಜಗೃಹಕ್ಕೆ ಬಂದು ಮುನ್ನ ತನ್ನರಸನಾಗಿದ್ದ ಆ ದೇಶಾಧಿಪತಿ ಸುಬಲ ರಾಜನಿಗೆ ಜಿನದೀಕ್ಷೆಯನ್ನು ಕೊಟ್ಟನೆಂದೂ, ಅದೇ ಸಮಯಕ್ಕೆ ಅಲ್ಲಿಗೆ ಬಂದಿದ್ದ ಕೌಶಾಂಬಿಯ ದೊರೆ ಅತಿಬಳನೂ ದೀಕ್ಷಾಗ್ರಹಣಮಾಡಿದನೆಂದೂ ಅನಂತರ ಸೂರ್ಯಮಿತ್ರನು ವಾರಣಾಶೀ ಪುರಕ್ಕೆ ಬಂದು ಅಲ್ಲಿನ ಅಶೋಕವನದಲ್ಲಿ ತಪಸ್ಸುಮಾಡಿ ಮೋಕ್ಷಕ್ಕೆ ಹೋದನೆಂದೂ ಶಾಂತಿನಾಥನು ಹೇಳಿದ್ದಾನೆ. ಈ ಅಂಶಗಳು 'ವಡ್ಡಾರಾಧನೆ' ಯಲ್ಲಾಗಲಿ 'ಕಥಾಕೋಶ' ದಲ್ಲಾಗಲಿ ಕಾಣುವುದಿಲ್ಲ. ಈ ದೊರೆಗಳಿಗೆ ಮುಂದೆ ಏನಾಯಿತೆಂಬ ವಿಚಾರ ಆ ಗ್ರಂಥಗಳಿಗೆ ಬೇಕಿಲ್ಲ. ಶಾಂತಿನಾಥನು ಅವರನ್ನು ನಡುವೆ ಕೈಬಿಡದೆ ಅವರಿಗೂ ಸದ್ಗತಿ ದೊರೆಯುವ ಅವಕಾಶವನ್ನು ಕಲ್ಪಿಸಿ ಕೊಟ್ಟಿದ್ದಾನೆ. ಕಥೆಯು ಸಾಂಗವಾಗಿ ಮುಗಿಯಿತೆಂಬ ಸಮಾಧಾನವನ್ನು ಉಂಟುಮಾಡುವುದು ಅವನ ಉದ್ದೇಶವಿದ್ದಂತೆ ಬೋಧೆಯಾಗುತ್ತದೆ. ಇದರಿಂದ ಬೇರೇನೂ ಗುಣೋತ್ಕರ್ಷ ಕಥೆಗೆ ಉಂಟಾಗಿಲ್ಲವೆಂದು ಹೇಳಬಹುದು.

'ವಡ್ಡಾರಾಧನೆ' ಯಲ್ಲಿ ದೊರೆಯುವ ಕೆಲವು ಸೂಚನೆಗಳನ್ನು ಗ್ರಹಿಸಿ ಶಾಂತಿನಾಥನು ಅವನ್ನು ಉಚಿತವಾಗಿ ವಿಸ್ತರಿಸುವುದರಿಂದ ಕಥೆಗೆ ಸೊಗಸನ್ನು ತಂದಿದ್ದಾನೆಂಬುದನ್ನು ಇನ್ನು ನೋಡಬೇಕು. ಇಂಥ ನಾಲ್ಕು ಸಂದರ್ಭಗಳನ್ನು ಹಿಂದೆಯೇ ತಿಳಿಸಿದೆ. ಅವುಗಳನ್ನು ಎಚ್ಚರಿಕೆಯಿಂದ ಪರಾಮರ್ಶಿಸಿ ಒರೆದು ನೋಡಿದಾಗ ಶಾಂತಿನಾಥನ ಶಕ್ತಿವಿಶೇಷದ ಪರಿಚಯವಾಗುತ್ತದೆ.

(೧) ಸುಧರ್ಮಾಚಾರ್ಯರಲ್ಲಿಗೆ ಹೋಗಿ ಸೂರ್ಯಮಿತ್ರನು ಈ ಸವಣ ಜೋಯಿಸಮನೆಂತಪ್ಪೊಡಂ ಕ್ಷಪಣಕನಂ ಮಿಥ್ಯಾವಿನಯದಿಂದಿಳಿಸಿ ಕಲ್ವೆನ್ (ವಡ್ಡಾ ೧೫, ೨೫-೩೬) ಎಂದು ನಿಶ್ಚಯಿಸಿ, ಜೋತಿಷ್ಯವನ್ನು ಕಲಿಸಿಕೊಡಿರೆಂದು ಬೇಡಿದನು; ಅವನು ಕೈಕೊಂಡ ತಪಸ್ಸು 'ಉಕ್ಕೆವ ತಪ.' ಈ ಮಾತುಗಳಲ್ಲಿ ಅಡಗಿರುವ ಸೂರ್ಯಮಿತ್ರನ ಆಗಿನ ಮನೋಧರ್ಮವನ್ನು ಶಾಂತಿನಾಥನು ಚೆನ್ನಾಗಿ ಕಂಡಿದ್ದಾನೆ. ಸೂರ್ಯಮಿತ್ರನ ಮನದಲ್ಲಿರುವುದೊಂದು; ಅವನ ಬಾಯುಲ್ಲಿ ಬರುವ ಮಾತು ಮತ್ತೊಂದು. ಜೋಯಿಸವನ್ನು ಕಲಿಯಲೇ ಬೇಕೆಂಬ ತನ್ನ ಕಾರ್ಯಸಾಧನೆಗಾಗಿ ಸುಧರ್ಮನನ್ನು ಅವನು ಕಂಡ ಕೂಡಲೇ "ದಿವ್ಯಜ್ಞಾನಮಹಿಮಾಪ್ರಭಾವ, ವೀರ್ಯಾನೂನಗುಣಾ" ಎಂದು ಹೊಗಳಿ

ಎನಗೆ ಕಳತ್ರ ಮಿತ್ರ ಬಹುಪುತ್ರ ಕುಟುಂಬಮುಳುಂಬಮೆನ್ನಮಾ
ತಿನಿತೆ ಮುನೀಂದ್ರ ನಿಮ್ಮಱಿವ ಜೋಯಿಸಮಂ ದಯೆಗೆಯ್ದಿರಪ್ಪೊಡೆ
ನ್ನನಿತು ಕೃತಾರ್ಥರುಂ ಸುಚರಿತಾರ್ಥರುಮೆಯ್ದೆ ಸಮರ್ಥರುಂ ಮಹಾ
ವನಿಯೊಳಗಿಲ್ಲ ನೀವೆ ಶರಣಂ ಶರಣಾಗತ ಕಲ್ಪ ಭೂರುಹಾ॥

ಎಂದು ಹೇಳಿ ಅವನ ಕಾಲಿಗೆ ಬಿದ್ದು ತನ್ನನ್ನು ಆ ಗುರುಗೆ ಸಮರ್ಪಿಸಿಕೊಂಡನು. ಇಲ್ಲಿ 'ಮಿಥ್ಯಾ ವಿನಯ' 'ಉಕ್ಕೈವ ತಪ' ಎಂಬ ಪದಗಳಲ್ಲಿರುವ ಭಾವವನ್ನು ಶಾಂತಿನಾಥನು ಸುಕವಿಯಂತೆ ವ್ಯಕ್ತಗೊಳಿಸಿದ್ದಾನೆ. ಮುಂದಕ್ಕೆ 'ಎಂತಪ್ಪೊಡಂ' ಎಂಬ ಶಬ್ದದ ಕಡೆಗೆ ತಿರುಗುತ್ತಾನೆ. ದ್ವಿಜನಾದ ಸೂರ್ಯಮಿತ್ರನಿಗೆ ಜಿನದೀಕ್ಷೆ ವಹಿಸಿ ದಿಗಂಬರಮುನಿಯಾಗುವುದು ಎಳ್ಳಷ್ಟೂ ಇಷ್ಟವಿಲ್ಲ. ಅದರಿಂದ ಅವನ ಜಾತಿಕುಲಗಳಿಗೆ ಕೇಡು, ಗೌರವಕ್ಕೆ ಹಾನಿ, ಪ್ರತಿಷ್ಠೆಗೆ ಅವನತಿ. ಆದರೂ ಜೋಯಿಸವಿದ್ಯೆಯನ್ನು 'ಕೇನಾಪ್ಯುಪಾಯೇನ' ಸಾಧಿಸಬೇಕೆಂಬ ಛಲ. ಆದ್ದರಿಂದ ಅವನು ತನ್ನಲ್ಲಿಯೇ:

ತಲೆವಱಿದುಟ್ಟುದಂ ಬಿಸುಟು ಮೀಯದೆ ಮೋಕದೆ ದಂತ ಪಂಕ್ತಿಯಂ
ಸುಲಿಯದೆ ಸಂಯಮೋಪಕರಣಗಳನಿಂಬಿನೆ ತಾಳ್ದಿ ದೇಹದೊಳ್
ಮಲಮನನಾರತಂ ತಳೆದುಪಾಸಕವಾಸದೊಳೇಕ ಭುಕ್ತಮಂ
ಸಲಿಸುವ ಘೋರ ವೀರ ತಪಮಾ ತಪಮಾತಪದಿಂದಮುಗ್ರಳಂ ॥

ಎಂದು ಭಾವಿಸಿ ನೋಡಿ ಮನದಲ್ಲಿ ಹೇಸಿ ಆ ತಪಸ್ಸಿನ ಕ್ಲೇಶಕ್ಕೆ ಹೆದರಿ "ಲಜ್ಜೆಗೆಟ್ಟೆಂತು ಮೆಯ್ಯನೊಡ್ಡುವೆನಿವಱೊಳ್" ಎಂದು ಚಿಂತಿಸಿ ಜಿನದೀಕ್ಷಾಗ್ರಹಣವನ್ನು ಮನಃಪೂರ್ವಕವಾಗಿ ಮಾಡಿದರೆ ಅದರಿಂದೆ ತನಗೆ ಕುಲಹಾನಿಯೇ ಹೊರತು "ಜೋಯಿಸಮಱಿವ ತಕ್ಕಿನೊಳ್ ತಪಸಿಯಾದೊಡಾವುದು ದೋಷಂ" ಎಂದು ಸಂತೈಸಿಕೊಂಡು

ಮೇಲ್ಮಲೆಗೈಯದೆ ಸವಣನ।
ಬಲ್ಮೆಯನಱಿಯಲ್ಕೆ ದೀಕ್ಷೆಯಂ ಕೊಂಡಪೆನ
ತ್ತಲ್ಮತ್ತಮೆನ್ನ ತಲೆಯೊಳ್।
ಪುಲ್ಮೊಳೆತಪ್ಪುದೆ ಮುನೀಂದ್ರನೆಂಬುದನೆಂಬೆಂ॥

ಎಂಬ ತೀರ್ಮಾನಕ್ಕೆ ಬರುತ್ತಾನೆ. ಇದುವರೆಗೆ ನಡೆದ ತನ್ನ ಮನದ ತೋಟಿಯನ್ನೆಲ್ಲಾ ಅವನು "ದಿಗಂಬರನಾಗಿ ತಲೆ ಬೋಳಿಸಿಕೊಂಡರೇನು,

ಅಲ್ಲಿ ಹುಲ್ಲೇನೂ ಬೆಳೆಯಲಾರದಲ್ಲ" ಎಂಬ ಕ್ಷಣಿಕ ಮಂದಸ್ಮಿತದಿಂದ ತೊಲಗಿಸಿ ಬಿಡುವುದು ರಮ್ಯವಾಗಿದೆ. 'ಎಂತಪ್ಪೊಡಂ' ಎಂಬ ಶಬ್ದದ ಧ್ವನಿಯನ್ನೆಲ್ಲ ಶಾಂತಿನಾಥನು ಇಲ್ಲಿ ಸಾಕ್ಷಾತ್ಕರಿಸಿಕೊಂಡಿದ್ದಾನೆ.

(೨) ವಾಯುಭೂತಿ ತನ್ನನ್ನು ನೋಡಿ ಹರಸಿಹೋಗಲು ಬಂದ ಸೂರ್ಯಮಿತ್ರ ಮುನಿಯನ್ನು ಧಿಕ್ಕರಿಸಿ ಅವಮಾನ ಮಾಡಿದ ಪ್ರಸಂಗವನ್ನು ಶಾಂತಿನಾಥನು ಸೊಗಸಾಗಿ ಚಿತ್ರಿಸಿದ್ದಾನೆ. ಸೂರ್ಯಮಿತ್ರನು ಮನೆಗೆ ಬಂದಾಗ ವಾಯುಭೂತಿ "ಪಿರಿಯ ಲೋೀಹಾಸನಮನೇಱಿ ಪಲಂಬರ್ ಪಾರ್ವರ್ಗೆ ವಖ್ಖಾಣಿಸುತ್ತಿರ್ದ ಮನದ ಗರ್ವದಿಂದಿದಿರೆ ಬಂದು ಬಂದಿಸ" ಲಿಲ್ಲವೆಂದೂ ಆಗ ಅವನ ಅಣ್ಣ ಅಗ್ನಿಭೂತಿ ಅವನ ಕೈಹಿಡಿದುಕೊಂಡು "ತಮ್ಮ, ಇವರು ನಮ್ಮ ಸ್ವಾಮಿಗಳು; ಇವರ ಪ್ರಸಾದದಿಂದ ನಮಗೆ ಇಷ್ಟೆಲ್ಲ ಸಿರಿಸಂಪತ್ತುಗಳಾಗಿವೆ." ಎಂದು ಹೇಳಿದಾಗ "ಇದೇನೊಳ್ಳಿದರ್ಗ್ಗೆನ್ನಂ ಪೊಡೆವಡಿಸಿದಪ್ಪಯ್ ಪೇಱೆಂದುಮುಶುಚಿಗಳ್ ಮಲಗ್ರಸ್ತರೆಂದಪ್ಪೊಡಂ ಮಿಂದಱಿಯದವರಿವರ ಕಾಲ್ಗೆಱಗುವೆಂ ಗಡಮೆಂದು ಪಾರ್ವರಸಭೆಯ ನಡುವಿರ್ದು ಕನಿಷ್ಠ ನಿಷ್ಠುರ ವಚನಂಗಳಿಂ ನಾನಾಪ್ರಕಾರದಿಂ ನಿರಾಕರಿಸಿ ನುಡಿದು ಪೊಲ್ಲದಂ ಪೇೞ್ದಿಟ್ಟಿಕಳೆ"ದನೆಂದು 'ವಡ್ಡಾರಾಧನೆ'ಯಲ್ಲಿದೆ (ವ. ಪ್ರ. ೭೮-೧೨,೨೦). ಇಲ್ಲಿರುವಂತೆಯೇ ಶಾಂತಿನಾಥನು "ನಿಜ ಸಭಾಭ್ಯಂತರಲೋಹಾಸನಾರೂಢಂ ಗರ್ವ ಪರ್ವತಾರೂಢನಾಗಿ"

ಅಸಹಿಷ್ಣು ದೆಸೆಗೆ ಬೆಟ್ಟಿಸೆ
ವೆಸೆದಿರ್ದೆಡೆಯಿಂದಮೇೞಲೆಸಗದವಷ್ಟಂ।
ಭಿಸಿ ವಿಪ್ರಸಭೆಗೆ ವಕ್ಖಾಣಿ
ಸುತ್ತುಮುದ್ಧಿ ರ್ವನವರನವಮಾನಿಸಿದಂ॥

ಎಂದು ಈ ದೃಶ್ಯ ಚಿತ್ರಣಕ್ಕೆ ಆರಂಭಿಸಿದ್ದಾನೆ. ವಾಯುಭೂತಿ ಅವನಿಗೆ ವಂದಿಸುವುದು ಹಾಗಿರಲಿ, ಅವನನ್ನು ತನ್ನಲ್ಲಿಗೆ ಕರೆತಂದ ತನ್ನ ಅಣ್ಣನನ್ನೂ ಆದರಿಸಲಿಲ್ಲ, ಕುಳಿತುಕೊ ಎಂದು ಕೂಡ ಹೇಳಲಿಲ್ಲ; 'ಮೂಗಂ ಮೇಲೆತ್ತಿಕೊಂಡಿದ್ದ'ನು. ಆಗ ಅಣ್ಣ "ಜನನಿಯೊಡವುಟ್ಟಿದಂ, ಮಾವನ್, ಉಪಾಧ್ಯಾಯಂ, ಮುನೀಶ್ವರಂ, ದಯೆಯಿಂ ನಿನ್ನಂ ಪರಸಲ್ ಬಿಜಯಂಗೆಯ್ದಂ" ಎಂದು ಎಷ್ಟು ಹೇಳಿದರೂ ಆ ಮಾತು ಅವನನ್ನು ಮುಟ್ಟಲಿಲ್ಲ. ವಾಯುಭೂತಿ ಸೂರ್ಯಮಿತ್ರ ಭಟ್ಟಾರಕರ ಮೊಗಮುಂ ನೋಡಿ

ಮನೆಯೊಳ್ ವೈನೆಗೆ ಬಾತುಕೊಂಡು ಸಿರಿಯೊಳ್ ಕಣ್ಗಾಣದೊಡ್ಡಯ್ಸುವಂ
ದಿನ ನೀಮಾರ್ಗೆಲೆ ನಿಮ್ಮ ನಾವಱಿಯೆವೆಂದೆಮ್ಮಂ ತೊಡಂಕಿಕ್ಕುವಂ
ದಿನ ಭಿಕ್ಷಾನ್ನಮನಿಕ್ಕುವಲ್ಲಿ ಸತಿಯಂ ಬೇಡೆಂದು ಕಣ್ಕೆತ್ತುವಂ
ದಿನ ಸೊರ್ಕಕ್ಕಟ ಮುಕ್ಕುವೋಗಿ ಕಡೆಯೊಳ್ ಭೈಕ್ಷಕ್ಕೆ ಪಕ್ಕಾದಿರೇ ‖

ನೀಂ ಬೇವಾದೊಡೆ ನಿನ್ನ ಕು
ಟುಂಬಿನಿಯುಂ ಕೈಪೆಸೊರೆಯ ಕುಡಿಯೇಂ ಮಿಡಿಯೇ
ನೆಂಬಂತೆ ದರಸಿಯೂದಳಿ ।
ದೇಂ ಬಳ್ವಳ ಬಳೆದ ಬಂಧುತನಮಿನಿದಾಯ್ತೋ ‖

ತಿರಿದುಂಡು ಕಚ್ಚುಟಮನು
ಟ್ಟು ರಚ್ಚೆಯೊಳ್ ಪಟ್ಟು ಮುಟ್ಟುಗೆಟ್ಟು ಬ್ಬಿಗಮು ।
ಬ್ಬರಿಸಿ ನಮೆದುದನದಂ ಮಱೆ ।
ದಿರೆ ಮಾವಂ ದೇವನಾದೊನೇ ನಮಗೀಗಳ್ ‖

ನೀರುಂ ನೇಣುಮನಾವಗಂ ತೊಱೆದುದಂ ಮೇಣ್ ಕಾಣೆಯೋ ಬ್ರಾಹ್ಮಣಾ
ಚಾರ ಪ್ರಕ್ರಿಯೆಯಿಲ್ಲದಿರ್ದಿರವನೇನಾರಯ್ಯೆಯೋ ಕಂಡುಗಂ
ಡಾರುಂ ನಾಣ್ಚುವ ಮಾರ್ಗದೊಳ್ ನಡೆಯುತುಂ ನಾಣ್ಗೆಟ್ಟುದಂ ನೋಡೆಯೋ
ಪಾರಿಬ್ರಾಜಕಮೆಂದಭಿಷ್ಟುತೆಗೆಯಲ್ ನಿನ್ನೋಲ್ ಗುಣಂ ಮಾಸದೇ ‖

ಎಂದು ತನ್ನ ಸೋದರಮಾವನಾಗಿದ್ದ ಗುರುವನ್ನೂ ಅತ್ತೆಯನ್ನೂ ತನ್ನಣ್ಣನನ್ನೂ ಒಟ್ಟಿಗೇ ಸೇರಿಸಿ ಅಸಹನೆ ಕ್ರೋಧ ತಿರಸ್ಕಾರಗಳ ಖಡ್ಗವನ್ನು ಝುಳಪಿಸುತ್ತೆ ಬೈದದ್ದು, 'ಕನಿಷ್ಠ ನಿಷ್ಠುರವಚನಂಗಳಿಂ,' 'ನಾನಾಪ್ರಕಾರದಿಂ', 'ಪೊಲ್ಲದಂ ಪೇಳ್ದು', ಎಂಬ ಮೂಲದಲ್ಲಿರುವ ಮಾತುಗಳ ಇಂಗಿತವನ್ನು ಪ್ರಕಾಶ ಪಡಿಸಿದಂತಾಗಿದೆ. ಜೊತೆಗೆ ಪೊನ್ನರನ್ನರ ರೀತಿ ನುಡಿಗಟ್ಟುಗಳನ್ನು ಅನುರಣನ ಮಾಡುತ್ತ ಈ ದೃಶ್ಯ ಮತ್ತಷ್ಟು ಸ್ವಾದುತ್ವವನ್ನು ಪಡೆದಿದೆ. ಹೀಗೆಯೇ 'ಸುಕುಮಾರ ಚರಿತ್ರೆ'ಯ ಮುಖ್ಯ ಕಥೆಯನ್ನೆಲ್ಲಾ ದೃಷ್ಟಿಯಲ್ಲಿಟ್ಟುಕೊಂಡು ಅಲ್ಲಿ ಕಾಣುವ ಮಾತಂಗಿಯ ವರ್ಣನೆ (iv ೫೬-೬೦), ಅಗ್ನಿಭೂತಿಯ ಕರುಣೆ (iv ೬೧-೬೩), ದೊಂಬನ ಮನೆಯಲ್ಲಿ ವಾಯುಭೂತಿಜೀವ ಉಂಡ ದುಃಖ (v ೧೩-೨೦), ನಾಗಶ್ರೀಯ ಸೌಂದರ್ಯ (v ೫೧-೬೦), ಸುಮತಿ ಕಳ್ಳರನ್ನು ಲಲ್ಲೈಸಿ ನಂಬಿಸಿದ್ದು (vii ೧೦-೧೪), ಸುದಾಮೆಯ ಚಿತ್ರಕಥೆ (vii ೧೬-೧೭), ನಾಗಶ್ರೀಯ

ಪಾಂಡಿತ್ಯ ಪ್ರದರ್ಶನ (vii ೪೯-೫೦) ಮುಂತಾದ ಇನ್ನೂ ಹಲವು ಸಂದರ್ಭಗಳನ್ನು ವಿಮರ್ಶಿಸಿ ನೋಡಿದರೆ ಶಾಂತಿನಾಥನು ಎಂಥ ಸಹೃದಯನೆಂದು ವಿದಿತವಾಗುತ್ತದೆ. ಮೂಲವನ್ನು ಬಳಸಿಕೊಳ್ಳುವುದರಲ್ಲಿ ಸಾಧಾರಣವಾಗಿ ಅವನ ಔಚಿತ್ಯ ಜ್ಞಾನ, ವಿಮರ್ಶನ ಶಕ್ತಿ, ಇಂಗಿತಜ್ಞತೆ, ಕಲ್ಪನಾಸಾಮರ್ಥ್ಯ ರಸಿಕತೆಗಳು ಮನೋಜ್ಞವಾಗಿ ವಿಕಾಸಗೊಂಡಿವೆ; ಅವನು ಹೇಳುತ್ತಿರುವುದು ಹಳೆಯ ಕಥೆಯೇ ಆಗಿದ್ದರೂ ಅದೊಂದು ನೂತನ ರಚನೆಯೆಂಬಂತೆ ತೋರಿ ಅವನ ಕಾವ್ಯ ಭಾವಕರ ಚೇತೋಹಾರಿಯಾಗಿದೆಯೆಂಬುದು ಅನುಭವಕ್ಕೆ ಬರುವಂತಿದೆ. 'ವಡ್ಡಾರಾಧನೆ' ಯ ಧ್ವನಿಪೂರ್ಣ ಸಂಕ್ಷಿಪ್ತತೆಯನ್ನು ಸಸಂಯಮ ವಿಸ್ತಾರಕ್ಕೆ ಸವಿಲಾಸದಿಂದ ಪರಿವರ್ತಿಸಿರುವ ಶಾಂತಿನಾಥನ ಕವಿಕಾರ್ಯ ರನ್ನನ ಕವಿಕರ್ಮವನ್ನು ಹಲವು ಬಾರಿ ನೆನಪಿಗೆ ತರುತ್ತದೆ; ಪಂಪನಿಗೆ ರನ್ನನು ಹೇಗೋ 'ವಡ್ಡಾರಾಧನೆ' ಯ ಸುಕುಮಾರ ಕಥೆಗೆ ಶಾಂತಿನಾಥನು ಬಲುಮಟ್ಟಿಗೆ ಹಾಗೆ-

# ವಿಮರ್ಶೆ

"ಈ ಸುಕುಮಾರ ಚರಿತದೊಳ್ ನೋಟ್ಟೆ ಕಾವ್ಯಧರ್ಮಮುಮನಮಳ ಜಿನಧರ್ಮಮುಮಂ," "ಪೇಟ್ವೆನುದ್ದಾಮ ಕವಿತ್ವ ತತ್ವ ರುಚಿಯಿಂ ಸುಕುಮಾರ ಕಥಾ ಪ್ರಬಂಧಮಂ" ಎಂದು ಶಾಂತಿನಾಥ ಪಂಪನಂತೆ ಪ್ರತಿಜ್ಞೆ ಮಾಡಿ ತನ್ನ ಕಾವ್ಯದಿಂದ ಓದುಗರು ನಿರೀಕ್ಷಿಸಬೇಕಾದದ್ದು ಕವಿತ್ವರುಚಿ, ಜಿನತತ್ವರುಚಿಗಳೆಂಬುದನ್ನು ತಿಳಿಸಿದ್ದಾನೆ. ಕಾವ್ಯರಚನೆಯಲ್ಲಿ ಅವನಿಗಿದ್ದ ಉದ್ದೇಶ ಇವೆರಡು. ತತ್ವಕ್ಕೆ ಕವಿತೆಯ ಅವಲಂಬನ ದೊರೆತರೆ ಅದು ತನ್ನ ಶುಷ್ಕತೆಯನ್ನು ನೀಗಿಕೊಂಡು ರುಚಿಯಾಗುತ್ತದೆ; ಕವಿತೆಗೆ ಮತತತ್ವದ ಅವಲಂಬನೆ ಆವಶ್ಯಕವಲ್ಲವಾದರೂ ಅದು ಇದ್ದಾಗ ಕವಿತೆ ಸಾರತರವಾಗುತ್ತದೆ. ಏಕೆಂದರೆ ಕಾವ್ಯವು ಆನಂದದಾಯಿಯಷ್ಟೆ ಅಲ್ಲ, ಆತ್ಮವಿಕಾಸಕಾರಕವೂ ಹೌದು. ಆತ್ಮಪರಿಪಾಕವನ್ನುಂಟುಮಾಡುವುದೇ ಸಕಲ ಧರ್ಮಗಳ ಸಾರಭೂತವಾದ ಉದ್ದೇಶವಾಗಿರುವುದರಿಂದ ಇಲ್ಲಿ ಕಾವ್ಯಕ್ಕೂ ಧರ್ಮಕ್ಕೂ ಸಸ್ನೇಹ ಸಂಬಂಧವೇರ್ಪಡುತ್ತದೆ. ಸರ್ವಕಾಲದ ಸರ್ವಜನರಿಗೂ ಸಾಧಾರಣವಾದ ಜೀವಿತ ಸತ್ಯದ ದರ್ಶನಾನುಭವಗಳನ್ನು ದೊರಕಿಸುವುದು ಕಾವ್ಯದ ಪರಮೋದ್ದೇಶವಾಗಿರುವುದರಿಂದ ಅದರಲ್ಲಿ ಮೈದೋರುವ ಧರ್ಮಕ್ಕೂ ಸರ್ವಸಾಧಾರಣತ್ವವು ಪ್ರಾಪ್ತವಾಗಿರಬೇಕು. ವೈಯಕ್ತಿಕಧರ್ಮ ಸಮಸ್ತಮಾ

ನವಧರ್ಮವಾಗಿ ಕಾವ್ಯದಲ್ಲಿ ನೆಲಸಿದಾಗ ಅದು ರಸರುಚಿಗಳನ್ನು ಧರಿಸಿ ಕಾವ್ಯಕ್ಕೆ ಪ್ರೇರಕವಾಗುತ್ತದೆ. ಕಾವ್ಯದಲ್ಲಿ ಧರ್ಮವು ಕರಗಿ ಅನುಭವರಸನೆಗೆ ಮಾತ್ರ ಅದರ ಇರವು ವೇದ್ಯವಾಗುವಂತಿರಬೇಕು. ಧರ್ಮವು ತನ್ನ ಪೃಥಕ್ ಭಾವವನ್ನು ಮರೆತು ಕಾವ್ಯದಲ್ಲಿ ಕಂಡೂ ಕಾಣದಂತೆ ಗೌಣವಾಗಿರಬೇಕು. ಕಾವ್ಯದಲ್ಲಿ ಧರ್ಮಕ್ಕಿರುವ ಸ್ಥಾನವಿದು. ಈ ದೃಷ್ಟಿಯಿಂದ ನೋಡಿದರೆ ಶಾಂತಿನಾಥನ ವೈಯಕ್ತಿಕ ಜಿನ ಧರ್ಮ ಅವನ ಕಾವ್ಯದಲ್ಲಿ ಸಕಲ ಮಾನವಸಾಧಾರಣ ಧರ್ಮತತ್ವವನ್ನು ತಳೆದು ಅದನ್ನು ನಡೆಯಿಸುವ ಸೂಕ್ಷ್ಮ ಶಕ್ತಿಯಾಗಿರುವುದು ತಿಳಿಯುತ್ತದೆ; ಅಲ್ಲಿ ಧರ್ಮಕ್ಕೆ ರಸತ್ವವುಂಟಾಗಿದೆ. ವೈಯಕ್ತಿಕ ಧರ್ಮವನ್ನು ಅವನು ಎಲ್ಲಿ ಪೃಥಕ್ಕಾಗಿ ವಿಸ್ತರಿಸಿದ್ದಾನೋ ಅಲ್ಲಿ ಅದಕ್ಕೆ ಕಾವ್ಯತ್ವ ಲಭಿಸಿಲ್ಲ; ಆದ್ದರಿಂದ ಅದು ಸರ್ವರಿಗೂ ರುಚಿಸುವುದಿಲ್ಲ. ಅಲ್ಲದೆ ಅದಕ್ಕೆ ಕಾವ್ಯದ ಚೌಕಟ್ಟಿನಿಂದ ಹೊರಕ್ಕೆ ಬಂದು ತನ್ನತನವನ್ನು ಮೆರೆಯುವ ಕಾತರತೆ ಮಿಗಿಲಾಗಿದೆ. ಈ ವಿಧಾನದಲ್ಲಿ ಕಾವ್ಯದಲ್ಲಿ ಧರ್ಮವು ಮೈಗಾಣಿಸಿದಾಗ ಕಾವ್ಯದ ತಾವರೆಗೆ ಧರ್ಮದ ಹಿಮ ಬಿದ್ದಂತಾಗುತ್ತದೆ. ಕಾವ್ಯಕ್ಕೂ ಧರ್ಮಕ್ಕೂ ಇರುವ ಈ ಎರಡು ಬಗೆಯ ಸಂಬಂಧಗಳಲ್ಲಿ ಎರಡನೆಯದನ್ನು ಮೊದಲು ಗಮನಿಸಿ ಆ ದೃಷ್ಟಿಯಿಂದ 'ಸುಕುಮಾರ ಚರಿತ್ರೆ' ಹೇಗಿದೆಯೆಂಬುದನ್ನು ನೋಡಬಹುದು.

ಸುಕುಮಾರನ ಕಥೆ ಶಾಂತಿನಾಥನ ದೃಷ್ಟಿಯಲ್ಲಿ ಒಂದು ಧರ್ಮಕಥೆ; ಅದರ ನಿರೂಪಣೆಯಲ್ಲಿ ತನ್ನ ಧರ್ಮಾನುರಾಗವನ್ನೂ ಆ ಧರ್ಮದ ತತ್ವಾಚಾರಗಳಲ್ಲಿ ತನಗಿದ್ದ ಪರಿಚಯ ಪ್ರೌಢಿಮೆಗಳನ್ನೂ ಪ್ರದರ್ಶಿಸಿದ್ದಾನೆ. ಅವನ ಈ ಕಾರ್ಯ ಮೇಲೆ ಹೇಳಿದ ಸೂಕ್ಷ್ಮವಿಧಾನದಲ್ಲಿ ನಡೆದಿರುವುದಕ್ಕಿಂತ ಮಿಗಿಲಾಗಿ ಸ್ಥೂಲವಿಧಾನವನ್ನೇ ಆಶ್ರಯಿಸಿದೆ. ಮೂಲದಲ್ಲಿಯೂ ಈ ಲಕ್ಷಣವು ಹೆಚ್ಚಾಗಿಯೋ ಕಡಮೆಯಾಗಿಯೋ ಅಲ್ಲಲ್ಲಿ ಕಾಣುತ್ತದೆ. ಅಲ್ಲಿ ಅದು ಇರುವೆಡೆಯಲ್ಲಿ ಶಾಂತಿನಾಥನು ಮತ ತತ್ವಪ್ರತಿಪಾದನೆಯನ್ನು ಮಾಡಿರುವನಲ್ಲದೆ ಇಲ್ಲದಿರುವೆಡೆಯಲ್ಲಿಯೂ ಅವಕಾಶಗಳನ್ನು ಕಲ್ಪಿಸಿಕೊಂಡಿದ್ದಾನೆ. ಇದರಿಂದ ಅವನ ಗ್ರಂಥ ಜಿನಮತಾಚಾರದ ಸಣ್ಣ ಕೈಪಿಡಿಯಾಗಿಬಿಟ್ಟಿದೆ. ಜಂಬೂದ್ವೀಪ ವರ್ಣನೆ (೩-೧೪), ಸೂರ್ಯಮಿತ್ರನಿಗೆ ಸುಧರ್ಮಮುನಿ ಮಾಡಿದ ದ್ರವ್ಯಾನುಯೋಗೋಪದೇಶ, ಸೂರ್ಯಮಿತ್ರ ತಪಶ್ಚರ್ಯೆ (ಪು೪೯-೫೯), ಅಗ್ನಿಭೂತಿ ಹೊಲೆಯರ ಕೂಸಿಗೆ ಮಾಡಿದ ಅಣುವ್ರತಾದ್ಯುಪದೇಶ (೭೭-೮೧), ಸಂಸಾರಸ್ವರೂಪ ನಿರೂಪಣೆ (೯೦-೧೦೦), ಸೂರ್ಯಮಿತ್ರಮುನಿ ಚಂದ್ರ

ವಾಹನರಾಜನಿಗೆ ಹೇಳಿದ ಜಿನತತ್ವಸ್ವರೂಪ(೧೧೭-೧೩೫), ಸೂರ್ಯಮಿತ್ರನ ತಪಸ್ಸು (೧೪೦-೧೪೨), ನಾಗಶ್ರೀಯ ತಪಶ್ಚರಣೆ (೧೪೮-೧೫೧), ಯಶೋಭದ್ರಸ್ವಾಮಿಗಳ ಚಾತುರ್ಮಾಸಯೋಗ, ತ್ರಿಲೋಕಪ್ರಜ್ಞಪ್ತಿ ಪಠನ (೨೧೮-೨೩೮), ಸುಕುಮಾರನ ದ್ವಾದಶಾನುಪ್ರೇಕ್ಷಾಸ್ಮರಣೆ (೨೪೫-೨೪೭) ಇವೇ ಮುಂತಾದ ಸಂದರ್ಭಗಳಲ್ಲಿ ಜೈನತತ್ವಪ್ರಕ್ರಿಯೆಗಳ ನಿರೂಪಣೆಯನ್ನು ಕವಿ ನೇರವಾಗಿ ಮಾಡಿದ್ದಾನೆ. ಆ ಭಾಗಗಳು ಜೈನಧರ್ಮಪರಿಭಾಷಾ ಶಬ್ದಗಳಿಂದ ಕಿಕ್ಕಿರಿದು ಶಾಸ್ತ್ರವನ್ನು ನೆನಪಿಗೆ ತರುತ್ತ ಸಾಮಾನ್ಯ ವಾಚಕರಿಗೆ ದುರವಗಾಹವಾಗಿವೆ ಜೈನಶಾಸ್ತ್ರವನ್ನು ಬಲ್ಲವರಿಗಲ್ಲದೆ ಅದರ ಅಭಿಪ್ರಾಯ ಇತರರಿಗೆ ವೇದ್ಯವಾಗದು. ಇದರಿಂದ ಕವಿತೆಗೆ ಯಾವ ಪ್ರಯೋಜನವೂ ಘಟಿಸಿಲ್ಲ. ಈ ವಿಷಯ ಸಮಗ್ರ ಗ್ರಂಥದಲ್ಲಿ ನಾಲ್ಕನೆಯ ಒಂದು ಭಾಗವನ್ನು ಆಕ್ರಮಿಸಿಕೊಂಡಿದೆ. ಒಂದು ಸಣ್ಣ ಕಥೆಯು ಪರಿಮಿತಿಯನ್ನುಳ್ಳ ಸುಕುಮಾರನ ಕಥೆ ೧೨ ಆಶ್ವಾಸಗಳನ್ನುಳ್ಳ ದೊಡ್ಡ ಗ್ರಂಥವಾಗಿ ವಿಸ್ತಾರಗೊಂಡಿರುವುದಕ್ಕೆ ಮುಖ್ಯ ಕಾರಣ ಕಥೆಯ ಜೀವದಲ್ಲಿ ಆತ್ಮೀಯತೆಯನ್ನು ಪಡೆಯದೆ ತನ್ನಷ್ಟಕ್ಕೆ ತಾನು ಹೊರವಾಗಿ ಬೆಳೆದು ನಿಂತಿರುವ ಮತಧರ್ಮ ಪ್ರತಿಪಾದನೆ. ಇದರಿಂದ ಕಥೆಯ ಸಲೀಲ ಗಮನಕ್ಕೆ ಮೇಲಿಂದ ಮೇಲೆ ಅಂತರಾಯವುಂಟಾಗಿ ಅದರಿಂದ ಅಪೇಕ್ಷಿತವಾದ ಪರಿಣಾಮ ಮನದ ಮೇಲೆ ಒಟ್ಟಿಗೆ ಮೂಡುವುದಕ್ಕೆ ಅವಕಾಶ ಕಡಮೆಯಾದಂತಾಗಿದೆ. ಈ ಭಾಗಗಳನ್ನು ಬಿಟ್ಟರೂ 'ಸುಕುಮಾರ ಚರಿತೆ'ಯ ಕಾವ್ಯಕ್ಕೆ ಯಾವ ನಷ್ಟವೂ ಆಗಲಾರದು. ಗಾತ್ರದಲ್ಲಿ ಅದು ಚಿಕ್ಕದಾಗಿ ಶಕ್ತಿಮಯವಾಗುವ ಸಂಭವವಿದೆ. ಈ ಶಾಸ್ತ್ರ ನಿರೂಪಣೆಯಿಂದ ಇತರ ಪ್ರಯೋಜನಗಳಿಲ್ಲವೆಂದಲ್ಲ; ಅದಕ್ಕೂ ರಸಜೀವಿಯಾದ ಕಾವ್ಯಕ್ಕೂ ಸಂಬಂಧವಿಲ್ಲವೆಂದಷ್ಟೇ ಇಲ್ಲಿನ ಅಭಿಪ್ರಾಯ.

ಪ್ರತಿಯೊಂದು ಧರ್ಮದಲ್ಲೂ ಸರ್ವಮಾನವ ಸಾಮಾನ್ಯವಾದ ಅಂಶಗಳು ಇದ್ದೇ ಇರುತ್ತವೆ. ಕಳ್ಳತನ, ಅಸತ್ಯ, ಪರದಾರಗಮನ, ಹಿಂಸೆ ಮುಂತಾದುವನ್ನು ಯಾವ ಮಾನವಸಮಾಜವೂ ತನ್ನ ನೀತಿಧರ್ಮವೆಂದು ಅಂಗೀಕರಿಸಿರುವಂತೆ ಕಂಡುಬಂದಿಲ್ಲ. ಆದರೆ ಆಸ್ತೇಯ, ಸತ್ಯ, ಬ್ರಹ್ಮಚರ್ಯ ಅಹಿಂಸೆಗಳು ಮಾನವಕುಲಕ್ಕೆ ಸರ್ವಕಾಲದಲ್ಲೂ ಉಪಾದೇಯವಾಗಿವೆ. ಮಾನವನಿಗೆ ಈಗಿರುವುದಕ್ಕಿಂತ ಎಷ್ಟೋ ಉತ್ಕೃಷ್ಟವಾದ ಬೇರೊಂದು ಸ್ಥಿತಿಯಿದೆಯೆಂದೂ ಅದನ್ನು ಪಡೆಯುವುದಕ್ಕಾಗಿ ಅವನು ಪ್ರಯತ್ನ ಮಾಡುವುದು ಯುಕ್ತವೆಂದೂ ಎಲ್ಲಾ ಮತ ಧರ್ಮ

ಗಳೂ ಒಕ್ಕೊರಲಾಗಿ ಹೇಳುತ್ತಿವೆ. ಎಲ್ಲರಿಗೂ ಸುಖವು ಸ್ಪೃಹಣೀಯ, ದುಃಖವು ತ್ಯಾಜ್ಯ; ದುಃಖದ ಸೋಂಕೇ ಇಲ್ಲದ ಅನಂತ ಸುಖ ಪರಮಾದರ್ಶ; ಅನಂತ ಜ್ಞಾನ ಅನಂತ ವಿರ್ಯಾದಿಗಳೂ ಹೀಗೆಯೇ. ಸೃಷ್ಟಿ ಜೀವ ಅಜೀವಗಳ ಸಂಘಾತ. ಕೆಲವರ ಪಾಲಿಗೆ ಸುಖ ಹೆಚ್ಚಾಗಿಯೂ, ಹಲವರಿಗೆ ದುಃಖ ಮಿಗಿಲಾಗಿಯೂ ಇರುವುದು ದಿನ ದಿನದ ಅನುಭವ. ಈ ವೈಪರೀತ್ಯಕ್ಕೆ ಕಾರಣ ಪುಣ್ಯ ಪಾಪರೂಪವಾದ ಕರ್ಮವೆಂದು ಕೆಲವರೂ ದೈವ, ಅದೃಷ್ಟ, ಸನ್ನಿವೇಶ ಪ್ರಭಾವ ಎಂದು ಮುಂತಾಗಿ ಮತ್ತೆ ಕೆಲವರೂ ತಮಗೆ ತೋರಿದಂತೆ ಹೇಳುತ್ತಾರೆ. ಅಂತು ಅಂಥ ಶಕ್ತಿವೊಂದಿದೆಯೆಂಬುದು ಸರ್ವಸಮ್ಮತವಾಗಿದೆ. ಸೃಷ್ಟಿಗೆ ಕರ್ತನಾದ ಈಶ್ವರನೊಬ್ಬನಿರುವನೆಂದು ಬಹು ಧರ್ಮಗಳ ನಂಬಿಕೆ. ಜೈನಧರ್ಮ ಸೃಷ್ಟಿ ಸ್ವಯಂಸಿದ್ಧವಾದುದೆಂದೂ ಅಕರ್ತೃಕವೆಂದೂ ಹೇಳಿದರೆ ಬೌದ್ಧಧರ್ಮಕ್ಕೆ ಕರ್ತಾರನ ಅಸ್ತಿತ್ವದಲ್ಲಿ ಸಂದೇಹ. ಆದರೆ ಮನುಷ್ಯನಿಗೂ ಎಲ್ಲ ಜೀವಕ್ಕೂ ಪರಮೋತ್ಕೃಷ್ಟ ದಶೆಯೊಂದಿದೆಯೆಂದೂ ಅದು ಪ್ರಯತ್ನಲಭ್ಯವಾದುದೆಂದೂ ಈ ಎರಡು ಧರ್ಮಗಳೂ ಒಪ್ಪುತ್ತವೆ. ಈಶ್ವರ, ಸೃಷ್ಟಿ, ಜೀವ—ಈ ಮೂರಕ್ಕಿರುವ ಪರಸ್ಪರ ಸಂಬಂಧದ ಭಿನ್ನಾಭಿನ್ನತೆಗಳನ್ನು ಅವಲಂಬಿಸಿ ಬೇರೆ ಬೇರೆ ಮತಧರ್ಮಗಳು ಏರ್ಪಟ್ಟಿವೆ. "ಜೀವನಿಲ್ಲ ಮೋಕ್ಷಮಿಯಿಲ್ಲ ಆನಿಲ್ಲ ಪರತ್ರೆಯಿಲ್ಲ; ಬಸಂತದೊಳ್ ಕಳಿಕೆಗರ್ಚಿದ ಕೋಗಿಲೆಯಂತೆ ಬಿಚ್ಚತಂ ನಲಿವುದು; ಕಂಡರಾರ್ ಮಱುಭವಂಗಳನ್" ಎಂದು ಹೇಳುವ ನಾಸ್ತಿಕನಿಗೆ ಕೂಡ ತನ್ನ ಜೀವಿತದ ಯಾವುದೋ ನಿಮಿಷದಲ್ಲಿ, ಮಿಗಿಲಾಗಿ ದುಃಖತಾಡನೆಯುಂಟಾದಾಗ, ತನ್ನ ನಂಬಿಕೆ ಸಡಿಲಿ ದೈವದತ್ತ ತಿರುಗಬೇಕಾದೀತು. ಜೈನ ಧರ್ಮದಲ್ಲಿರುವ ಮಾನವ ಸಾಧಾರಣವಾದ ಈ ಅಂಶಗಳು ಅನುಭವ ಗೋಚರವಾದ ಸೂಕ್ಷ್ಮರೂಪದಲ್ಲಿ 'ಸುಕುಮಾರ ಚರಿತೆ'ಯಲ್ಲಿ ಅಡಗಿ ಕಾವ್ಯಧರ್ಮದಲ್ಲಿ ಒಂದಾಗಿ ಅದರ ಪ್ರಚೋದನಶಕ್ತಿಯಾಗಿ ಪರಿಣಮಿಸಿದೆ. ಈ ಅಂಶವನ್ನು ಮುಂದೆ ವಿವರಿಸಿದೆ. ಇದು ಗ್ರಂಥವಿಸ್ತರಣಕ್ಕೆ ಕಾರಣವಾದ ವಿಷಯವಲ್ಲ.

ಇನ್ನು 'ಸುಕುಮಾರ ಚರಿತೆ'ಯ ಕಾವ್ಯಧರ್ಮದ ವಿಚಾರ. ಇದರಲ್ಲಿ ಪೂರ್ವ ಕವಿ ಪದ್ಧತಿಯಾಗಿ ಬೆಳೆದು ಬಂದಿರುವ ಸಂಪ್ರದಾಯಾಂಶವಿದೆ. ಕೃತಿಗೆ ಹದಿನೆಂಟು ಅಂಗಗಳಾದ ವರ್ಣನೀಯಾಂಶಗಳು ಅದರಲ್ಲಿ ಇಲ್ಲದೇ ಹೋದರೆ ಅದಕ್ಕೆ ಪ್ರಾಶಸ್ತ್ಯ ಬರುತ್ತಿರಲಿಲ್ಲ. ಅವಕಾಶವಿರಲಿ, ಇಲ್ಲದಿರಲಿ, ಕಾವ್ಯದಲ್ಲಿ ಉದಧಿ ಪುರಾಧಿಪ ಮುಂತಾದ ವರ್ಣನೆಗಳು ಹೇಗಾದರೂ ಬರಬೇಕೆಂಬ ರೂಢಿಗೆ ಬಹಳ ಸಂಖ್ಯೆಯ

ಕಾವ್ಯಗಳು ಒಳಪಟ್ಟಿವೆ. ಇಂಥ ವರ್ಣನೆಗಳೇ ಒಂದೊಂದು ಖಂಡ ಕಾವ್ಯದಷ್ಟು ದೀರ್ಘವಾಗಿ ಬೆಳೆದು ಒಂದು ಕೃತಿಯಲ್ಲೇ ನೈಗೊಂಡಿರುವುದಕ್ಕೆ ನಿದರ್ಶನಗಳೂ ಹೇರಳವಾಗಿವೆ. ಈ ರೂಢಿಯ ಹಿಡಿತದಿಂದ ತಪ್ಪಿಸಿಕೊಂಡು ರಚಿತವಾಗಿರುವ ಕಾವ್ಯಗಳು ಅಲ್ಪವಾಗಿರುವುದೇ ಸಂಪ್ರದಾಯದ ಪ್ರಾಬಲ್ಯವನ್ನು ತೋರಿಸುತ್ತಿದೆ. 'ಸುಕುಮಾರ ಚರಿತೆ'ಯಲ್ಲಿ ಕವಿ ಈ ರೂಢಿಗೆ ಅಷ್ಟಾಗಿ ವಶನಾಗಿಲ್ಲ. ಕಥಾ ಪ್ರಾರಂಭದಲ್ಲಿ ಸಮುದ್ರವರ್ಣನೆ ಒಂದೂವರೆ ಪಂಕ್ತಿಯಷ್ಟು ಮಾತ್ರ ಇದೆ; ಅದೂ ಗದ್ಯದಲ್ಲಿ. ಪರ್ವತ ವರ್ಣನೆಗೆ ಮೂರು ಪದ್ಯಗಳು (I ೬೫-೬೭); ವತ್ಸದೇಶದ ವರ್ಣನೆಗೆ ಹತ್ತು ಪದ್ಯಗಳು (I ೬೮-೭೭); ಕೌಶಂಬಿಪುರಕ್ಕೆ ಎರಡು (I ೭೮-೭೯); ಉಜ್ಜಯಿನಿಗೆ ಇಪ್ಪತ್ತೈದು (IX ೪೫-೬೯); ರಾಜವರ್ಣನೆಗೆ ಹನ್ನೊಂದು (I ೭೯-೮೨; IX ೭೦-೭೬); ಪರಿಣಯ ವರ್ಣನೆಗೆ ಒಂದು ದೊಡ್ಡ ರಗಳೆಯೂ (XX ೮೯) ಮತ್ತು ೧೨ ಪದ್ಯ (V ೯೦-೧೦೧)—ಹೀಗೆ ಈ ಕಾವ್ಯಾಂಗಗಳಿಗೆಲ್ಲ, ಉಜ್ಜಯಿನಿಯ ವರ್ಣನೆಯೊಂದನ್ನು ಬಿಟ್ಟರೆ, ಶಾಂತಿನಾಥನು ಅವಕಾಶವನ್ನು ಅಧಿಕವಾಗಿ ಕೊಟ್ಟಿಲ್ಲ. ಅವನ್ನು ಆದಷ್ಟು ಸಂಗ್ರಹವಾಗಿ ಉಚಿತಕ್ಕೆ ತಕ್ಕಷ್ಟನ್ನು ತಂದಿದ್ದಾನೆ. ಆಧುನಿಕ ದೃಷ್ಟಿಗೆ ಇಷ್ಟು ಕೂಡ ಅತಿಯೆಂದು ಕಾಣಬಹು ದಾದರೂ ಅದು ಅವನ ಪ್ರಮಾಣಪರಿಜ್ಞಾನವನ್ನೂ ಸ್ವತಂತ್ರಮನೋಧರ್ಮವನ್ನೂ ಪ್ರತಿಬಿಂಬಿಸುವುದಾಗಿದೆ. ಅಷ್ಟಾದಶ ವರ್ಣನೆಗಳಲ್ಲಿ ಇಷ್ಟಕ್ಕೆ ಹೊರತಾಗಿ ಬೇರೆ ಯಾವುದಕ್ಕೂ ಈ ಕಾವ್ಯದಲ್ಲಿ ಪುರಸ್ಕಾರವಿಲ್ಲದಿರುವುದು ಮೆಚ್ಚಿಕೆಗೆ ಅರ್ಹವಾದದ್ದು. ಬೇರೆ ಕೆಲವು ಕವಿಸಂಪ್ರದಾಯದ ವರ್ಣನೆಗಳು ಇಲ್ಲಿವೆ. ರಾಜನೋ ಕಥಾನಾಯ ಕನೋ ಸಪರಿವಾರನಾಗಿ ರಾಜಮಾರ್ಗದಲ್ಲಿ ಮೆರವಣಿಗೆ ಹೊರಟನೆಂದರೆ ಬೀದಿಯ ಇಕ್ಕೆಲದ ಸೌಧಗಳ ಮೇಲೆ ನಿಂತು ನೋಡುವ ನಗರ ನಾರಿಯರ ಸಂಭ್ರಮ ಸಲ್ಲಾ ಪಾದಿಗಳನ್ನು ವರ್ಣಿಸುವುದು ಒಂದು ಪದ್ಧತಿ. ಇದಕ್ಕೆ ಶಾಂತಿನಾಥನು ಒಳಗಾಗಿ ದ್ದಾನೆ. ವೃಷಭಾಂಕನೂ ಸುಕುಮಾರನೂ ಒಟ್ಟಿಗೆ ಕುಳಿತಿರುವ ದೃಶ್ಯವನ್ನು ನೋಡಲು ನಾರಿಯರು ಆತ್ಮೀಯಭವನ ಚಿಂತೆಗಳನ್ನು ಮರೆತು ಸುಕುಮಾರನ ಮನೆಯ ಮುಂದಣ ಗೋಪುರಾದಿಗಳ ಮೇಲಿದ್ದು ತಮ್ಮ ತಮ್ಮಲ್ಲಿಯೇ ಮಾತನಾಡಿ ಕೊಂಡರಂತೆ; ಇದಕ್ಕೆ ೧೫ ಪದ್ಯಗಳು (XI ೮-೨೩), ವೃಷಭಾಂಕನಿಗೆ ಆರೋಗಣೆ ಮಾಡಿಸಿದ್ದರ ವರ್ಣನೆಗೆ ೧೦ ಪದ್ಯ (XI ೨೩-೩೨), ಯಶೋಭದ್ರೆಯ ಸೌಂದರ್ಯ, ಆಕೆಗೆ ಮಕ್ಕಳಿಲ್ಲದ ನೋವು, ಗರ್ಭ ವಿಭ್ರಮ, ಸುಕುಮಾರನ ಜನ್ಮ, ಬಾಲಲೀಲೆ

ಗಳು—ಇವೆಲ್ಲ ಕೊಂಚ ವಿಸ್ತಾರವಾಗಿಯೇ ನಿರೂಪಿತವಾಗಿವೆ (IX ೮೬ ; X ೪೧). ಈ ಎಲ್ಲ ವರ್ಣನೆಗಳಲ್ಲೂ ಕವಿಸಮಯಸಂಪ್ರದಾಯಗಳ ಪ್ರಾಚುರ್ಯವೂ ನವೀನತೆ ಸ್ವಾನುಭವಗಳ ವಿರಳತೆಯೂ ಇದ್ದು ಕಾವ್ಯ ಸೌಂದರ್ಯಕ್ಕೆ ಉತ್ಕರ್ಷತೆಯುಂಟಾಗಿಲ್ಲ, ಗ್ರಂಥದ ಗಾತ್ರಕ್ಕೆ ಮಾತ್ರ ಪುಷ್ಟಿ ಬಂದಿದೆ. ಇದಕ್ಕೆಲ್ಲ ಗ್ರಂಥದಲ್ಲಿ ಕಾಲುಭಾಗದಷ್ಟು ಸ್ಥಾನಕೊಟ್ಟರೆ ಒಟ್ಟಿನಲ್ಲಿ ಮುಖ್ಯ ಕಥೆಗೆ ಗ್ರಂಥದ ಅರ್ಧದಷ್ಟೂ ಅದಕ್ಕಿಂತ ಕೊಂಚ ಹೆಚ್ಚಾಗಿಯೇ ಸ್ಥಾನ ಸಂದಿರುವುದು ಕಾಣುತ್ತದೆ. ಇದರಿಂದ ಶಾಂತಿನಾಥನಿಗೆ ಕಥೆ ಹೇಳಬೇಕೆಂಬ ಕುತೂಹಲವು ಪ್ರಧಾನವಾಗಿಯೂ ವರ್ಣನೆ ಗೌಣವಾಗಿಯೂ ಇರಬೇಕೆಂಬ ದೃಷ್ಟಿ ಇದ್ದಂತೆ ನಿರ್ಣಯಿಸಬಹುದು. ಈ ಕಥಾನಿರೂಪಣೆಯಲ್ಲಿ ಎಷ್ಟರಮಟ್ಟಿಗೆ ಕವಿಯ ಸಹಜಶಕ್ತಿ ಪ್ರಕಟವಾಗಿದೆಯೆಂಬುದನ್ನೂ ಉತ್ಕೃಷ್ಟ ಕಾವ್ಯಧರ್ಮ ಅಲ್ಲಿ ಹೇಗೆ ಬಂದಿದೆಯೆಂಬುದನ್ನೂ ಪರಿಶೀಲಿಸಬಹುದು.

ಸುಕುಮಾರನ ಕಥೆ ಒಂದು ವ್ಯಕ್ತಿಯ ಕಥೆಯಲ್ಲ, ಒಂದು ಜೀವದ ಕಥೆ; ಒಂದು ಜನ್ಮದ ಕಥೆಯಲ್ಲ, ಜನ್ಮಾಂತರಗಳ ಕಥೆ. ಜನ್ಮಗಳಿಗೆ ಕಾರಣ ಪುಣ್ಯ ಪಾಪರೂಪವಾಥ ಕರ್ಮ ಪರಂಪರೆ. ಪುಣ್ಯಾಧಿಕ್ಯದಿಂದ ಮರ್ತ್ಯನಾಕಗಳ ಭೋಗಭಾಗ್ಯಗಳ ಲಾಭ, ಪಾಪಾಧಿಕ್ಯದಿಂದ ತಿರ್ಯಕ್ ನರಕಗತಿಗಳ ದುಃಖಾನುಭವ. ಎರಡರ ಪೂರ್ಣ ವಿನಾಶವಾಗಿ ಜನ್ಮ ಜನ್ಮಗಳ ಸಂಸಾರದಿಂದ ಜೀವನಿಗೆ ಬಿಡುಗಡೆ. ಇದೇ ಮೋಕ್ಷ, ಪರಮೋತ್ಕೃಷ್ಟ ದಶೆ. ಇಷ್ಟನ್ನು, ಮಾನವ ಸಾಧಾರಣವಾದ ಈ ಭಾವಗಳನ್ನು, ವಿಮರ್ಶಕ ಹೃದಯ ತತ್ಕಾಲಿಕವಾಗಿ ಒಪ್ಪಿಕೊಂಡಾಗ, ಒಂದು ಜೀವ ತನ್ನ ಪರಮೋತ್ಕೃಷ್ಟ ಪದವಿಯ ಕಡೆಗೆ ಕೈಕೊಂಡಿರುವ ಯಾತ್ರೆಯ ಕಥೆಯೇ 'ಸುಕುಮಾರ ಚರಿತೆ' ಎಂಬುದು ಗೋಚರವಾಗುತ್ತದೆ. ನರಕಜೀವದಿಂದ ಹಿಡಿದು ಸಿದ್ಧಜೀವದವರೆಗಿನ ಜೀವವ್ಯಾಪಾರವೆಲ್ಲ ಅಖಂಡವಾಗಿ ಆವನ ಮನದಲ್ಲಿ ಉದ್ಬುದ್ಧವಾಗಿ ಕಾಲದೇಶಗಳ ಪರಿಮಿತಿಯನ್ನು ಕಳೆದುಕೊಂಡು ಭವ್ಯಾನುಭವವನ್ನೂ, ವಿಶಾಲ ದೃಷ್ಟಿಯನ್ನೂ ಅವನಲ್ಲಿ ಮೂಡಿಸುವಂಥದಾಗುತ್ತದೆ. ಒಲಿಯಲು ಹಿಂತೆಗೆಯುವ ವಿಮರ್ಶಕನನ್ನು ಅವನಿಗೇ ಅರಿವಿಲ್ಲದೆ ಒಲಿಸುವ ಮೋಡಿಯೇ ಕವಿಶಕ್ತಿ, ಕೌಶಲ್ಯ ; ಒಲಿಸಿದನಂತರ ಅವನಿಗೆ ಕಾಣಿಸುವ ದಿವ್ಯದರ್ಶನವೇ ಅವನ ಕೃತಿ. ಈ ದೃಷ್ಟಿಯಿಂದ ನೋಡಿದರೆ 'ಸುಕುಮಾರ ಚರಿತೆ'ಯ ಕಥಾರಚನೆ ಅರ್ಥವಾಗುತ್ತದೆ; ಅದರ ಒಂದು ಅಂಶ ಇನ್ನೊಂದರೊಡನೆ ಹೇಗೆ ಅನುಬದ್ಧವಾಗಿದೆಯೆಂಬುದು ತಿಳಿಯುತ್ತದೆ. ಜೀವದ ಪುಣ್ಯಪಾಪದ ಸಮಾನತೆ ಸಾಮಾನ್ಯಮಾನವ

ಭವಕ್ಕೆ ಕಾರಣ. ಒಂದು ಜೀವ ಇಂಥ ವಾಯುಭೂತಿಯೆಂಬ ಜನ್ಮಧಾರಣೆ ಮಾಡಿದ್ದು, ಕೃತಘ್ನತೆ ಗರ್ವಕ್ರೋಧಗಳ ಉದ್ರೇಕದಿಂದ ಮಾವ ಅಣ್ಣ ಅತ್ತಿಗೆಯರನ್ನು ಧಿಕ್ಕರಿಸಿ, ನಿಂದಿಸಿ, ಹಿಂಸಿಸಿ, ಅತಿದಾರುಣ ಪಾಪಕರ್ಮವನ್ನು ಕಟ್ಟಿಕೊಂಡು ಕತ್ತೆಯಾಗಿ ಹಂದಿಯಾಗಿ ನಾಯಾಗಿ ಒಂದೊಂದು ಹುಟ್ಟಿನಲ್ಲೂ ಪಡಬಾರದ ದುಃಖವನ್ನುಂಡು ಪಾಪೋಪಶಮನದಿಂದ ಹುಟ್ಟು ಕುರುಡಿ ಹೊಲೆಯರ ಕೂಸಾಗಿ ಹುಟ್ಟಿ, ಅಣ್ಣಜೀವದ ಕರುಣೆಗೆ ಪಾತ್ರವಾಗಿ, ಧರ್ಮದಲ್ಲಿ ನೆಗಳಿ, ಅದರ ಪುಣ್ಯಫಲದಿಂದ ದ್ವಿಜವಂಶದ ನಾಗಶ್ರೀಜನ್ಮಕ್ಕೆ ಬಂದು, ಭವಾಂತರದ ಮಾವ ಸೂರ್ಯಮಿತ್ರಜೀವದ ಉಪದೇಶದಿಂದ ಅಣುವ್ರತಧಾರಿಯಾದ ಅಧಿಕ ಪುಣ್ಯದಿಂದ ಸ್ವರ್ಗಜೀವಿಯಾಗಿ, ಸುಖವನ್ನು ಸವಿದು, ಕೊನೆಗೆ ಆಗರ್ಭಸುಖಿಯಾದ ಸುಕುಮಾರ ಮಾನವ ಜನ್ಮವನ್ನು ಧರಿಸಿ, ವಿರಕ್ತಿ ಮೂಡಿ, ತಪಸ್ಸಿಗೆ ಸಂದು, ಮೋಕ್ಷದ ನೆರೆಮನೆಯಾದ ಸರ್ವಾರ್ಥಸಿದ್ಧಿ ಸ್ವರ್ಗಕ್ಕೆ ಹೋಯಿತೆಂಬುದು ಕಥಾರಚನೆಯ ಸ್ಥೂಲಚಿತ್ರ. ಈ ಜೀವದ ಚರಿತ್ರೆಯಲ್ಲಿ ಒಂದು ಗತಿಯಿಂದ ಇನ್ನೊಂದು ಉತ್ತಮ ಗತಿಗೆ ಅದನ್ನು ಉದ್ಧರಿಸುವ ಪಾತ್ರಗಳಾಗಿ ಅಗ್ನಿಭೂತಿ ಸೂರ್ಯಮಿತ್ರ ಜೀವಗಳು ಪ್ರಮುಖವಾಗಿಯೂ, ಕೊನೆಯಲ್ಲಿ ಯಶೋಭದ್ರನದು ಪ್ರಾಸಂಗಿಕವಾಗಿಯೂ ನಿಯೋಜಿತವಾಗಿರುವುದು ಚಮತ್ಕಾರ ವ್ಯಂಜಕವಾಗಿದೆ. ಉಳಿದ ಪಾತ್ರಗಳಲ್ಲಿ ಕಥೆಯ ಕ್ರಿಯೆಯ ದೃಷ್ಟಿಯಿಂದ ಯಶೋಭದ್ರೆ ಸೋಮದತ್ತೆಯರು ಗಮನಾರ್ಹರು; ಒಬ್ಬಳು ಬಯಸಿ ಬಯಸಿ ಸುಕುಮಾರನನ್ನು ಪಡೆದ ತಾಯಿ; ಇನ್ನೊಬ್ಬಳು ದ್ವೇಷಿಸಿ ದ್ವೇಷಿಸಿ ಅವನ ಮೈಯನ್ನು ತಿಂದು ಕೊಂದ ಮಾರಿ; ಎರಡೂ ಜೀವಗಳೇ ಆದರೂ ಒಂದು ಪುಣ್ಯಭಾಗಿ, ಇನ್ನೊಂದು ಪಾಪಭೋಗಿ. ವಿರುದ್ಧಸ್ವಭಾವದ ಇವೆರಡರಲ್ಲಿ ಶುಭಾಶುಭದ ಸಮತೂಕದ ರಚನೆಯಿದೆ. ಅತಿಬಳ ಸುಬಲ ವೃಷಭಾಂಕರ ಪಾತ್ರಗಳು ಕಥೆಗೆ ಹಿನ್ನೆಲೆಯನ್ನೂ ಪ್ರದೇಶ ಸೌಷ್ಠವವನ್ನೂ ಉಂಟುಮಾಡಿವೆ. ಮಿಕ್ಕ ಪಾತ್ರಗಳಲ್ಲಿ ಸುಧರ್ಮಾಚಾರ್ಯರದು ಸೂರ್ಯಮಿತ್ರಜೀವದ ಪರಮ ಶ್ರೇಯಸ್ಸಿಗೆ ಮಾರ್ಗ ತೋರಿಸಿದೆ. ಇವನ್ನೆಲ್ಲಾ ಪರಿಭಾವಿಸಿದರೆ ಕಥೆಯ ರಚನೆಯಲ್ಲಿ ಕವಿಗೆ ನಿಷ್ಕೃಷ್ಟವಾದ ಉದ್ದೇಶವಿದೆಯೆಂದೂ ಅದರ ಮೈಯಲ್ಲಿ ಬೇಳೇಳುಗಳ ಆರೋಹಣಕ್ರಮದ ಸುರೇಖೆಯಿದೆಯೆಂದೂ ಜಿನಧರ್ಮಸಾರ ಜೀವಜಾಲಕ್ಕೆಲ್ಲ ಅನ್ವಯಿಸುವ ವಿಶಾಲತೆಯನ್ನು ಪಡೆದು ಸೂಕ್ಷ್ಮ ರೂಪದಲ್ಲಿ ಕಾವ್ಯಾಂತರ್ಗತ ವಾಹಿನಿಯಾಗಿದೆಯೆಂದೂ ಮನವರಿಕೆಯಾಗುತ್ತದೆ.

ಅಗ್ನಿಭೂತಿ ವಾಯುಭೂತಿಗಳು ಒಂದೇ ತೊಟ್ಟಿನ ಎರಡು ಹಣ್ಣುಗಳಾಗಿದ್ದರೂ ಅವರವರ ಕರ್ಮ ಕಾರಣವಾಗಿ ಒಬ್ಬನು ಸಿಹಿ, ಇನ್ನೊಬ್ಬನು ಕಹಿ. ಕಸುಗಾಯಿಗಳಾಗಿದ್ದಾಗ ಇಬ್ಬರದೂ ಒಂದೇ ಸ್ವಭಾವವೆಂಬಂತೆ ತೋರುತ್ತಿತ್ತು. ಬಾಲ್ಯದಿಂದ ಹಿಡಿದು ಇಬ್ಬರೂ ಚಪಲರು, ದೋಷಗ್ರಾಹಿಗಳು, ನಿರ್ಗುಣರು, ನಿಸ್ತ್ರಿಂಶರು, ಎರಡು ನಾಲಗೆಯವರು, ಜಡಮತಿಗಳು, ವಿಷಯಾಸಕ್ತರು, ತಂದೆ ತಾಯಿಗಳ ಮಾತುಗಳನ್ನು ಕೇಳದೆ ಜೂಜಿನಲ್ಲಿಯೂ, ಕೋಳಿ ಟಗರು ಕಾಳಗದಲ್ಲಿಯೂ, ಬಟ್ಟಾಟ ಚೆಂಡಾಟಗಳಲ್ಲಿಯೂ ಕಲಹದಲ್ಲೂ ಕಾಲವನ್ನು ಕಳೆದು, ನಗರದಲ್ಲಿ ಎಲ್ಲಿ ನೋಡಿದರೂ ಅವರದೇ ಆಟವಾಗಿ "ತಂದೆ ಕಡಂಗಿ ಕಲ್ಪಿಸುವ ಕಲ್ಪಿಯನೊಲ್ಲದೆ, ತಾಯ್ ಮಗುಳ್ದು ನಿರ್ಬಂದದಿನೆಯ್ದೆ ಬಗ್ಗಿಸುವ ಬಗ್ಗಣೆಗಳ್ಕದೆ ಮಿತ್ರವರ್ಗಮೇನೆಂದೊಡಮೆಂದುದಂ ನೆಗಟಿದೆ" ಉದ್ಧತತನದಿಂದ ಉದ್ವೃತ್ತರಾಗಿ ಕೆಟ್ಟುಹೋದರು. ಅವರ ತಂದೆ.

ಸಿರಿಯು ತವಿಲಿಂ ಮಕ್ಕಳ್ ಕೈಮಿಕ್ಕು ಪೇೞ್ದುದು ಗೆಯ್ಯದಿ |
ರ್ಪಿರವನವನೀದೇವಾಮ್ನಾಯಕ್ಕೆ ನೊಚ್ಚಿದನಾಗಿ ಮೆ |
ಯ್ಗುರಿವೆಸಕದಿಂ ನಿಚ್ಚಂ ಬೆಂಬಿರ್ದು ಚಿಂತಿಸಿ ದುಃಖದೊಳ್ |
ಪಿರಿದುಮುಮರಿ ಕಣ್ಗೆಟ್ಟಂ ಭಟ್ಟಂ ನಿಕೃಷ್ಟರ ದೂಸಱಿಂ ||

ಈ ದುಃಖವನ್ನು ತಾಳಲಾರದೆ ತಂದೆ ಸಾಯಲು ಅವನಿಗೆ ದೊರೆಯಲ್ಲಿದ್ದ ಮಂತ್ರಿಪದವಿ ಅವರ ಕೈ ತಪ್ಪಿ ಹೋಗಿ ಎಲ್ಲರೆದುರಿಗೂ ಅವಮಾನವಾದಮೇಲೆ ಅವರಿಬ್ಬರಿಗೂ ಬುದ್ಧಿ ಬಂದು ಇನ್ನುಮೇಲಾದರೂ ವಿದ್ಯೆ ಕಲಿಯಬೇಕೆಂದು ತಾಯಿಯ ಮಾತಿನಂತೆ ಮಾವನಾದ ಸೂರ್ಯಮಿತ್ರನ ಬಳಿಗೆ ಓದಲು ಹೋಗುವರು. ಅವನು ಅವರಿಗೆ ಸಲಿಗೆಯನ್ನು ಕೊಡದೆ ಮಾವನಲ್ಲವೆಂಬಂತೆ ನಟಿಸುತ್ತ ಅವರು ಭಿಕ್ಷೆ ಬೇಡಿ ತಂದ ಅನ್ನಕ್ಕೆ ಉಪ್ಪನ್ನಾದರೂ ಹಾಕದೆ ನಿರ್ಬಂಧದಿಂದ ಅವರಿಗೆ ಪಾಠ ಹೇಳಿ ಪಂಡಿತರನ್ನಾಗಿ ಮಾಡಿದನು. ಹಿರಿಯ ಅಗ್ನಿಭೂತಿ ನಿಸರ್ಗ ಋಜುಮಾರ್ಗದಿಂದ ವಿನಯಶಾಲಿಯಾದನು; ತಮ್ಮ ವಾಯುಭೂತಿ ಸ್ವಭಾವ ವಕ್ರತೆಯಿಂದ ಉನ್ಮಾರ್ಗಿಯಾದನು. ಮಾವನೆದುರಿಗೆ ಕೈಮುಗಿದುಕೊಂಡು ಇಬ್ಬರೂ ನಿಂತಾಗ ಅಗ್ನಿಭೂತಿ

ನಿಮ್ಮ ದಯೆಯಿಂದಮನುಪಮ |
ಸಮ್ಮತಮುಂ ಹಿತಮನಖಿಳ ಶಾಸ್ತ್ರಾಗಮಮುಂ |
ನಿಮ್ಮಿಂದಮಱಿಪೆವದಱಿಂ |
ನಿಮ್ಮುಪಕಾರಮನದೇತಱಿಂ ನೀಗುವೆವೋ ||

ದೇಸಿಗರ್ಕಳನಖಿಲ್ಯರನೆಮ್ಮನೊಱಲ್ದು ವಿ।
ದ್ಯಾ ಸಭಾನಿರತರಾಗಿಸಿದಿರ್ ನಿಮಗಂ ಸಮಂ॥
ತೀ ಸುವೇದಿಗಮುದಾತ್ತತೆಯಿಂದಮೆ ಗಡ್ಡಮುಂ।
ಮಿಾಸೆಯುಂ ಬೆರಸು ಪುಟ್ಟಿದವೆಂದವಧಾರಿಸಿಂ॥

ಎಂದು ಅತ್ತೆಯನ್ನೂ ನೆನೆದುಕೊಂಡು ಭಕ್ತಿ ವಿನಯ ನಮ್ರತೆಗಳಿಂದ ಬಿನ್ನವಿಸಿಕೊಂಡಾಗ ವಾಯುಭೂತಿ ಏಕೋ ಮೌನದಿಂದಿದ್ದನು. ಮಾವ ಅವರನ್ನು ಊರಿಗೆ ಕಳುಹಿಸಿಕೊಡುವಾಗ ಇಬ್ಬರಿಗೂ ಎಣ್ಣೆಮಜ್ಜನ ಮಾಡಿಸಿ ಉಡಲು ತೊಡಲು ಕೊಟ್ಟು ಔತಣ ಮಾಡಿ ಸ್ವಲ್ಪ ದೂರ ಅವರನ್ನು ಕಳುಹಿಸುವುದಕ್ಕೆ ಸಂಗಡ ಬಂದವನು

ಅನ್ನಿಮಗೆ ಮಾವನೆಂ ನೀ
ಮೆನ್ನನುಜೆಯ ತನುಜರಪ್ಪಿರಿದು ನಿಶ್ಚಯಮಾಂ।
ಮುನ್ನ ಮೊಸೆದೆನ್ನನಱಪಿದೊ।
ಡೆನ್ನನಣಂ ಬಗೆಯಿರೆಂಬ ಬಗೆಯನೆ ಬಗೆದೆಂ॥
ಕಿಱಿಯಂದು ತಂದೆ ಬಗ್ಗಿಸ
ಲಱಿಯನೆತಾಯ್ನುಡಿದು ತಿಳಿಪಲಱಿಯಳ್ ವಿಷಯ
ಕ್ಕೆಱಗಿದರಂ ತಲೆಗೇಱಿಸೆ
ಕೊಱಚಾಡುವರೆಂದುಪಾಯದಿಂದೋದಿಸಿದೆಂ॥

ಎಂದು ತಾನಾರೆಂಬುದನ್ನೂ ತಾನು ಏಕೆ ಅವರಿಗೆ ಸಲಿಗೆ ಕೊಡಲಿಲ್ಲವೆಂಬುದನ್ನೂ ತಿಳಿಸಿ ತನ್ನಿಂದ ಅವರಿಗಾದ ಕಷ್ಟಕ್ಕಾಗಿ ನೊಂದು ನಂಟತನವನ್ನು ಮರೆಯದಿರಬೇಕೆಂದು ಹೇಳಿ ಹಿಂತಿರುಗಿದನು. ಅವನೇ ಸೋದರಮಾವನೆಂಬ ನಿಜಸ್ಥಿತಿ ತಿಳಿದು ವಾಯುಭೂತಿಯ ಮೌನದ ಕಟ್ಟೆಯೊಡೆದು ಮನದ ಮುಸುಕ ಹೊನಲಿಟ್ಟಿತು:

ಅಗಣಿತಪುಣ್ಯನಪ್ಪೆಯೊಡವುಟ್ಟಿದ ಮಾವನಶೇಷ ಶಾಸ್ತ್ರಪಾ
ರಗನತಿಧನ್ಯನೆಂದು ಪರಿಭಾವಿಸಿ ಬಂದೊಡವಜ್ಞೆಗೆಯ್ದು ನಾ।
ಯ್ವುಗದೆಡೆಯೆಲ್ಲಮುಂ ಪುಗಿಸಿ ಬೈಕದ ಭಾಜನಮಾಗೆ ಮಾಡಿ ತೊ
ಟ್ಟಗೆ ವಿಭುಸಾಯೆ ಪೊಯ್ದು ಕಿವಿಯಂ ಪಿಡಿದೂಡಲೊಡರ್ಚಿ ಬಂದನೇ॥

ತಾಂ ಗಡ ನಮಗೀಗಳ್ ಮಾ
ವಂ ಗಡ ನಾಮುಂ ಗಡೀಗಳಳಿಯಂದಿರೆವಿ।
ನ್ನುಂ ಗಡ ನಮಗಂ ತಮಗಂ
ಸಂಗತಸಂಬಂಧ ಬಂಧುರಂ ಬಂಧುತನಂ॥

ಪಸಿದಿರ್ ನೀರಡಿಸಿದಿರೆಂ
ದು ಸೇದೆಯಂ ಶ್ರಮಮನಱಿವುದೆನಸುಂ ಗೆಂಟಾ ।
ಬಿಸಿಲೊಳ್ ನಿಂದೊಡೆ ನೆಳಲ
ತ್ತ ಸಾರಿಮೆಂದೆಂದುಮಱಿವನಲ್ಲಂ ನಮ್ಮಂ॥

ಅಗ್ನಿಭೂತಿ ಈ ಮಾತನ್ನು ಕೇಳಿ ದುಃಖಪಟ್ಟು

ಮತಿಗೆಟ್ಟು ಬಾಯ್ಗೆವಂದಂ
ತೆ ತಿರಸ್ಕರಿಸುವುದು ಪುರುಷಕಾರಮೆ ಗುರುವಂ
ಶ್ರುತಹೀನರಂತೆ ಕೆಮ್ಮನೆ
ಕೃತಘ್ನರಾದಂದು ನಮಗಿಹಂ ಪರಮುಂಟೇ

ಎಂದು ಸಮಾಧಾನಮಾಡಲು ಪ್ರಯತ್ನಿಸಿದರೂ ವಾಯುಭೂತಿ ಮತ್ತೆ ಮಾವನನ್ನು ದುರಾತ್ಮನೆಂದು ತೆಗಳಿ ಸಾವಿರ ಬ್ರಾಹ್ಮಣರಿಗೆ ಪುಣ್ಯದಿನಗಳಲ್ಲಿ ಸಂತರ್ಪಣೆ ನಡಸುವ ಮಾವ ನಮಗೊಂದು ತುತ್ತು ಅನ್ನವನ್ನಾಗಲಿ ಹನಿಯಷ್ಟು ಎಣ್ಣೆಯನ್ನಾಗಲಿ ಹಾಕಿದ್ದೇ ಇಲ್ಲ.

ತನಗಿಕ್ಕುವೆೞಿತಿವ ಕರುಣಂ
ಮನದೊಳಮಿನಿತಿಲ್ಲ ಪಾಪಕರ್ಮನವಂ ಮಾ।
ವನೆ ನಮ್ಮ ಕರಕೆಯೊಳ್ ಕ
ಲ್ಲನಿಕ್ಕುವಂ ನಿಕ್ಕುವಂ ಪ್ರಭಾಕರಮಿತ್ರಂ ॥

ಎಂದು ಪರುಷತರ ವಚನಗಳನ್ನು ನುಡಿದನು. ಈ ಪಾಪಿಗೆ ಏನು ಹೇಳಿದರೂ ಪ್ರಯೋಜನವಿಲ್ಲವೆಂದು ಅಗ್ನಿಭೂತಿ ಅದನ್ನು ಅಲ್ಲಿಗೇ ಬಿಟ್ಟು ಇನ್ನೇನೋ ಮಾತುಗಳನ್ನಾಡುತ್ತ ಇಬ್ಬರೂ ಊರಿಗೆ ಬಂದು ತಾಯನ್ನು ಕಂಡು ಅವಳಿಗೆ ಸಂತೋಷವನ್ನು ಮಾಡಿ ತಮ್ಮ ಪಾಂಡಿತ್ಯದಿಂದ ದೊರೆಯನ್ನು ಮೆಚ್ಚಿಸಿ ಮುನ್ನಿನ ಪದವಿಯನ್ನು ಪಡೆದು ಸುಖವಾಗಿದ್ದರು.

ಇಲ್ಲಿಂದ ಮುಂದಕ್ಕೆ ಇವರಿಬ್ಬರ ಬಾಳ್ವೆಗಳು ಕವಲೊಡೆಯುತ್ತವೆ. ಕಾಲವಶದಿಂದ ಜಿನಮುನಿಯಾದ ಸೂರ್ಯಮಿತ್ರನ ಆಗಮನ ಈ ಕವಲಿಗೆ ದಿಕ್ಕನ್ನು ಕಲ್ಪಿಸುತ್ತದೆ. ಬಂದ ಮಾವಮುನಿಗೆ ಅಗ್ನಿಭೂತಿ ಸತ್ಕರಿಸಿ, ಆಹಾರ ದಾನಮಾಡಿ ತಮ್ಮನ ಮನೆಗೆ ಅವನನ್ನು ಕರೆತಂದರೆ ಆ ತಮ್ಮ ಹಿಂದಿನ ಕ್ರೋಧ ಕೆರಳಿ ಬಾಯಿಗೆ ಬಂದಂತೆ ಅವರಿಬ್ಬರನ್ನೂ ನಿಂದಿಸಿದನು. ಇದರಿಂದ ಅಣ್ಣನ ಬಾಳ್ವೆ

ಊರ್ಧ್ವಮುಖಿಯಾಯಿತು; ತಮ್ಮನದು ಅಧೋಮುಖಿಯಾಯಿತು. ಅಣ್ಣ ವಿರಕ್ತನಾಗಿ ಸೂರ್ಯಮಿತ್ರನಿಂದ ಜಿನದೀಕ್ಷೆ ವಹಿಸಿ ತಪಸ್ವಿಯಾದನು; ತಮ್ಮ ಪಾಪ ಜೀವಿಯಾಗಿ ಅಣ್ಣನ ಆಸ್ತಿಯನ್ನು ಕಸಿದುಕೊಂಡು ಅತ್ತಿಗೆಯನ್ನು ತಿರಸ್ಕರಿಸಿ ಮನೆಯಿಂದ ಹೊರಕ್ಕೆ ತಳ್ಳಿಬಿಟ್ಟನು. ಏಳು ದಿವಸಗಳಲ್ಲಿ ಕುಷ್ಠರೋಗ ಅವನನ್ನು ತಿನ್ನಲು ತೊಡಗಿತು; ಕೈಕಾಲುಗಳೂ ಮುಖವೂ ಗುರುತು ಸಿಕ್ಕದಂತಾದುವು. ಅವನ ದುಃಖ ಉಕ್ಕಿತು. ಅರಮನೆಗೆ ಹೋಗೋಣವೆಂದರೆ ಅಲ್ಲಿಗೆ ಪ್ರವೇಶವಿಲ್ಲ; ಜೊತೆಯಲ್ಲಿ ಬಾಳಿದ ಹೆಂಡತಿ ಹತ್ತಿರ ಸೇರಿಸಲಿಲ್ಲ. ಮಿತ್ರರು ಮುಖ ತಿರುಗಿಸಿದರು. ಈ ಅವಸ್ಥೆಯಲ್ಲಿ ಅವನು ಸತ್ತು ದೊಂಬನ ಮನೆಯ ಕತ್ತೆಯಾದ. ಅಲ್ಲಿಯೂ ದುಃಖದ ಹೊರೆ ಹೆಚ್ಚಾಯಿತು :

ಜನಪದವೆನಿತೊಳವನಿತಱೊ |
ಳೆನಿತೂರೊಳವನಿತುಮಂ ಪಲಮೆರ್ಱಯುಮುದು ತಿ ।
ಟ್ಟನೆ ತಿರಿದು ಮಾಯ್ದು ಡೊಂ ।
ಬನ ಮನೆಯೊಳ್ ಮಲುಮಲನೆ ಮಱುಗಿ ನಮೆಯುತ್ತಿರ್ಕುಂ
ಬಡಿವ ಬಡಿಗೆಗಳ ಕೋಳೋಳ್ ।
ತೊಡೆಯುದು ಸಲೆಪೊಟ್ಟಗೊಡೆದು ಕಡಿವಡೆದೆತ್ತಂ ‖
ಪುಡಪುಡನೆ ಪುರ್ಗಿ ಜೋಲ್ದೆ ।
ಲ್ವಡಗಾಗಿ ಸುರುಳ್ದುಸುರುಳ್ದು ಬಾಯ್ವಿಟ್ಟಿರ್ಕುಂ ‖

ಈ ತೆರದ ಹಲವು ಯಾತನೆ ಸಹಿಸಿ ಹುಳಿತು ಸತ್ತು ಆ ಜೀವ ಹಂದಿಯಾಗಿ ಹುಟ್ಟಿತು. ಆಗ ಅದು ಪಟ್ಟ ಹಿಂಸೆ " ಅಗರ್ಣಮಸೇವ್ಯವರ್ಣನಂ ". ಜೀವಸಹಿತವಾಗಿಯೇ ದಳ್ಳುರಿಯ ಮೇಲೆ ಅದು ಬಾಡಿ ಮೆಲ್ಲಮೆಲ್ಲಗೆ ಸಾಯಬೇಕಾಯಿತು. ಸತ್ತು ಆ ಜೀವ ನಾಯಿ ಜನ್ಮಕ್ಕೆ ಬಂತು. ಆಗಲೂ ಅದಕ್ಕೆ ದುಃಖ ತಪ್ಪಲಿಲ್ಲ. ಹುಚ್ಚು ಹಿಡಿದು ಸತ್ತು ಹೊಲೆಯರ ಮನೆಯಲ್ಲಿ ಹೆಂಗೂಸಾಗಿ ಹುಟ್ಟಿತು, ಆ ಜೀವ. ಹುಟ್ಟು ಕುರುಡಿಯಾದ ಅವಳು

ತಲೆರೋಮಂ ಜಡೆಗಟ್ಟೆ ಪೇನಿೞಿದು ಬಾಯೊಳ್ ತೀವೆ, ಮೆಯ್ ಬಾತ ಬಾ
ವಲನಾತಕ್ಕೈಣೆಯಾಗಿ ನಾಱಿ, ಪಲರುಂ ಚೀಯೆಂಬಿನಂ ಸೂಸಿದೆಂ
ಜಲವುೞ್ಗಳನಾವಗಂ ಬೆದಕಿನಿಂದಾ ಬಟ್ಟೆಯೊಳ್ ಬಟ್ಟನೇ
ೞಿಲ ಚೆಂಗಾರೆಯ ಮೆಲ್ದು ಗುಳ್ದು ಸಹಕಾರೋಚ್ಛಿಷ್ಟಪಕ್ವಂಗಳಂ ‖

ತಡವರಿಸಿ ಆಯ್ದಾಯ್ದು ತಿನ್ನುತ್ತ ನಡುಬೀದಿಯಲ್ಲಿದ್ದು ಓಡಾಡುವ ಜನರ ಕೋಲೇಟಗೆ ಮೈ ಸೀಳಿ ರಕ್ತ ಸುರಿದು ಕರೆಗಟ್ಟಿರಲು

ಮಿಾಂಬೊಲಸು ನಾರ್ಪ ಮೆಯ್ಗವು
ಳುಂಬಂ ತೂಂಬುರ್ಚಿದಂತೆ ಸುರಿವರುಣಜಳ ।
ಕ್ಕಂ ಬಿಡದೆ ಕಾಗೆಯುಂ ಪ
ರ್ದುಂ ಬಳಸುವುವೆಂದೊಡಿಂತು ಕಿಸುಗುಳಿಯೊಳರೇ ॥

ಹೀಗೆ ಎಲ್ಲರಿಗೂ ಜುಗುಪ್ಸೆಯನ್ನುಂಟುಮಾಡಿ ದುಃಖದಲ್ಲಿ ಸಿಕ್ಕಿ ನವೆಯುತ್ತಿರಲು, ಆ ದಾರಿಯಲ್ಲಿ ಬರುತ್ತಿದ್ದ ಅಗ್ನಿಭೂತಿಮುನಿ ಆ ಕೂಸನ್ನು ಕಂಡು ಕರುಣಿಸಿ ಭವಾಂತರದ ಪ್ರೀತಿ ತಲೆದೋರಲು, ಗುರುವಿನನುಮತಿಯಿಂದ ಆ ಕೂಸಿಗೆ ಹಿತೋಪದೇಶಮಾಡಿ, ಅಣುವ್ರತವನ್ನು ಕೊಟ್ಟನು. ಸ್ವಲ್ಪ ಕಾಲದಲ್ಲೆ ಆ ಕೂಸು ಹಾವು ಕಡಿದು ಸತ್ತು ದ್ವಿಜಜಾತಿಯಲ್ಲಿ ಹುಟ್ಟಿ ನಾಗಶ್ರೀಯಾದಳು. ನಾಗರ ಪೂಜೆಗಾಗಿ ನಾಗಸ್ಥಾನಕ್ಕೆ ಹೋದ ಅವಳು, ಎಲ್ಲೆಲ್ಲಿಯೋ ಸುತ್ತಾಡಿಕೊಂಡು ಅಲ್ಲಿಗೆ ಬಂದಿದ್ದ ಅಗ್ನಿಭೂತಿ ಮುನಿಯನ್ನು ಕಂಡು, ಹಿಂದಿನ ಜನ್ಮದ ನೆನಪು ಬಂದು, ವಿರಕ್ತಿ ಹುಟ್ಟಿ, ಸೂರ್ಯಮಿತ್ರನಿಂದ ಅಣುವ್ರತಗಳನ್ನು ಸ್ವೀಕರಿಸಿ, ಪೂರ್ವಜನ್ಮವಾಸನೋದಿತ ಪಾಂಡಿತ್ಯ ಶ್ರೀಯನ್ನು ಮೆರೆದು, ತಂದೆಸಹಿತಳಾಗಿ ಜಿನದೀಕ್ಷೆ ತಾಳಿ ಉಗ್ರೋಗ್ರ ತಪಸ್ಸನ್ನು ಆಚರಿಸಿ, ಪುಣ್ಯ ಸಂಚಯದಿಂದ ಪದ್ಮಗುಲ್ಮವೆಂಬ ಸ್ವರ್ಗ ಪ್ರದೇಶದಲ್ಲಿ ಪದ್ಮಪ್ರಭನೆಂಬ ದೇವತೆಯಾಗಿ ಹುಟ್ಟಿ

ಅನುಪಮದಿವ್ಯ ಸೇವ್ಯವಿಭವಂ ದೊರೆವೆತ್ತ ವಿನೋದವೃತ್ತಿಯಂ
ಜನಿಯಿಸೆ ಚೆಲ್ವುವೆತ್ತೆಸೆವ ಗಾಡಿ ಮನೋಹರವಾಗಿ ಸಂತತಂ
ಮನಸಿಜರಾಗಮಂ ಸಲಿಸೆ ಕುಂದದ ನಿಪ್ಪೊಸತಪ್ಪ ಜವ್ವನಂ
ತನಗೆ ವಿಲಾಸಮಂ ಪಡೆಯೆ ಭೋಗಿಸಿದಂ ಸುರಲೋಕಭೋಗಮಂ ॥

ಈ ಭವವೂ ಕಳೆದಮೇಲೆ ವಾಯುಭೂತಿಯ ಜೀವ ಸುಕುಮಾರನಾಗಿ ಜನ್ಮಿಸಿತು. ಆಗರ್ಭಸುಖಿಯಾಗಿ ಸುಕುಮಾರ ತಾಯ ಕಣ್ಣಮಣಿಯಾಗಿ ಬೆಳೆದು, ಮಾನುಷ ಭೋಗಭಾಗ್ಯಗಳ ತುತ್ತತುದಿಯನ್ನು ಮುಟ್ಟಿ, ಯಶೋಭದ್ರಮುನಿಗಳ ಕರುಣೆಯಿಂದ ತೀವ್ರ ವಿರಾಗವನ್ನು ಹೊಂದಿ ಕೈಕೊಂಡ ತಪಸ್ಸಿನಿಂದ ವರ್ಧಿಸಿದ ಪುಣ್ಯಾತಿಶಯದಿಂದ ಮೋಕ್ಷದ ನೆರೆಮನೆಯ ನಿವಾಸಿಯಾದನು. ದುಃಖದಿಂದ ಸುಖಕ್ಕೆ ಧರ್ಮದ ಏಣಿಯ ಮೇಲೆ ಹತ್ತಿ ಹೋದ ಈ ಜೀವದ ಚರಿತ್ರೆಯನ್ನು ಶಾಂತಿನಾಥ

ಅತ್ಯಂತ ಸಹಾನುಭೂತಿಯಿಂದ ಚಿತ್ರಿಸಿರುವನು. ಅವನ ನೋಟ ನೆಲಬಾನುಗಳನ್ನು ತಬ್ಬಿದೆ; ಓದುವವರ ಮನದಲ್ಲಿ ಕಾಲದೇಶಗಳ ಮಿತಿ ವಿಸ್ಮೃತವಾಗಿ ಜೀವೈಕ್ಯ ದೃಷ್ಟಿ ಪ್ರಬುದ್ಧವಾಗಿ ಸಂಸಾರದ ಗಹನತೆಯ ದರ್ಶನದಿಂದ ಅಚ್ಚರಿಯ ಸ್ಪಂದನವುಂಟಾಗುತ್ತದೆ.

ಅಗ್ನಿಭೂತಿಯ ಪಾತ್ರ ಇನಿಯ ಪಾತ್ರ, ನಯ ವಿನಯ ಸೌಜನ್ಯ ಭಕ್ತಿ ವಾತ್ಸಲ್ಯಾದಿಗಳಿಂದ ತುಂಬಿದ ಸುಕೃತ ಚೇತನವದು. ತಮ್ಮನ ದುಷ್ಪ್ರವರ್ತನೆಯಿಂದ ನೊಂದ ಆ ಜೀವ ಕ್ಷಮೆಯನ್ನು ಪರಿಭಾವಿಸಿ ಸೂರ್ಯಮಿತ್ರನ ನೇತೃತ್ವದಲ್ಲಿ ತನ್ನ ಉದ್ಧಾರವನ್ನು ಕಂಡು ತಮ್ಮನ ಶ್ರೇಯಸ್ಸನ್ನೂ ಕಾಣಿಸಿದ ಕರುಣಿ. ಹೊಲೆಯರ ಕೂಸಾಗಿ ಹೊಲಸುನಾರುತ್ತಿದ್ದ ಆ ತಮ್ಮಜೀವದ ದುಃಖವನ್ನು ಕಂಡು ಕರಗಿ

ಇದೇಂ ಬಹು ವಿಚಿತ್ರಮೋ ಭವವಿಕಲ್ಪವೈಚಿತ್ರ್ಯಮಿಂ
ತಿದೇನಘಟಮಾನಮೋ ವಿಕೃತ ಘೋರ ಸಂಸಾರಮಿಂ ।
ತಿದೇಂ ವೃಜಿನಬಂಧಮೋ ಕುಸೃತಿಬಂಧ ಸಂಬಂಧಮೆಂ
ದದೇಂ ತಳೆದನೋ ಮುನಿಪ್ರವರನಾಗಳುದ್ವೇಗಮಂ ॥

ಉದ್ವೇಗದ ಜೊತೆಗೆ ಸಂಸಾರ ಸ್ವರೂಪವನ್ನು ನೋಡಿ ಆಶ್ಚರ್ಯವೂ ಆಗುತ್ತದೆ. ಅಂತಹ ವೀತರಾಗನಾದ ಯತಿಗೂ ಆ ದುಃಖಜೀವಿಯನ್ನು ಕಂಡಾಗ ಕಣ್ಣೀರು ಸುರಿದು ಸಂತಾಪ ಉಕ್ಕಿ ಬಂದಿತೆಂದರೆ ಉಳಿದವರ ಮಾತೇನು? ಅವನ ಭವಾಂತರ ಪ್ರೀತಿ ಅಜ್ಞಾತವಾಗಿ ಎಚ್ಚರಗೊಂಡಿತು.

ಬಳೆದ ವಿಮೋಹದಿಂ ಪಿಡಿದ ಕುಂಚದ ಕಾವಿನೊಳೆಂದು ಪಕ್ಷಿಸಂ
ಕುಲಮನದೊಂದೆರಲ್ಗಳಿಗೆ ಪೋಷಿಸಿನಮಲ್ಲಿಯೆ ನಿಂದು ದುಃಖಿ
ಹ್ವಳನೆಡೆದೋಱಿ ನೂಂಕಿ ಕುಡುತುಂ ಕರುಣಂ ಪಿರಿದಾಗಿ ಪಿಂಬಗಲ್ ।
ಕಳೆವಿನಮಿರ್ದನಾ ಪರಮಯೋಗಿಗಮಂತುಟು ಮೋಹಮಾಗದೇ ॥

ಹೀಗಾದುದಕ್ಕೆ ಕಾರಣವನ್ನು ಅವನು ಗುರುಗಳಿಂದ ತಿಳಿದು ಜನ್ಮಾಂಧಕಿಯಲ್ಲಿಗೆ ಬಂದು

ಬೋಧನಿರಾಕೃತಿಯಿಂ ಭವ
ಬಾಧಾಪೀಡಿತ ಶರೀರಿಯಾದೈ ಗುರು ಸಂ
ಬೋಧನೆಯಿಂ ನಿನ್ನಂ ಪ್ರತಿ
ಬೋಧಿಸಲಾಂ ಬಂದೆನಗ್ನಿಭೂತಿಯೆನಱಿಮೋ ।

ಮುನಿಪತ್ರಿಯನಂದು ನೀಂ ಕೆ
ಮ್ಮನೆ ಮುಳಿಸಿನೊಳೆಯ್ದೆ ಬಯ್ದು ಪಾಪದ ಫಲದಿಂ
ದಿನಿವಿರಿದು ದುಃಖಮಂ ನೆ
ಟ್ಟನೆಯ್ದಿದೈ ಮಾನಗರ್ವಮೇನಾಗಿಸದೋ ।
ಅನಿತುಮಹಾಸ್ಪದಕ್ಕನಿತು ಸದ್ವಿಭವಕ್ಕನಿತೊಂದು ಸಂಪದ ।
ಕ್ಕನಿತು ವಿಲಾಸದೇಳ್ಗೆಗೆಱತಿವಟ್ಟೆನಿಸಿರ್ದು ಬೞಿಕ್ಕೆಪಾಪದಿಂ ॥
ದಿನಿತು ನಿಕೃಷ್ಟದುರ್ಗತಿಗಳೊಳ್ ಬಲವಂದುದನೀಗಳಾಗಿಯುಂ ।
ನೆನೆದು ನಿರಾಕುಳಂ ಬಗೆದು ಭಾವಿಸು ನಿನ್ನ ಭವಾಂತರಂಗಳಂ ।

ಎಂದು ತನ್ನ 'ವಚಸ್ಸುಧಾರಸಸುವರ್ಷ' ದಿಂದ ಆ ಜೀವಿಯನ್ನು ಸಂತೈಸಿ ಅದಕ್ಕೆ ಅಣುವ್ರತಗಳನ್ನು ಕೊಳಿಸಿ ಅದರ ಮುಂದಿನ ದ್ವಿಜಜಾತಿಯ ಉತ್ಕೃಷ್ಟ ಜನ್ಮಕ್ಕೆ ಕಾರಣನಾದನು; ದುಃಖವನ್ನು ಕಳೆದು ಸುಖವನ್ನು ತೋರಿಸಿದನು, ಆ ನಾಗಶ್ರೀಜನ್ಮದಲ್ಲೂ ತನ್ನ ದರ್ಶನ ಮಾತ್ರದಿಂದ ಆ ಜೀವಕ್ಕೆ ವಿವೇಕೋದಯವನ್ನು ಮಾಡಿ ಅದರ ಉದ್ಧಾರವನ್ನು ಕಂಡು ಮೆಚ್ಚಿ, ಕೊನೆಗೆ ಮೋಹದ ತಮಸ್ಸನ್ನು ತೊಲಗಿಸಿ ತಪೋನಿರತನಾಗಿ ಕರ್ಮವನ್ನು ಸುಟ್ಟು ಮುಕ್ತಿಗೆ ಸಂದನು.

ಮೊದಲಿಂದಲೂ ಸನ್ಮಾರ್ಗವರ್ತಿಯಾಗಿದ್ದ ಈ ಪಾತ್ರ ಭವಾಂತರ ಕ್ಲೇಶಗಳಿಗೆ ಒಳಗಾಗದೆ ನೇರಾಗಿ ಮುಕ್ತಿರಾಜ್ಯವನ್ನು ಸೂರೆಗೊಂಡಿತು; ವಾಯುಭೂತಿಯದಾದರೆ ಇದಕ್ಕೆ ವಿರುದ್ಧವಾಗಿ ಪುಣ್ಯಪ್ರೇರಣೆಯಿಂದ ಸರ್ವಾರ್ಥ ಸಿದ್ಧಿ ಸ್ವರ್ಗದಲ್ಲಿ ನಿಲ್ಲಬೇಕಾಯಿತು; ಅದರ ಮುಕ್ತಿ ಮುಂದಕ್ಕೆ ಎಂದೋ? ಇವೆರಡು ಪಾತ್ರಗಳಿಗಿರುವ ವಿಷಮತೆಯನ್ನು ಮನಮುಟ್ಟುವಂತೆ ಶಾಂತಿನಾಥನು ಚಿತ್ರಿಸಿದ್ದಾನೆ.

ದ್ರವ್ಯತಪವು ಕೆಲವು ವೇಳೆ ಭಾವತಪಸ್ಸಿಗೆ ಕಾರಣವಾಗಬಲ್ಲುದೆಂಬ ಅಂಶವನ್ನು ಸೂರ್ಯಮಿತ್ರನ ಪಾತ್ರದಲ್ಲಿ ಕವಿ ಪ್ರಕಟಿಸಿದ್ದಾನೆ. ದೊಡ್ಡವರಂತೆ ನಟನೆ ಮಾಡುತ್ತಿದ್ದರೆ ನಿಜವಾದ ದೊಡ್ಡತನ ಬರಬಹುದೆಂಬುದು ಅನುಭವಸಿದ್ಧವಾದುದು. ದ್ವಿಜನೂ ಶಾಸ್ತ್ರಪಾರಗನೂ ಆಗಿದ್ದ ಸೂರ್ಯಮಿತ್ರ ತನ್ನ ದೊರೆ ಸುಬಲಮಹಾರಾಜನು ಕೊಟ್ಟ ಉಂಗುರವನ್ನು ನೀಗಿಕೊಂಡು ಅದು ಎಲ್ಲಿ ನಷ್ಟವಾಯಿತೆಂಬುದನ್ನು ತಿಳಿಯಲಾರದೆ ಸುಧರ್ಮಮುನಿಯ ಸಹಾಯದಿಂದ ಅದನ್ನು ಮರಳಿ ಪಡೆದನು. ಅಷ್ಟಕ್ಕೇ ಅವನು ತೃಪ್ತನಾಗಬಹುದಾಗಿತ್ತು. ಆದರೆ ಮುನಿಯು ಆ ವಿದ್ಯೆಯನ್ನು

ತಿಳಿಯುವ ಕುತೂಹಲ ಅವನಲ್ಲಿ ಮೂಡಿತು. ಆ ವಿದ್ಯೆ ತನಗೆ ಸಿಕ್ಕಿತೆಂದರೆ "ತ್ರೈಲೋಕ್ಯ ಸಾಮ್ರಾಜ್ಯಪದಂ ಸಾರ್ವಸಿತುಂ ಮಹಾಮಹಿಮೆ ಸಾರ್ಗ್ಗ್ರಂ" ಎಂಬ ಲೌಕಿಕ ಪ್ರಯೋಜನ ಅವನಿಗೆ ಅದರಲ್ಲಿ ಕಂಡಿತು. ಏನಾದರೂ ಆಗಲಿ ಅದನ್ನು ಕಲಿಯಲೇ ಬೇಕೆಂಬ ಹಟವನ್ನು ತೊಟ್ಟು ಲೋಕದ ನಿಂದೆಗೆ ಹೆದರದೆ ಜಿನಯತಿಯ ವೇಷವನ್ನು ಧರಿಸಿದನು; ಕಪಟ ಸಂನ್ಯಾಸಿಯಾದನು. ಇದರಿಂದ ಸುಧರ್ಮನನ್ನು ನಂಬಿಸಿದರಾಯಿತೆಂದು ಅವನೆಣಿಕೆ. ಆದರೆ ಅವನಿಗೆ ಏಕೋ ಏನೋ ಹೊಳೆಯಲೇ ಇಲ್ಲ, ಕುಳಿತ ಜಾಗದಲ್ಲೆ ಉಂಗುರ ಹಾಳಾದ ವಿಷಯ ವನ್ನು ತಿಳಿಯಬಲ್ಲ ಮುನಿ ತನ್ನ ಕಾಪಟ್ಯವನ್ನೂ ಕಾಣಬಲ್ಲನೆಂಬುದು. ಆ ಮುನಿ ಇವನಿಗೆ ಧರ್ಮಕ್ಕೆ ಬರುವ ಮಾರ್ಗವಿದೊಂದೇ ಎಂಬುದನ್ನು ತಿಳಿದವರಾಗಿ ಜಿನ ದೀಕ್ಷೆಯನ್ನು ಕೊಟ್ಟರು; ಜೈನಶಾಸ್ತ್ರಗಳನ್ನು ಪಾಠ ಹೇಳಿದರು. ಕುತೂಹಲ ದಿಂದ ಎಲ್ಲವನ್ನೂ ಸೂರ್ಯಮಿತ್ರ ಬೇಗಬೇಗ ಕಲಿತನು. ಕಲಿಯುತ್ತ ಕಲಿಯುತ್ತ ಅವನ ಮಿಥ್ಯಾತಪಸ್ಸು ಸತ್ಯತಪಸ್ಸಾಗತೊಡಗಿತು; ಭಾವತಪಸ್ಸಿನ ದೀಕ್ಷೆ ಯನ್ನು ಗುರುವಿನಿಂದ ಪಡೆದು ನಾನಾ ಬಗೆಯಾದ ಕಾಯಕ್ಲೇಶಗಳನ್ನು ಲೆಕ್ಕಿಸದೆ ತಪಶ್ಚರಣಮಗ್ನನಾಗಿ ಅವಧಿ ಜ್ಞಾನಕ್ಕೆ ಒಡೆಯನಾದನು. ಆಗ ಆ ಗುರು

> ಇದು ಮುನ್ನಂ ನಿನ್ನ ಕೊಟ್ಟುಂಗುರದೆಡೆಯನದಂ ಪೇಳ್ದ ಸದ್ವಿದ್ಯೆ ತಾನಿಂ
> ತಿದು ಮುನ್ನಂ ನಿನ್ನನೆನ್ನಲ್ಲಿಗೆ ಬರಿಸಿದ ದಿವ್ಯೋಪದೇಶಂ ಸಮಂ |
> ತಿದು ಮುನ್ನಂ ನಿನ್ನ ತತ್ವಕ್ಕೆಳಸಿದ ಹಿತಮಂ ಮಾಡಿದಾ ಜೋಯಿಸಂ ಬಂ
> ದುದು ಕೈಕೊಳ್ ನಿನ್ನಚಿತ್ತಂ ಬಯಸುವ ವಿಲಸನ್ಮೂತ್ನ ಸುಜ್ಞಾನರತ್ನಂ ||

ಎಂದು ಹೇಳಿದಾಗ ಸೂರ್ಯಮಿತ್ರನಿಗೆ ಸಂತೋಷವಾಗಿರಬೇಕು. ಇದರಿಂದ ಉತ್ತೇಜಿತನಾದ ಅವನು ಇನ್ನೂ ಬಗೆಬಗೆಯ ತಪಸ್ಸುಗಳಲ್ಲಿ ತೊಡಗಿ ಜಯಗಳಿಸಿ ಯತಿಧರ್ಮಕ್ಕನುಸಾರವಾಗಿ ದೇಶಪರ್ಯಟನೆಮಾಡುತ್ತ ತನ್ನ ಸೋದರಳಿಯಂದಿರಿದ್ದ ಕೌಶಂಬಿಗೆ ಬಂದನು. ಅಲ್ಲಿ ಅಗ್ನಿಭೂತಿಯ ಸತ್ಕಾರವನ್ನು ಸ್ವೀಕರಿಸಿ ಅವನ ಇಷ್ಟದಂತೆ ವಾಯುಭೂತಿಯ ಮನೆಗೆ ಬಂದು ಉನ್ಮತ್ತನಾಗಿದ್ದ ಅವನ ನಿಂದೆಯ ನುಡಿಗಳನ್ನೆಲ್ಲಾ ಕೇಳಿ

> ಕ್ಷಮೆಯ ಮೊದಲ್ ಸಮತೆಯ
> ಬಿತ್ತುಮೊದಲ್ ಸೈರಣೆಯ ಮೊತ್ತಮೊದಲೆನೆ ನೆಗಟ್ಟಿ
> ರ್ದ ಮನುಷ್ಯನಾವನಾತನೆ
> ಸಮಾನನಾತನೆ ಮುನೀಂದ್ರನಾತನೆ ದೇವಂ |

ಪಗೆಯಾವುದು ಕೆಳೆಯಾವುದು
ಬಗೆವೊಡೆ ಭಾವಿಸುವೊಡೆಂದು ನೋಡುವೊಡೆಂದುಂ
ಪಗೆ ಕರ್ಮಮೆ ಕೆಳೆ ಧರ್ಮಮೆ
ಜಗದೊಳ್ ಮುನಿಪತಿಗೆ ಪರಮಜಿನಪತಿಮತದಿಂ ||

ಎಂದು ಕ್ಷಮೆಯನ್ನು ಅವಲಂಬಿಸಿದನು; ಅಗ್ನಿಭೂತಿಯ ಸತ್ಕಾರಕ್ಕೆ ಹಿಗ್ಗದೆ ವಾಯುಭೂತಿಯ ನಿಂದೆಗೆ ನೋಯದೆ ಸಮಾನಮನಸ್ಕನಾದನು. ಇದು ಅವನ ಅಸಮಾನಗುಣ. ಈ ಕ್ಷಮೆ ವಾಯುಭೂತಿ ಹೊತ್ತ ಜನ್ಮಾಂತರಗಳಲ್ಲೂ ಒಂದೇ ಸಮನಾಗಿ ಪ್ರವಹಿಸಿದೆ. ಅವನು ನಾಗಶ್ರೀಯಾಗಿದ್ದಾಗ ಸೂರ್ಯಮಿತ್ರ ಅದೆಷ್ಟು ಅಕ್ಕರೆಯಿಂದ ಅವಳಿಗೆ ಸಂಸಾರ ಸ್ವರೂಪವನ್ನು ಉಪದೇಶಮಾಡಿದ! ಅವಳು ತನ್ನ ಮಗಳೆಂದು ನೆರೆದ ಸೆರವಿಯ ಮುಂದೆ ಅದೆಷ್ಟು ಆದರಿಸಿದ! ಆ ಜೀವದ ಉಚ್ಚಪ್ರಗತಿಯನ್ನು ಅವನು ಸ್ವಹಸ್ತದಿಂದ ಸಾಧಿಸಿದನು. ಇಂಥ ಕ್ಷಮಾಮೂರ್ತಿಯಾದ ಸೂರ್ಯಮಿತ್ರ ತನ್ನನ್ನು ನಂಬಿ ಬಂದವರಿಗೆ ಸನ್ಮಾರ್ಗವನ್ನು ತೋರಿ ತಪಸ್ಥಿತನಾಗಿ ಕೇವಲಜ್ಞಾನಿಯಾಗಿ ದೇವತಾಪೂಜಿತನಾಗಿ ಮೋಕ್ಷವನ್ನು ಪಡೆದನು. ಕಪಟತಪಸ್ವಿ ಜಿನಶಾಸನದೀಪಕನಾದನು. ಈ ಪಾತ್ರ ಪರಿವರ್ತನೆ ಶಾಂತಿನಾಥನ ಕೃತಿಯಲ್ಲಿ ಸಹಜವಾಗಿ ರೂಪುಗೊಂಡಿದೆ.

ನಾಗಶ್ರೀಯ ತಂದೆ ನಾಗಶರ್ಮನು ಸೂರ್ಯಮಿತ್ರನಂತೆಯೇ ದ್ವಿಜ, ಶಾಸ್ತ್ರಪಾರಗ, ಮಂತ್ರಿಪದವಿ ಪ್ರತಿಷ್ಠಿತ, ಕಲಾಭಿಮಾನಿ. ತನ್ನ ಮಗಳು ಜೈನಯತಿಯಿಂದ ಶ್ರಾವಕ ವ್ರತಗಳನ್ನು ಸ್ವೀಕರಿಸಿದ್ದು ಅವನಿಗೆ ಹಿಡಿಸಲಿಲ್ಲ.

ಧರಣೀಚಕ್ರದೊಳಾರ್ಗಮುಗ್ಗಳಮಿಳಾದೇವಾನ್ವವಾಯಂ ನರೇ
ಶ್ವರ ಸಂಪೂಜ್ಯನೆನಾನಿದಂ ಮಗಳೆ ನೀಂ ಕಂಡಿರ್ದುಮಪ್ರೌಢರಂ |
ತಿರೆ ಕಾಷ್ಠಾಂಬರನಾಗಿ ಮುಟ್ಟುಗಿಡೆ ವಂಶಂಗೆಟ್ಟು ನಾಣ್ಗೆಟ್ಟ ದು
ಶ್ಚರಿತಂಗಾನತೆಯಾಗಿ ನಮ್ಮ ಕುಲಮಂ ನೀಂ ನೀರೊಳಿಂತರ್ದುವೋ ||

ಎಂಬ ಕುಲಗೌರವದ ಹಾನಿಯ ಚಿಂತೆ ಅವನಿಗೆ. ಜಿನಯತಿ "ನಾಣಿಲಿ ಸವಣ"ನೆಂದು ಅವನಿಗೆ ತಿರಸ್ಕಾರ. ತನಗೆ ಹೇಳದೆ ಕೇಳದೆ ತನ್ನ ಮಗಳಿಗೆ ಆ ಯತಿ ವ್ರತಗಳನ್ನು ಕೊಡಬಹುದೇ? ಬಹುಕಾಲ ಮಕ್ಕಳಿಲ್ಲದೆ ನಾಗರಿಗೆ ಹರಕೆ ಹೊತ್ತು ಪಡೆದ ತನ್ನ ಒಬ್ಬಳೇ ಮಗಳನ್ನು ಅವನು ಹೀಗೆ ಮರುಳುಮಾಡಬಹುದೇ? ಇದು ಸರಿಯಲ್ಲವೆಂದು ಅವನಿಗೆ ತೋರಿತು. ಆದರೂ ಮಗಳಮೇಲೆ ಕೋಪವಿಲ್ಲ;

ಅವಳ ಅವಿವೇಕಕ್ಕೆ ಮಾತ್ರ ಮರುಗಿದನು. ಮಗಳುಸಮೇತ ಆ ಲಜ್ಜೆಗೆಟ್ಟ ಸವಣನಲ್ಲಿಗೆ ಹೋಗಿ ಅವನನ್ನು ಗದರಿಸಿ ಬರೋಣವೆಂದು ಅವನ ಇಷ್ಟ. ದಾರಿಯಲ್ಲಿ ನಡೆದ ಘಟನೆಗಳಿಂದ ನಾಗಶ್ರೀ ಕೈಕೊಂಡ ವ್ರತಗಳೆಲ್ಲವೂ ತನಗೆ ಸಮ್ಮತವಾದರೂ ಆ ಯತಿಯನ್ನು ಭಂಗಿಸಬೇಕೆಂಬ ಬಯಕೆ ಹಿಂಗಲಿಲ್ಲ; ಅವನಿದ್ದ ನಾಗಸ್ಥಾನದ ಬಾಗಿಲಲ್ಲಿ ನಿಂತು "ಎನ್ನಮಗಳ್ಗೀನಾನುಮುಪಾಯದ ಮಾಯೆಯಿಂ ವ್ರತಮನಾಗ್ರಹದಿಂದಮೆ ನೀವಿಂತೀವುದಿದಾವುದು ಸಮ್ಮದಂ" ಎಂದು ಕೂಗಿ ಹೇಳಿದನು. ಯತಿ ಆ ಕೂಸು ತನ್ನ ಕೂಸೆಂದು ಹೇಳುತ್ತ, ಅವಳು ತನ್ನ ಬಳಿಗೆ ಬಂದು ಕುಳಿತುಕೊಳ್ಳುವಂತೆ ಮಾಡಿಬಿಟ್ಟನು. ನಾಗಶರ್ಮನಿಗೆ ಆಕಾಶವೇ ಕಳಚಿ ಮೇಲೆ ಬಿದ್ದಂತಾಗಿ ದೊರೆಯ ಬಳಿಗೆ ಹೋಗಿ ಹುಯ್ಯಲಿಟ್ಟನು. ದೊರೆ ಅಲ್ಲಿಗೆ ಬಂದು ಜಗಳದ ಕಾರಣವನ್ನು ಕೇಳಿದಾಗ ಯತಿ ನಾಗಶ್ರೀಯ ಬಾಯಿಂದ, ಮೊದಲು ಆ ಜೀವ ವಾಯುಭೂತಿಯಾಗಿದ್ದಾಗ ತಾನು ಕಲಿಸಿದ ವೇದಾದಿ ಶಾಸ್ತ್ರಗಳನ್ನೆಲ್ಲಾ ಹೇಳಿಸಿ ಅಚ್ಚರಿಯ ಪವಾಡವನ್ನು ಮೆರೆದನು. ಇದರಿಂದ ನಾಗಶರ್ಮನ ಮನಸ್ಸು ಪರಿವರ್ತನೆಯಾಗಿ ಜಿನದೀಕ್ಷೆಯನ್ನು ಧರಿಸಿದನು. ಸೂರ್ಯಮಿತ್ರನು ಜೈನಮತವನ್ನು ಕೈಕೊಂಡುದಕ್ಕೆ ಕಾರಣ ವಿದ್ಯೆಯನ್ನು ಕಲಿಯಬೇಕೆಂಬ ಕುತೂಹಲವಾಗಿದ್ದರೆ ಮಗಳ ಮೇಲಿನ ಮಮತೆ ನಾಗಶರ್ಮನನ್ನು ಆ ಮತಕ್ಕೆ ತಳ್ಳಿತು. ಮನುಷ್ಯ ಸಹಜವಾದ ಈ ಕುತೂಹಲ ಮಮತೆಗಳನ್ನು ಆಶ್ರಯಿಸಿ ಇವರಿಬ್ಬರ ಪಾತ್ರಗಳನ್ನು ಚಿತ್ರಿಸಿರುವುದು ಕವಿಯ ಕೌಶಲವನ್ನು ತೋರಿಸುವುದಾಗಿದೆ.

ಕಥೆಯಲ್ಲಿ ಬರುವ ಸುಧರ್ಮಾಚಾರ್ಯ ಅಭಿನಂದನ ಮುನೀಂದ್ರ, ಯಶೋಭದ್ರಸ್ವಾಮಿಗಳ ಪಾತ್ರಗಳು ತಮ್ಮವೇ ಆದ ಉನ್ನತಾಧ್ಯಾತ್ಮ ಸ್ಥಿತಿಯಲ್ಲಿ ನಿಂತು ಕಥೆಗೆ ಪವಿತ್ರಧರ್ಮಾವರಣವನ್ನು ಕಲ್ಪಿಸುತ್ತಾ ಕಥಾಕ್ರಿಯೆಯಲ್ಲಿ ಕವಿಯಿಂದ ನಿಯೋಜಿತವಾದ ಕಾರ್ಯಗಳನ್ನು ಮಾಡಿ ಹಾಗೆಯೇ ಅದೃಶ್ಯರಾಗುವರು. ಸುಧರ್ಮ ಯಶೋಭದ್ರರು, ಸೂರ್ಯಮಿತ್ರ, ಸುಕುಮಾರ ಜೀವಿಗಳ ಹಿತಚಿಂತಕರಾಗಿ ಅವುಗಳ ಉದ್ಧಾರಕ್ಕೆ ನೆರವಾಗುವರು; ಅಭಿನಂದನನು ಭವಿಷ್ಯವನ್ನು ಹೇಳಿ ಸುಕುಮಾರನ ತಾಯಿಗೆ ಸಂತೋಷವನ್ನೂ, ಚಿಂತೆಯನ್ನೂ ಏಕಕಾಲದಲ್ಲುಂಟು ಮಾಡಿ ಆಕೆಯ ತಾಯ್ತನದ ವಾತ್ಸಲ್ಯದ ಎಚ್ಚರಿಕೆಗೆ ಎಂಟು ಕಣ್ಣುಗಳಾಗುವಂತೆ ಮಾಡಿದನು. ಈ ಪಾತ್ರಗಳು ಯಾವುದೋ ಅತೀಂದ್ರಿಯತೆಯ ಪರಿವೇಷವನ್ನು ಹೊಂದಿದ್ದು ಭಕ್ತಿಗೌರವಗಳನ್ನು ಪ್ರಚೋದಿಸುವಂತಿವೆ.

'ಸುಕುಮಾರ ಚರಿತೆ'ಯ ಸ್ತ್ರೀವ್ಯಕ್ತಿಗಳಲ್ಲಿ ಯಶೋಭದ್ರೆ, ಸೋಮದತ್ತೆಯರು ಪ್ರಮುಖರು. ಸುಕುಮಾರನ ಹಿಂದಿನ ಜನ್ಮವಾದ ನಾಗಶ್ರೀ ಜನ್ಮದಲ್ಲಿ ಅವಳ ತಾಯಾಗಿದ್ದ ತ್ರಿವೇದಿಯ ಜೀವವೇ ಈಗ ಯಶೋಭದ್ರೆಯಾಗಿ ಹುಟ್ಟಿತು. ಈ ಜನ್ಮದಲ್ಲಿ ಅವಳ ಗಂಡ ರಾಜಶ್ರೇಷ್ಠಿಯಾದ ಸೂರದತ್ತ. ಅವರ ಐಶ್ವರ್ಯವನ್ನು ರಾಶಿಹಾಕಿದರೆ ಅದರ ಇಕ್ಕೆಲದಲ್ಲಿ ಆನೆಯನ್ನೇರಿ ಅವುಗಳ ಮೇಲೆ ನಿಂತ ಮಾವಟಿಗರ ತಲೆ ಪರಸ್ಪರ ಕಾಣುತ್ತಿರಲಿಲ್ಲವಂತೆ. ಇಷ್ಟು ಭೋಗಭಾಗ್ಯಗಳಿದ್ದರೂ ಅವರಿಗೆ ಮಕ್ಕಳಿರಲಿಲ್ಲ. ಈ ಚಿಂತೆ ಯಶೋಭದ್ರೆಯ ಪಾಲಿಗೆ ಮಿಗಿಲಾಯಿತು.

ಆಡುವ ನಲಿದಾಡುವ ನಡೆ
ನೋಡುವ ಕೊರಲಪ್ಪಿಕೊಳ್ವ ಭಕ್ಷ್ಯಾದಿಗಳಂ ।
ಬೇಡುವ ಮಕ್ಕಳ ಬಾಳ
ಕ್ರೀಡೆಗಳಂ ನೋಡುತಿರ್ಪುದೊಂದಿರವಲ್ತೇ ॥

ಎಂದು ಆಕೆ ಹಂಬಲಿಸಿದಳು; ತನ್ನ ಪುರಾಕೃತ ಕರ್ಮಕ್ಕಾಗಿ ತನ್ನನ್ನು ತಾನೇ ನಿಂದಿಸಿಕೊಳ್ಳುತ್ತ ಮಕ್ಕಳಿಲ್ಲದ ಬಾಳು ಬಾಳಲ್ಲವೆಂದು ನೊಂದಳು. ಒಂದು ದಿನ ಅಭಿನಂದನ ಮುನೀಂದ್ರರು ಅಲ್ಲಿಗೆ ಬಂದರು. ಯಶೋಭದ್ರೆ ಅವರನ್ನು ಕಂಡು ಭಕ್ತಿಯಿಂದೆರಗಿ ತನ್ನ ದುಃಖ ಎಂದು ಆರುವುದೆಂದು ಅವರನ್ನು ಕೇಳಿದಳು. ಇದಕ್ಕೆ ಉತ್ತರವಾಗಿ ಆ ಮುನಿ 'ಇವತ್ತಿಗೆ ಐದು ತಿಂಗಳು ಕಳೆಯುತ್ತಲೇ ಸ್ವರ್ಗದ ಒಂದು ಜೀವ ಬಂದು ನಿನ್ನ ಬಸಿರಿನಲ್ಲಿ ನೆಲಸುತ್ತದೆ' ಎಂದು ಹೇಳಿ, 'ಆದರೆ ಮಗ ಹುಟ್ಟಿದ ಕೂಡಲೇ ನಿನ್ನ ಗಂಡ ತಪಸ್ಸಿಗೆ ಹೋಗುವನು, ಯತಿದರ್ಶನವಾದಾಗ ನಿನ್ನ ಮಗ ಜಿನದೀಕ್ಷೆವಹಿಸುವನು' ಎಂದು ಮುಂದಾಗುವುದನ್ನು ತಿಳಿಸಿಯೂ ಬಿಟ್ಟರು. ಯಶೋಭದ್ರೆಗೆ ಹರ್ಷವಿಷಾದಗಳು ಒಂದೇ ಹೊತ್ತಿನಲ್ಲಿ ಹುಟ್ಟಿದುವು. ಮಗ ಜನ್ಮಿಸಿದ ಕೂಡಲೇ ಅವಳ ಗಂಡ ಎಲ್ಲವನ್ನೂ ತೊರೆದು ಜಿನ ದೀಕ್ಷಾಗ್ರಹಣಮಾಡಿದನು. ಅವಳಿಗೆ ಗಂಡನ ಹಿಂದೆಯೇ ಹೋಗಬೇಕೆಂದು ಇಷ್ಟ; ಆದರೆ ಮಗನನ್ನು ಬಿಡುವುದು ಹೇಗೆ ಎಂಬ ವ್ಯಾಮೋಹ. ಈ ಎಳೆದಾಟದಲ್ಲಿ ಅವಳ ಮನಸ್ಸು ಸಿಕ್ಕಿ, ಕೊನೆಗೆ ಜಿನಾಭಿಷೇಕಮಾಡಿ ಮಗನ ಆರೈಕೆಯಲ್ಲಿ ನಿಂತಳು; ಮಗನಿಗೆ ಸುಕುಮಾರನೆಂದು ಹೆಸರಿಟ್ಟು ಉತ್ಸವಾದಿಗಳನ್ನು ನಡೆಯಿಸಿದಳು. ಮಗು ದಿನ ದಿನಕ್ಕೆ ಬೆಳೆದು ದೊಡ್ಡದಾಗುತ್ತ ಬಂತು; ಅಪ್ಪನಹಾಗೆ

ಮಗನೂ ತನ್ನನ್ನು ಬಿಟ್ಟು ಹೋದರೆ ತನ್ನಗತಿ ಏನೆಂಬ ಚಿಂತೆಯೂ ಬೆಳೆಯಿತು. ಅವನ ಕಣ್ಣಿಗೆ ಯಾರೂ ಬೀಳಬಾರದೆಂದು ಆಕೆ ಎತ್ತರವಾದ ಗೋಡೆಗಳ ನಡುವೆ ಲಕ್ಷ್ಮೀ ಗೃಹವನ್ನು ಕಟ್ಟಿಸಿ ಅದನ್ನು ಎಲ್ಲ ಭೋಗ್ಯವಸ್ತುಗಳಿಂದ ಸಜ್ಜುಗೊಳಿಸಿ ಮಗನನ್ನು ಅಲ್ಲಿ ಬಡವ ನಿಧಿಯನ್ನು ಮಡಗುವಂತೆ ಮಡಗಿದಳು. ಮಗ ಹದಿನಾರು ವರುಷದ ಚೆಲುವನಾದಾಗ ಅವನಿಗೆ ಮೂವತ್ತೆರಡು ಕನ್ಯೆಯರನ್ನು ತಂದು ಮದುವೆ ಮಾಡಿದಳು. ತನ್ನ ಹೆಂಡಿರನ್ನಲ್ಲದೆ ಸುಕುಮಾರ ಬೇರೆ ಜನರನ್ನು ಕಂಡರಿಯ; ಅವನ ಹೆಜ್ಜೆಗಳಿಗೆ ನೆಲವೆಂದರೇನೆಂಬುದೇ ತಿಳಿಯದು. ಲೋಕದ ಸಂಪರ್ಕವಿಲ್ಲದೆ ಅವನ ಪಾಡಿಗೆ ಅವನು ನಿಶ್ಚಿಂತನಾಗಿ ಸುಖವಾಗಿದ್ದನು. ರಾಜರಿಗೂ ಕೊಳ್ಳಲಾರದ ವಸ್ತುಗಳನ್ನು ಕೊಂಡು ಕುಮಾರನಿಗೆ ಕೊಡುತ್ತಿದ್ದಳು ಅವನ ತಾಯಿ; ಇಷ್ಟು ಎಚ್ಚರಿಕೆಯಿಂದ ಮಗನನ್ನು ತಿರುಗಿ ತನ್ನ ಬಸಿರೊಳಗೇ ಇಟ್ಟುಕೊಂಡು ಕಾಪಾಡುವಂತೆ ಅವಳು ರಕ್ಷಿಸಿದರೆ ತಾನೇ ಏನು? ಕಾಲ ಬಂತು, ಜಿನಯತಿಸ್ವರೂಪದಲ್ಲಿ. ಆವನ ಸೊಲ್ಲು ಕೂಡ ಮಗನ ಕಿವಿಗೆ ಬೀಳಬಾರದೆಂದು ಅವನನ್ನು ಯಶೋಭದ್ರೆ ಮೌನವಾಗಿರಬೇಕೆಂದು ಬೇಡಿದಳು. ತನ್ನ ವ್ರತ ಮುಗಿದ ಕೂಡಲೇ ಆ ಮುನಿ ಓದಿದ ತ್ರಿಲೋಕ ಪ್ರಜ್ಞಪ್ತಿಯನ್ನು ಹೆಂಡತಿಯೊಡನೆ ಮಲಗಿ ನಿದ್ರಿಸುತ್ತಿದ್ದ ಸುಕುಮಾರ ಏಕೋ ಎಚ್ಚರಗೊಂಡಾಗ ಕೇಳಿ, ಹಿಂದಿನ ಜನ್ಮದ ನೆನಪು ಸುಳಿದು, ವಿರಕ್ತನಾಗಿ ಮಾಡದಿಂದಿಳಿದು ಹೋಗಿ, ಜಿನದೀಕ್ಷೆವಹಿಸಿ ತಪಸ್ಸಿಗೆ ಹೋದನು. ಪಂಜರದಲ್ಲಿದ್ದ ಗಿಣಿ ಅನಿರೀಕ್ಷಿತವಾಗಿ ತಪ್ಪಿಸಿಕೊಂಡದ್ದು ಯಶೋಭದ್ರೆಗೆ ತುಂಬ ವ್ಯಾಕುಲವನ್ನುಂಟುಮಾಡಿತು. ತಾನೂ ಸೊಸೆಯರೂ ಕೂಡಿ ಎಲ್ಲೆಲ್ಲಿಯೂ ಹುಡುಕಿದಳು, ಕಂಡ ಕಂಡವರನ್ನು ಕೇಳಿದಳು, ಅತ್ತಳು, ಕೂಗಿದಳು; ಕೊನೆಗೆ ಸುಕುಮಾರನು ತಪಸ್ಸಿನಲ್ಲಿದ್ದ ಶ್ಮಶಾನಕ್ಕೆ ಬಂದಳು. ಆದರೆ ಅಲ್ಲಿ ಅವಳು ಕಂಡದ್ದು ಸುಕುಮಾರನನ್ನಲ್ಲ, ನರಿಗಳು ತಿಂದು ಉಗುಳಿ ಹೋದ ಅವನ ದೇಹಭಾಗವನ್ನು. ಯಾರಿಗಾಗಿ ತನ್ನ ಬಾಳನ್ನು ಇದುವರೆಗೆ ಹಿಡಿದು ನಿಲ್ಲಿಸಿಕೊಂಡಿದ್ದಳೋ ಅವನೇ ಹೀಗಾದಮೇಲೆ ಅವಳು ಜಿನದೀಕ್ಷೆಯಲ್ಲಿ ತನ್ನ ಬಾಳನ್ನು ನಂದಿಸಿದಳು. ಸಾವಿನ ಸಮಾಧಿಯ ಮೇಲೆ ಈಕೆಯ ಪ್ರೀತಿಯ ಧ್ವಜ ಹಾರಾಡುವಂತೆ ಕವಿ ಚಿತ್ರಿಸಿರುವುದು ತುಂಬ ಸೊಗಸಾಗಿದೆ.

ಸೋಮದತ್ತೆ ಅಗ್ನಿಭೂತಿಯ ಧರ್ಮಪತ್ನಿ. ತನ್ನ ಮೈದುನ ವಾಯುಭೂತಿಯ ದುರ್ವರ್ತನೆ ಕಾರಣವಾಗಿ ತನ್ನ ಗಂಡ ವಿರಕ್ತನಾಗಿ ಹೋದುದು ಅವ

ಳಿಗೆ ಬಹುವ್ಯಥೆಯಾಯಿತು. ಅದನ್ನು ತಾಳಲಾರದೆ ಅವಳು ಪಾರ್ವರ ಸಭೆಯ ನಡುವಿರ್ದ ಮೈದುನನಲ್ಲಿಗೆ ಬಂದು .'ನೀನು ಮಾವನನ್ನು ಎಷ್ಟು ನಿಂದಿಸಿದರೂ ನನ್ನಗಂಡ ನಿನ್ನನ್ನು ಏನೂ ಅನ್ನಲಿಲ್ಲ. ತನ್ನನ್ನು ತಾನೇ ನಿಂದಿಸಿಕೊಂಡು ವಿರಕ್ತನಾದ; ನಾನೂ ನನ್ನ ಮಕ್ಕಳೂ ಅನಾಥರಾದೆವು; ನಾವು ದುಃಖಾಗ್ನಿಯಲ್ಲಿ ಬೇಯುವುದಕ್ಕೆ ಕಾರಣನಾದ ನಿನಗೆ ಆ ಪಾಪ ಸುತ್ತಿಕೊಳ್ಳಲಿ' ಎಂದು ಮೂದಲಿಸಿದಳು. ವಾಯುಭೂತಿ ಕೆರಳಿ ಪೀಠದಿಂದಿಳಿದು ಅತ್ತಿಗೆಯನ್ನು ಹಿಡಿದೆಳೆದು "ನಿನ್ನಾಣ್ಮನಪ್ಪ ನಾಣಿಲಿ ಸವಣನನೊಡಗೊಂಡು ಬಾ ಪೋಗು" ಎಂದು ಕಾಲಿಂದ ಒದೆದು ಆಚೆಗೆ ತಳ್ಳಿದನು. ಅವಳು "ಎನ್ನನೊದೆದ ನಿನ್ನ ಕಾಲ್ಗಳನೆನ್ನ ಮಕ್ಕಳುಮಾನುಮೆಂದಾಗಿಯುಮೇನಾಗಿಯುಂ ಸೀಳ್ದು ಪೋಟ್ಟುತಿಂಬೆ" ವೆಂದು ಪ್ರತಿಜ್ಞೆಮಾಡಿ ಮಕ್ಕಳೊಡನೆ ಮನೆಬಿಟ್ಟು ಹೊರಟು, ಆರ್ತಧ್ಯಾನದಲ್ಲಿ ಸತ್ತು, ಹಲವು ಪ್ರಾಣಿಜನ್ಮಗಳಲ್ಲಿ ಹುಟ್ಟಿ ಸತ್ತು, ಕೊನೆಗೆ ನರಿಯ ಜನ್ಮವನ್ನು ಧರಿಸಿದಳು. ವಾಯುಭೂತಿಯ ಜೀವ ಸುಕುಮಾರನಾಗಿದ್ದು ಶ್ಮಶಾನದಲ್ಲಿ ನಿಂತು ತಪಸ್ಸುಮಾಡುತ್ತಿದ್ದಾಗ ಈ ನರಿ ತನ್ನ ಮರಿಗಳೊಡನೆ ಅವನು ನಡೆದಾಗ ಕಲ್ಲು ಮುಳ್ಳು ತಗಲಿ ಸುರಿದ ರಕ್ತದ ನಾತವನ್ನೇ ಹಿಡಿದು ಬಂದು, ಅವನ ಕಾಲುಗಳನ್ನು ಸೀಳಿ ತೋಡಿ ಮೂರುದಿನಗಳವರೆಗೆ ತಿಂದು ತನ್ನ ಸೇಡನ್ನು ತೀರಿಸಿಕೊಂಡಿತು. ಸೋಮದತ್ತೆಯ ಕಥೆ ಜನ್ಮ ಜನ್ಮಕ್ಕೂ ಬೆಳೆದು ಬಂದ ದ್ವೇಷದ ಘೋರ ಪರಿಣಾಮದ ಕಥೆ; ಆ ಪಾತ್ರ ಒಂದು ದಾರುಣ ಪಾತ್ರ; ಮರೆಯದ ನೋವಿಗೆ ನೆಲೆಯಾಗಿ ಅದು ಮನದಲ್ಲಿ ನೆಲಸಿಬಿಡುತ್ತದೆ. ಎಲ್ಲ ಪಾತ್ರಗಳಿಗೂ ಅದರದರ ಕರ್ಮಾನುಗುಣವಾಗಿ ಗತಿಯನ್ನು ಕಾಣಿಸಿದ ಕವಿ ಇದಕ್ಕೆ ಏಕೆ ಯಾವ ಜಿನಮುನಿಯ ಕರುಣೆಯನ್ನೂ ಸೋಕಿಸಲಿಲ್ಲ! ಸೋಟೆಗೆಂಟೆದ.ನೆತ್ತರನ್ನು ನಾಲಗೆಯಿಂದ ಸವರಿಕೊಳ್ಳುತ್ತಿರುವ ಆ ನರಿಗಳನ್ನು ಏಕೆ ಹಾಗೆಯೇ ಬಿಟ್ಟ! ಏನು ಕರ್ಮದ ವಿಚಿತ್ರ ಲೀಲೆಯೋ!

ಶಾಂತಿನಾಥನ ಶೈಲಿಯ ಮತ್ತು ಮನೋಧರ್ಮದ ವಿಷಯವಾಗಿ ಒಂದೆರಡು ಮಾತುಗಳನ್ನು ಹೇಳಬಹುದು. ಅವನ ಶೈಲಿಯಲ್ಲಿ ಕೃತಕತೆ ಸಹಜತೆಗಳು ಇವೆ. ಗ್ರಂಥದ ಶಾಸ್ತ್ರಭಾಗದ ನಿರೂಪಣೆಯಲ್ಲಿ ಕೃತಕತೆಯೂ, ಭಾರವಾದ ಪಾಂಡಿತ್ಯವೂ ಮೈದೋರಿವೆ. ಅವನ ಶೈಲಿಯ ಸ್ಥಾಯಿ ಇರುವುದು ಕಾವ್ಯಭಾಗದಲ್ಲಿ. ಸಹಜತೆ, ಸೌಲಭ್ಯ, ಸರಳತೆ (Sincerity)ಗಳು ಅದರ ಮುಖ್ಯ ಅಂಶಗಳು; ಅದು ಆಗಾಗ

ಸತ್ವ ಯುಕ್ತವೂ ಆಗುತ್ತದೆ. ಇವಕ್ಕೆಲ್ಲಾ ನಿದರ್ಶನಗಳು ಹಿಂದೆ ಉದ್ಧರಿಸಿರುವ ಪದ್ಯಗಳಲ್ಲೇ ದೊರೆಯುತ್ತವೆ ಒಂದೊಂದು ವೇಳೆ ಅದು ಸೂಜಿಯಂತೆ ಮೊನಚಾಗಿಯೂ ಇರುತ್ತದೆ; (ವಾಯುಭೂತಿ ಮಾಡಿದ ಧಿಕ್ಕಾರದ ಪದ್ಯಗಳಲ್ಲಿ ಈ ನಿಶಿತತೆಯನ್ನು ಕಾಣಬಹುದು.) ಅಲಂಕಾರಗಳ ಮಿತಪ್ರಯೋಗದಿಂದ ಅವನ ಶೈಲಿಯಲ್ಲಿ ಕೃತಕತೆ ಕಾಲಿಡಲು ಅವಕಾಶವಿಲ್ಲ. ಅಲ್ಲೂ ಸಾಮಾನ್ಯವಾಗಿ ರೂಢಿಯಲ್ಲಿರುವ ಉಪಮೆ ರೂಪಕ ಅರ್ಥಾಂತರನ್ಯಾಸಗಳೇ ಹೆಚ್ಚಾಗಿ ಬರುತ್ತವೆ; ಶ್ಲೇಷವಂತೂ ಇಲ್ಲವೇ ಇಲ್ಲವೆಂದು ಹೇಳಬಹುದು. ಬಂದಿರುವ ಶಬ್ದಾಲಂಕಾರಗಳು ಹಿತವಾಗಿಯೇ ಇವೆ; "ನಚ್ಚಣಿ ನರ್ತಿಸಿದಳಿಚ್ಚೆಯಜಿದಚ್ಚರಿವೋಲ್," "ಕರವೊಪ್ಪಿರ್ದನನೂನಪಿಂಗಲಜಟಾಲಂಬಾಲಕಂ ಬಾಲಕಂ" ಮುಂತಾದುವು ಇದಕ್ಕೆ ಉದಾಹರಣೆಗಳು; ಇವೆಲ್ಲ ಅವನ ಶೈಲಿಗೆ ಸಹಜತೆಯನ್ನು ನೀಡಿವೆ. ಅವನ ಪದ್ಯಗಳ ಅಭಿಪ್ರಾಯ ಗ್ರಹಣಕ್ಕೆ ಕ್ಲೇಶಪಡಬೇಕಾಗಿಲ್ಲ; ಅವುಗಳಲ್ಲಿ ಅರ್ಥವ್ಯಕ್ತಿಯುಂಟು. ತಾನು ಅನುಭವಿಸಿದಷ್ಟನ್ನು ಮುಚ್ಚದೆ, ಹಿಗ್ಗಿಸದೆ ನೇರಾಗಿ ಹೇಳುವುದರಿಂದ ಸರಳತೆ ಬಂದಿದೆ ಅವನ ಶೈಲಿಗೆ. ಇವೆಲ್ಲ ಗುಣಗಳಿಗೂ ಉದಾಹರಣೆಗಳು ಅವನು ಹೇಳಿರುವ ಪಂಚಾಣುವ್ರತದ ಉಪಕಥೆಗಳಲ್ಲೇ ದೊರೆಯುತ್ತವೆ. ಒಂದೊಂದು ವೇಳೆ ಇವುಗಳೊಡನೆ ಆವೇಶವೂ ಸೇರಿಬರುತ್ತದೆ:

ನೆರೆದಾ ರಾಜಸಭಾಂತರಾಳುದಾತ್ತಾರ್ಥೋಕ್ತಿಯಿಂ ತನ್ನೊಳಾ
ದೊರೆಯೆಂಬನ್ನೆಗವುದ್ಗತ ಪ್ರಥಿತ ಶಬ್ದಾರ್ಥೋಕ್ತಿಯಿಂ ವ್ಯಕ್ತಮಾ
ಗಿರೆ ವಖ್ಖಾಣಿಸಿ ತದ್ವಿದರ್ ಪೊಗಟ್ಟುವಿಬಾಪ್ಪೆಂಬನ್ನೆಗಂ ತತ್ಕೃತಿಂ
ವರೆ ವೇದಾದಿ ಕಳಾಕಳಾಪಮನಶೇಷಾಳಾಪದಿಂದೋದಿದಳ್ ‖
ಸಕಲವ್ಯಾಕರಣಾರ್ಥ ಶಾಸ್ತ್ರನಿಪುಣರ್ ಮಾರ್ಕೊಂಡರಿಲ್ಲುರ್ಕಿ
ತಾರ್ಕಿಕರೊಟ್ಟೈಸಿದರಿಲ್ಲ ಸತ್ಕವಿಗಳಡ್ಡಂ ಬಂದರಿಲ್ಲುಂತೆ ಭುಂ
ಭಕಮಿಾ ಲೋಕದೊಳಾರೊಳಂ ಜನಿಯಿಸಿತ್ತಿಲ್ಲೆಂಬಿನಂ ವಿಪ್ರಕ
ನ್ಯಕೆ ವಿದ್ವಜ್ಜನದಿಂದಮುಂದು ಪಡೆದಳ್ ಪಾಂಡಿತ್ಯಸೌಂದರ್ಯಮಂ ‖
ಇದು ಪಲ್ ಕೌತುಕಮಿಂತಿದದ್ಭುತಮಿದೊಂದಾಶ್ಚರ್ಯಮಿಾಬೋಧಮಿಾ
ಚದುರೀ ವಾಗ್ವಿಭವಪ್ರಪಂಚಮುಬಲಾಸಂದೋಹದೊಳ್ ಮುನ್ನಮಾ
ಗದುದಿನ್ನೆಯ್ದುದುದೀಗಳಿಲ್ಲದುದು ಪೇೞ್ ಕನ್ಯೆ ತಾನೆಂದು ಪು
ಟ್ಟಿದಳೆಂದೋದಿಳೆಂದು ಕಲ್ತಳೋ ಕಳಾಕೌತೂಹಳಾಳಾಪಮಂ ‖

ನಾಗಶ್ರೀಯ ವೇದಪಠನ ವೈಖರಿಯನ್ನು ವರ್ಣಿಸಿರುವ ಈ ಪದ್ಯಗಳಲ್ಲಿ ಕವಿಯ ಶೈಲಿ ಆವೇಶದೊಡನೆ ಮೇಲಕ್ಕೇರಿದೆ. ಇಂಥ ಸಂದರ್ಭಗಳಲ್ಲಿ ಅದಕ್ಕೆ ಸತ್ವವುಂಟಾಗುತ್ತದೆ. ದೈವಪ್ರೇರಿತ ವಾಗ್ವಿಜೃಂಭಣೆಯಾಗಲಿ, ಮಹಿಮೆ ಯಾಗಲಿ ಭವ್ಯತೆಯಾಗಲಿ ಧ್ವನಿಶಕ್ತಿಯಾಗಲಿ ಅವನ ಶೈಲಿಯಲ್ಲಿ ಕಾಣುತ್ತಿಲ್ಲ. ಆ ಎತ್ತರಕ್ಕೆ ಅದು ಏರದೆ ತೀರ ಕೆಳಕ್ಕೂ ಬೀಳದೆ ಮಧ್ಯಮಟ್ಟದಲ್ಲೆ ಸಾಮಾನ್ಯ ವಾಗಿ ಅದರ ವಿಹಾರವೆಲ್ಲ; ಆ ಮಟ್ಟದಿಂದ ಕೆಲವು ವೇಳೆ ಕೊಂಚ ಮೇಲಕ್ಕೆ ಚಿಮ್ಮುವುದೂ ಉಂಟು. ಸಾಧಾರಣವಾಗಿ ಸತ್ಕವಿಯ ಶೈಲಿಗೆ ಇರಬೇಕಾದ ಗುಣ ಗಳು ಅಲ್ಲಿವೆ. ಕವಿಯ ವ್ಯಕ್ತಿತ್ವವನ್ನು ಇವು ಪ್ರತಿಬಿಂಬಿಸುತ್ತವೆ.

ಅವನ ಮನೋಧರ್ಮದ ಮುಖ್ಯವಾದ ಲಕ್ಷಣ ಸರಳತೆ. ಅವನು ಅಲ್ಲಲ್ಲಿ ಮಾಡಿರುವ ಜಿನಸ್ತುತಿ ಹೃತ್ಪೂರ್ವಕವಾಗಿದೆ:

ಕಿವಿಗಳ್ ನಿನ್ನ ಮೃದೂಕ್ತಿಯಂ ಬಯಸಿ ಕೇಳುತ್ತಿರ್ಕೆ ಕಣ್ಗಳ್ ಮಹೋ
ತ್ಸವದಿಂ ನಿನ್ನನೆ ನೋಡುತಿರ್ಕೆ ಸಲೆ ಕೈಗಳ್ ನಿನ್ನ ಪಾದಾರವಿಂ
ದವನೋತರ್ಚಿಸುತಿರ್ಕೆ ಸಂಪಮನವೆಂದುಂ ನಿನ್ನ ದಿವ್ಯಸ್ವರೂ
ಪವನಾರಾಧಿಸುತಿರ್ಕೆ ವಿಶ್ರುತ ವಿನೇಯ ಸ್ವಾರ್ಥ ಚಿಂತಾಮಣೀ ॥
ಮುನ್ನೆಂದುಂ ನಿನ್ನನೇನೆಂದಱಿಯದೆ ಮತಿಗೆಟ್ಟಿರ್ದು ದಿಙ್ಮೂಢನಾದೆಂ
ನಿನ್ನಂ ಕಂಡೀಗಳೀಗಳ್ ತಿಳಿದು ತಿಳಿವನಾಂ ಕಂಡು ಕೈಕೊಂಡೆನೆನ್ನಂ
ನಿನ್ನನ್ನಂ ಮಾಡುವನ್ನಂ ಪರಮಜಿನಪತೀ ಚಾರುಚಾರಿತ್ರಮುಂ ನಿ
ಚ್ಚನ್ನಿಚ್ಚಂ ನಿಶ್ಚಳಂ ಮಾಡೆನಗೆ ಕರುಣದಿಂದಂ ತ್ರಿಲೋಕಾಧಿನಾಥಾ ॥

ಈ ಭಕ್ತಿಗೀತೆಯಿಂದಲೂ ಕಾವ್ಯದ ತುಂಬ ಇದಕ್ಕೆ ಹಿನ್ನೆಲೆಯಾಗಿ ಅಡಗಿರುವ ಧರ್ಮಸಾರದಿಂದಲೂ ಶಾಂತಿನಾಥನು 'ಧರ್ಮನಿರ್ಮಲಚಿತ್ತ'ನಾಗಿದ್ದನೆಂದು ಅನು ಭವಕ್ಕೆ ತಿಳಿಯುತ್ತದೆ.

'ಸುಕುಮಾರ ಚರಿತೆ'ಯ ಪಾತ್ರಗಳಲ್ಲಿ ಸುಕುಮಾರನಿಗಿಂತ ಮಿಗಿಲಾಗಿ ಸೂರ್ಯಮಿತ್ರನದು ಕವಿಯ ಮನವನ್ನು ಸೆಳೆದಿರುವಂತೆ ಕಾಣುತ್ತದೆ. ಅದರ ಪರಿ ಚಯ ಎರಡನೆಯ ಆಶ್ವಾಸದಲ್ಲಿ ಮೊದಲಾಗುತ್ತದೆ. ಒಂಭತ್ತನೆಯ ಆಶ್ವಾಸದ ವರೆಗೆ ಕಥೆಯಲ್ಲಿ ಅವನು ವಹಿಸಿದ ಕ್ರಿಯಾಭಾಗವನ್ನೂ ಅವನ ವ್ಯಕ್ತಿತ್ವ ಬೆಳೆದ ರೀತಿಯನ್ನೂ ಸವಿಸ್ತಾರವಾಗಿ ಹೇಳಿದೆ. ಅವನ ಬಾಯಲ್ಲಿ ವಾಸುಪೂಜ್ಯ ತೀರ್ಥಂಕ ರನ ಸ್ತುತಿ ಮಿನುಗಿದೆ; ಅವನಿಗೆ ಕೇವಲ ಜ್ಞಾನ ಬಂದಾಗ ದೇವತೆಗಳು ಬಂದು

ಅವನನ್ನು ಪೂಜೆಮಾಡಿ ಸ್ತೋತ್ರಮಾಡುತ್ತಾರೆ; ಜಿನತತ್ವನಿರೂಪಣೆ ಹೆಚ್ಚಾಗಿ ಅವನಿಂದ ನಡೆದಿದೆ. ಈ ಪ್ರಾಧಾನ್ಯ ಬೇರಾವ ಪಾತ್ರಕ್ಕೂ ಇಲ್ಲ. ಇದಕ್ಕೆ ಕಾರಣ ವೇನಾದರೂ ಇರಬಹುದೆ? ಆ ಪಾತ್ರದ ಮತ್ತು ಕವಿಯ ಮನೋಧರ್ಮಗಳಲ್ಲಿ ಸಾದೃಶ್ಯವಿರಬಹುದೆ? ಸೂರ್ಯಮಿತ್ರನು ಪರಮಪಂಡಿತ, ಸಾಹಿತ್ಯವಿದ್ಯಾಸಿಧಿ, ಕವೀಂದ್ರಾಗ್ರಣಿ, ಚಾರುಭಾಸುರಯಶಸ್ವಿ, ಆಶ್ರಿತಜನಾಧಾರನು, ಸಮಸ್ತಾಧಿಕಾರಿ. ಶಾಂತಿನಾಥನೂ ಹೀಗೆಯೇ ಪಂಡಿತ, ಕವಿ, 'ಕುಂದೇಂದು ಯಶೋಭಾಸುರ', ಬನ ವಸೆಪನ್ನಿಚ್ಛಾಸಿರಕ್ಕೆ ಅರ್ಥಾಧಿಕಾರಿ. ಸೂರ್ಯಮಿತ್ರನು ರಾಜ್ಯಗೃಹಾಧಿಪತಿ ಸುಬಲ ಮಹಾರಾಜನ 'ರಾಜ್ಯಲಕ್ಷ್ಮೀ ಸಮುದ್ಧರಣ ಕರಣ ಪರಿಣತಾಂತಃಕರಣ' ನಾಗಿದ್ದರೆ ಶಾಂತಿನಾಥನೂ ಬನವಾಸಿಯ ಲಕ್ಷ್ಮನೃಪನಲ್ಲಿ 'ಕಾರ್ಯಧುರಂಧರನೂ ತದ್ರಾಜ್ಯ ಸಮುದ್ಧರಣನೂ'ಆಗಿದ್ದನು. ಸೂರ್ಯಮಿತ್ರನು 'ಜಿನಶಾಸನದೀಪಕ'ನಾದರೆ ಶಾಂತಿನಾಥನೂ 'ಪರಮಜಿನ ಮತಾಂಭೋಜಿನೀರಾಜಹಂಸ.' ಈ ಸಾದೃಶ್ಯಗಳನ್ನು ಪರಿಶೀಲಿಸಿದರೆ ಶಾಂತಿನಾಥನು ಸೂರ್ಯಮಿತ್ರಪಾತ್ರದೊಡನೆ ತನ್ನನ್ನು ಸಮೀಕರಿಸಿ ಕೊಂಡಿರುವಂತೆ ಊಹಿಸಬಹುದು. ಸ್ವಕೀಯ ಧರ್ಮಾನುರಾಗವನ್ನೂ ಭಕ್ತಿಭಾವ ವನ್ನೂ ಜಿನಶಾಸ್ತ್ರಪ್ರವಚನ ಪರಿಣತಿಯನ್ನೂ ಮೋಕ್ಷಗಾಮಿಯಾಗಬೇಕೆಂಬ ತನ್ನಾ ಕಾಂಕ್ಷೆಯನ್ನೂ ಆ ಪಾತ್ರದ ಮೂಲಕ ಶಾಂತಿನಾಥನು ವ್ಯಕ್ತಪಡಿಸಿಕೊಂಡಿರುವ ನೆಂದು ತೋರುತ್ತದೆ.*

ಇದುವರೆಗೆ 'ಸುಕುಮಾರ ಚರಿತ್ರೆ'ಯನ್ನು ಹಲವು ದೃಷ್ಟಿಗಳಿಂದ ವಿಮರ್ಶಿಸಿ ನೋಡಿದ್ದಾಯಿತು. ಅದರಲ್ಲಿ ಕಾವ್ಯಧರ್ಮವೂ ಧರ್ಮವೂ ಹೇಗೆ ನೆಲಸಿವೆಯೆಂಬು ದನ್ನೂ ಜಿನಧರ್ಮದಲ್ಲಿರುವ ಸಮಸ್ತ ಮಾನವ ಸಾಧಾರಣಾಂಶಗಳು ಹೇಗೆ ಕಾವ್ಯ ಪ್ರೇರಕವಾಗಿವೆಯೆಂಬುದನ್ನೂ ಅದರ ಸೊಗಸನ್ನೂ ಕಾಣಿಸಿದೆ. ಮೂಲವನ್ನು ಬಳಸಿಕೊಳ್ಳುವುದರಲ್ಲೂ ಪಾತ್ರಗಳ ಸ್ವಭಾವ ಚಿತ್ರಣದ ಮಿತವೈವಿಧ್ಯದಲ್ಲೂ ಸನ್ನಿವೇಶ ನಿರ್ಮಾಣದಲ್ಲೂ ಪ್ರಕಟವಾಗಿರುವ ಕವಿಶಕ್ತಿಯಲ್ಲಿ ಔಚಿತ್ಯ, ಸ್ವಾತಂತ್ರ್ಯ ಸಹಜತೆ ರಸಿಕತೆಗಳು ಹೇಗೆ ಮೈದೋರಿವೆಯೆಂಬುದನ್ನೂ ಹೇಳ ಲಾಯಿತು. ಇವುಗಳನ್ನೆಲ್ಲಾ ಭಾವುಕತನದಿಂದ ಕಂಡರೆ "ಸುಕರ ರಸಭಾವದಿಂ

---

* ಇಲ್ಲಿರುವ ಊಹೆಯಲ್ಲಿ ಸತ್ಯಾಂಶವಿದ್ದರೆ ಶಾಂತಿನಾಥ ತನ್ನ ಕಾವ್ಯಬರೆದದ್ದು ತಾನು ಲಕ್ಷ್ಮಣರಾಜನ ಆಶ್ರಿತನಾದ ಮೇಲೆ, ಮುಂಚೆ ಅಲ್ಲ ಎಂದು ಒಪ್ಪಬೇಕಾಗುತ್ತದೆ. ಈ ದೃಷ್ಟಿಯಿಂದ ಈ ಪೀಠಿಕೆಯ viii ಪುಟದಲ್ಲಿರುವ ಎರಡನೆಯ ಅನುಮಾನವನ್ನು ಬಿಡಬೇಕಾಗುತ್ತದೆ.

ವರ್ಣಕದಿಂ ತತ್ತ್ವಾರ್ಥನಿಚಯದಿಂ ಸೂಕ್ತಮೆನಲ್ ಸುಕುಮಾರ ಚರಿತಮಂ ಪೇೞ್ದ ಕವೀಂದ್ರ”ನು ಶಾಂತಿನಾಥನೆಂಬ ಮಾತು ಯಥಾರ್ಥವಾಗಿದೆ ಯೆಂದು ಮನಸ್ಸು ಒಪ್ಪುತ್ತದೆ ಅವನು ಸಹಜ ಕವಿ, ಚತುರ ಕವಿ; ಅವನ ಕಾವ್ಯ ಸತ್ಕಾವ್ಯ. ಅವನು ಪಂಪ ಪೊನ್ನ ರನ್ನರ ಕಾವ್ಯಗಳಿಂದ ಭಾವಗಳನ್ನೂ ಸೂಕ್ತಿಗಳನ್ನೂ ತನ್ನ ಕಾವ್ಯದಲ್ಲಿ ಆಗಾಗ ಬಳಸಿಕೊಂಡಿರುವುದು ಒಂದು ದೃಷ್ಟಿ ಯಿಂದ ಮೆಚ್ಚಬೇಕಾದ ಅಂಶ. ಆ ಹಿರಿಯ ಕವಿಗಳ ನೆನಪಿನೊಡನೆ ಅವರ ಸೂಕ್ತಿಗಳನ್ನು ಒಮ್ಮೆ ಸವಿದ ಹರ್ಷ ವಾಚಕರಲ್ಲಿ ಮತ್ತೆ ಪ್ರಬುದ್ಧವಾಗಿ, ಅವನ ಸ್ವಕೀಯ ಸೂಕ್ತಿಸಂದರ್ಭದೊಡನೆ ಸಮ್ಮಿಳಿತವಾಗಿ ಹೊಸ ಅನುಭವವನ್ನು ಅವರು ಪಡೆಯುವಂತಾಗುತ್ತದೆ.

ಕನ್ನಡಕಾವ್ಯ ಚರಿತ್ರೆಯಲ್ಲಿ ಹನ್ನೊಂದನೆಯ ಶತಮಾನವನ್ನು ‘ಬರಡುಗಾಲ’ ವೆಂದು ಸಾಮಾನ್ಯವಾಗಿ ಹೇಳುವುದುಂಟು. ಚಾವುಂಡರಾಯ II, ದುರ್ಗಸಿಂಹ, ಶ್ರೀಧರಾಚಾರ್ಯ, ಚಂದ್ರರಾಜ ಮುಂತಾದ ಕವಿಗಳ ಕಾಲವದು. ಇವರೆಲ್ಲರೂ ಶಾಸ್ತ್ರ ವನ್ನು ಕಾವ್ಯರೂಪದಲ್ಲಿ ಬರೆದಿರುವರು. ಜೈನ ಪರಿಭಾಷೆಯನ್ನು ಕೊಂಚ ಎಳೆದು ಹೇಳುವುದಾದರೆ ಈ ಗ್ರಂಥಗಳು ‘ದ್ರವ್ಯಕಾವ್ಯ’ಗಳು. ದುರ್ಗಸಿಂಹನ ಗ್ರಂಥದಲ್ಲಿ ಮಾತ್ರ ‘ಭಾವಕಾವ್ಯ’ ಹೆಚ್ಚಿನ ಪ್ರಮಾಣದಲ್ಲಿದೆ. ಆ ಕಾಲದ ಜನತೆಗೆ ನಿತ್ಯೋಪ ಯೋಗಿಯಾದ ಶಾಸ್ತ್ರ ಜ್ಞಾನದ ಅವಶ್ಯಕತೆ ಇದ್ದಿತೆಂದು ಕಾಣುತ್ತದೆ; ಆದ್ದರಿಂದ ಆ ಲೇಖಕರು ಶಾಸ್ತ್ರಗ್ರಂಥಗಳನ್ನು ಬರೆದರು. ಅವುಗಳಲ್ಲಿ ಕಾಣುವ ಧಾರಾಳವಾದ ಪದ್ಯ ಬಂಧದ ವಾಕ್‌ಶ್ರೀಯನ್ನು ನೋಡಿದರೆ, ಅಲ್ಲಿಯೂ ಹಲವು ವೇಳೆ ಮಿಂಚಿರುವ ಉಪಮೆಗಳ ವಿಲಾಸವನ್ನು ಭಾವಿಸಿದರೆ. ಅವರಲ್ಲಿ ಶಕ್ತಿಯ ಅಭಾವವಿದ್ದಂತೆ ಕಾಣು ವುದಿಲ್ಲ; ಜನತೆಯ ರುಚಿ ಅವಶ್ಯಕತೆಗಳ ಪ್ರಭಾವಕ್ಕೆ ಅವರು ಸಿಕ್ಕಿದ್ದರು. ಈ ಕಾರಣದಿಂದಲೂ ಜೈನಪುರಾಣ ಸಂಪ್ರದಾಯಾನುಸರಣೆಯಿಂದಲೂ ‘ಸುಕುಮಾರ ಚರಿತೆ’ಯಲ್ಲಿ ಶಾಸ್ತ್ರಭಾಗಕ್ಕೆ ಸ್ವಲ್ಪ ಮನ್ನಣೆ ದೊರೆಯಿತು. ಶಾಂತಿನಾಥನ ಕೃತಿ ಆ ಕಾಲದ ಕಾವ್ಯಗಳಲ್ಲಿ ಉತ್ಕೃಷ್ಟವಾದುದು; ಅದು ‘ಬರಡುಗಾಲ’ವೆಂಬ ಅಪವಾದ ವನ್ನು ಕೊಂಚಮಟ್ಟಿಗೆ ಹೋಗಲಾಡಿಸುವ ಸತ್ವವನ್ನುಳ್ಳದ್ದು.

ಸುಕುಮಾರನ ಕಥೆಯ ಆವರಣವನ್ನು ಕೊಂಚ ನೋಡಬಹುದು. ಯತಿಗಳು ಅವರ ತಪಶ್ಚರ್ಯೆ, ಅವರಿಗೆ ಸಂಭವಿಸಿದ ಘಟನಾವಳಿಗಳು, ಉಪದೇಶ, ಶ್ರಾವಕರು, ಅವರ ಜಿನಭಕ್ತಿ—ಈ ಮುಂತಾದ ಅಂಶಗಳಿಂದ ಅದು ತುಂಬಿದೆ. ಲೋಕದ ರಾಗ

ದ್ವೇಷಜೀವನದ ಕಥೆಗಳು ಬಂದರೂ ಅವುಗಳ ಪರ್ಯವಸಾನ ವಿರಾಗದಲ್ಲಿ. ಧರ್ಮ ಜೀವನಕ್ಕೂ ಲೌಕಿಕ ಜೀವನಕ್ಕೂ ಇರುವ ಅಂತರವನ್ನು ತೋರಿಸಿ ಶಾಂತಿ ಭಕ್ತಿಗಳಿಂದ ಕೂಡಿದ ಧರ್ಮಜೀವನದ ಮೇಲ್ಮೆಯನ್ನು ಹೇಳುವುದು ಉದ್ದೇಶ. ಸಂನ್ಯಾಸ ಧರ್ಮದ ಆಚಾರ ನಿಯಮಗಳನ್ನೂ ಅವುಗಳ ಫಲಗಳನ್ನೂ ವರ್ಣಿಸುವುದರ ಮೂಲಕ ಆ ಜೀವನಕ್ಕೆ ಪ್ರಾಶಸ್ತ್ಯವನ್ನು ಹೇಳಿದೆ. ಇಂಥ ವಿಷಯಗಳನ್ನೊಳಕೊಂಡ ಸಾಹಿತ್ಯ ರಾಶಿಯನ್ನು ವಿದ್ವಾಂಸರು 'ವಿರಕ್ತಸಾಹಿತ್ಯ' (Ascetic poetry)ವೆಂದು ಕರೆದಿದ್ದಾರೆ. ಇದರಲ್ಲಿ ಈ ತೆರನ ವೈದಿಕ ಬೌದ್ಧ ಜೈನ ಕಥಾನಕಗಳೆಲ್ಲವೂ ಅಡಕವಾಗಿವೆ. ಎಷ್ಟೋ ಕಥೆಗಳು ಅಲ್ಪಸ್ವಲ್ಪ ರೂಪಾಂತರಗಳನ್ನು ಹೊಂದಿದ್ದರೂ ಎಲ್ಲ ಧರ್ಮಗಳಿಗೂ ಅವು ಸಮಾನವಾಗಿವೆ. ಸುಕುಮಾರನ ಕಥೆಗೆ ಸಂವಾದಿಯಾದುವು ವೈದಿಕ ಬೌದ್ಧ ಸಾಹಿತ್ಯಗಳಲ್ಲಿ ಇವೆಯೇ ಎಂಬುದನ್ನು ನೋಡಬೇಕು. ಈ ಕಥೆಯಲ್ಲಿ ಬರುವ ಸೋಮಶರ್ಮ, ಅವನ ಮಕ್ಕಳು ಅಗ್ನಿಭೂತಿವಾಯುಭೂತಿಗಳು, ಸೂರ್ಯಮಿತ್ರ, ನಾಗಶ್ರೀ, ನಾಗಶರ್ಮ ಮುಂತಾದ ಪಾತ್ರಗಳು ಹುಟ್ಟಿನಲ್ಲೂ ವಿದ್ಯೆಯಲ್ಲೂ ಸಂಸ್ಕಾರ ಸಂಪ್ರದಾಯಗಳಲ್ಲೂ ದ್ವಿಜರಾಗಿದ್ದು ಜೈನಧರ್ಮ ಪ್ರಭಾವಕ್ಕೆ ಮನದೆರೆದು ಆ ಮತವನ್ನು ಸ್ವೀಕರಿಸಿದರೆಂದು ವರ್ಣಿತವಾಗಿದೆ. ಪ್ರಾಚೀನಕಾಲದಲ್ಲಿ ಇಂಥ ಮತಾಂತರಗಳು ಬಹುವಾಗಿ ನಡೆಯುತ್ತಿದ್ದುವೆಂದು "ವಿರಕ್ತಸಾಹಿತ್ಯ" ತೋರಿಸುತ್ತದೆ. ಅಂಥ ಯಾವುದೋ ಕಾಲದಲ್ಲಿ ಸುಕುಮಾರನ ಕಥೆ ಹುಟ್ಟಿ ಇದುವರೆಗೆ ಬೆಳೆದುಕೊಂಡು ಬಂದಿದೆಯೆಂದು ಹೇಳಬಹುದು. ಪಂಪನ ತಂದೆ ಅಭಿರಾಮದೇವರಾಯನು ಸೋಮಯಾಜಿಗಳಾದ ವೈದಿಕರ ವಂಶದವನಾಗಿದ್ದು "ಜಿನೇಂದ್ರಧರ್ಮಮೆ ಫಲಂದೊರೆ ಧರ್ಮದೊಳೆಂದು ನಂಬಿ" ಆ ಮತವನ್ನು ಸ್ವೀಕರಿಸಿದ್ದರ ಉಲ್ಲೇಖ ಈಚಿನವನಾದ ಶಾಂತಿನಾಥನ ಗಮನಕ್ಕೆ ಬಂದಿರಬೇಕು. ಇಂಥ ಮತಾಂತರಗಳು ವಿಪುಲವಾಗಿ ನಡೆದದ್ದನ್ನು ಹೇಳುವ ಸುಕುಮಾರನ ಕಥಾನಕವನ್ನು ಅವನು ಎತ್ತಿಕೊಂಡಿರುವುದಕ್ಕೆ ಇದೂ ಒಂದು ಕಾರಣವಾಗಿರಬಹುದು.

## ಕನ್ನಡದ ಇತರ ಸುಕುಮಾರ ಚರಿತೆಗಳು

ಶಾಂತಿನಾಥನ ತರುವಾಯ ಸುಕುಮಾರ ಸ್ವಾಮಿಯ ಕಥೆಯನ್ನು ಹೇಳಿರುವ ಕೆಲವರು ಕನ್ನಡ ಕವಿಗಳುಂಟು. ಆ ಕೃತಿಗಳ ವಿಷಯವನ್ನು ಇಲ್ಲಿ ಬಲ್ಲಂತೆ ಹೇಳಿದೆ:

೧. ಕ್ರಿ.ಶ. ಸು ೧೨೦೦ರಲ್ಲಿದ್ದ ಬಂಧುವರ್ಮನು ತನ್ನ 'ಜೀವಸಂಬೋಧನೆ' ಎಂಬ ಕಾವ್ಯದ ಆರನೆಯ 'ಅಧಿಕಾರ'ದಲ್ಲಿ ಈ ಕಥೆಯನ್ನು ನಿರೂಪಿಸಿದ್ದಾನೆ. ಸುಮಾರು ಐವತ್ತು ಪದ್ಯಗಳಲ್ಲಿ (೨೭—೬೫) ಸಂಗ್ರಹವಾಗಿ ಕಥೆಯನ್ನು ಹೇಳಿದೆ. ಸುಕುಮಾರನ ಜನ್ಮದಿಂದ ಮುಂದಕ್ಕಿರುವ ಕಥೆ ಮಾತ್ರ ಇಲ್ಲಿ ಬರುತ್ತದೆ. ಅವನ ಹಿಂದಿನ ಭವಾವಳಿಯ ಕಥೆ ಇಲ್ಲ; ಅದಕ್ಕೆ ಆನುಷಂಗಿಕವಾಗಿ ಬರುವ ಇತರ ಕಥೆಗಳೂ ಇಲ್ಲ. ಶಾಂತಿನಾಥನ ಕೃತಿಯ ೯ನೆಯ ಆಶ್ವಾಸದಲ್ಲಿ (ಪದ್ಯ ೪೫) ಆರಂಭವಾಗಿ ಹನ್ನೆರಡನೆಯದರ ಕೊನೆಯಲ್ಲಿ ಮುಗಿಯುವ ಕಥಾಭಾಗವನ್ನು ಬಹಳ ಸಂಕ್ಷೇಪಿಸಿ ಬರೆದಿದೆ. ಎರಡನ್ನೂ ಹೋಲಿಸಿ ನೋಡಿದರೆ ಬಂಧುವರ್ಮನು 'ಸುಕುಮಾರ ಚರಿತೆ'ಯ ಕಥಾನುಪೂರ್ವಿಯನ್ನನುಸರಿಸಿರುವುದು ವ್ಯಕ್ತವಾಗುತ್ತದೆ. ಶಾಂತಿನಾಥನ ಪದ್ಯಗಳ ಅಭಿಪ್ರಾಯಾನುವಾದವೂ ಎಷ್ಟೋ ವೇಳೆ ಅದೇ ಪದ ಪ್ರಯೋಗಗಳೂ ಗದ್ಯದಲ್ಲೂ ಪದ್ಯದಲ್ಲೂ ಬಂಧುವರ್ಮನಲ್ಲಿ ಬಂದು ಅವನ ಕೃತಿಗೆ ಮೂಲ 'ಸುಕುಮಾರ ಚರಿತೆ'ಯೆಂಬುದನ್ನು ದೃಢಪಡಿಸುತ್ತದೆ. ಈ ಕವಿಯ ಅನುಕರಣೆ ಶಾಂತಿನಾಥನು ಗಣ್ಯನಾದ ಕವಿಯೆಂಬುದಕ್ಕೆ ಸಾಕ್ಷಿಯಾಗುತ್ತದೆ.

೨. ನಾಗರಾಜನ (ಕ್ರಿ.ಶ. ೧೩೩೧) 'ಪುಣ್ಯಾಸ್ರವ'ವೆಂಬ ಗ್ರಂಥದ ಆರನೆಯ ಆಶ್ವಾಸದಲ್ಲಿ "ಸೂರ್ಯಮಿತ್ರಸುಕುಮಾರ ಕಥೆ" ಎಂಬ ಹೆಸರಿನ ಒಂದು ಕಥೆಯುಂಟು. ಇಲ್ಲಿ ನಾಗಶ್ರೀಯ ಜನ್ಮದಿಂದ ಆರಂಭವಾಗಿ ಪಂಚಾಣುವ್ರತಗಳ ಉಪಕಥೆಗಳನ್ನೊಳಕೊಂಡು ಸೂರ್ಯಮಿತ್ರನಿಂದ ನಾಗಶ್ರೀಯ ಪಾಂಡಿತ್ಯ ಪ್ರಕಟನೆ ಬರುತ್ತದೆ. ಆಮೇಲೆ ಅಗ್ನಿಭೂತಿ ವಾಯುಭೂತಿಗಳ ಕಥಾನುವಾದ ಆರಂಭವಾಗುತ್ತದೆ. ಈ ಕಥೆಯನ್ನು ಸೂರ್ಯಮಿತ್ರ ಚಂದ್ರವಾಹನ ರಾಜನಿಗೆ ಹೇಳುತ್ತಾನೆ. ಇದು ಮುಗಿದ ತರುವಾಯ ಸುಕುಮಾರ ಜನ್ಮದ ಕಥೆ ಬರುತ್ತದೆ. ಇಲ್ಲಿನ ಕಥಾ ಸಂದರ್ಭಗಳಿಗೂ ಶಾಂತಿನಾಥನ 'ಸುಕುಮಾರ ಚರಿತೆ'ಯ ಸಂದರ್ಭಗಳಿಗೂ ಸಾದೃಶ್ಯವೇ ಹೆಚ್ಚಾಗಿದೆ. ವಜ್ರವೀರ್ಯ ಚಂದ್ರವಾಹನನಮೇಲೆ ದಂಡೆತ್ತಿ ಬಂದುದು, ತಕ್ಷಕನು ಸುಳ್ಳಾಡಿದ್ದು, ವಿಜಯಜಿಹ್ವನೆಂಬ ವಾದಿಯ ಕಥೆ, ದಾಯಾದಿ ಸೋವಿಲನಿಗೆ ಮಂತ್ರಿ ಪದವಿ ಆದದ್ದು, ಪರಮಹಂಸನೆಂಬ ನೈಮಿತ್ತಿಕನನ್ನು ಸೂರ್ಯಮಿತ್ರ ಉಂಗುರದ ವಿಚಾರ ಕೇಳಿದ್ದು, ಸುಧರ್ಮನು ವಾರಣಾಸಿಯಲ್ಲಿ ಮುಕ್ತಿಯನ್ನು ಪಡೆದದ್ದು, ಕೌಶಂಬೀ ಪುರದೊಡೆಯ ಅತಿಬಳ

ತನ್ನ ಚಿಕ್ಕಪ್ಪನಾದ ಸುಬಲನನ್ನು ನೋಡಿ ಬಂದು ಸೂರ್ಯಮಿತ್ರನಿಂದ ದೀಕ್ಷೆಪಡೆದದ್ದು, ಅಭಿನಂದನ ಮುನಿಗಳು ಬಂದಾಗ ವೃಷಭಾಂಕ ಹೊಡೆಯಿಸಿದ ಭೇರಿಯ ಸದ್ದು ಯಶೋಭದ್ರೆಗೆ ಕೇಳಿಸಿದ್ದು—ಈ ಸಂದರ್ಭಗಳು, ಶಾಂತಿನಾಥನ 'ಸುಕುಮಾರಚರಿತೆ'ಗೆ ವಿಶಿಷ್ಟವಾದುವು, 'ಪುಣ್ಯಾಸ್ರವ'ದ ಪ್ರಸಕ್ತ ಕಥೆಯಲ್ಲೂ ದೊರೆಯುವುದರಿಂದ ಅದಕ್ಕೆ ಮೂಲ ಶಾಂತಿನಾಥನು ಹೇಳಿರುವ ಕಥೆಯೆಂಬುದು ಸ್ಪಷ್ಟವಾಗುತ್ತದೆ. ಮೂಲದಲ್ಲಿಲ್ಲದಿರುವ ಕೆಲವು ವಿವರಗಳು ಇಲ್ಲಿವೆ; (೧) ಅಗ್ನಿಭೂತಿ ವಾಯುಭೂತಿಗಳು ವಿದ್ಯೆ ಕಲಿತು ಬಂದಾದ ಮೇಲೆ "ವಿಜಯ ಜಿಹ್ವನಂ ವಾದದಿಂ ಗೆದ್ದು ಪೂರ್ವವೃತ್ತಿಯಂ ಸ್ವೀಕರಿಸಿ"ದರು (೨) ಸುಬಲರಾಜನು ತನ್ನ ಪುರೋಹಿತ ಸೂರ್ಯಮಿತ್ರನಿಗೆ ಉಂಗುರ ಕೊಟ್ಟದ್ದು ಮಜ್ಜನಸಮಯದಲ್ಲಿ "ತನ್ನ ಕೈಯ ಪಜ್ಜೆಯ ಮುದ್ರಿಕೆಯಂ ಕೆಲದೊಳಿರ್ದ ಸೂರ್ಯಮಿತ್ರನ ಕೈಯೊಳ್ ಎಣ್ಣೆ ತಾಗಿದೊಡೆ ಕೆಡುವುದೆಂ"ಬ ಕಾರಣದಿಂದ (೩) ಸೂರ್ಯಮಿತ್ರ ಉಂಗುರವನ್ನು ಕಳೆದುಕೊಂಡದ್ದು 'ಭೋಜನಮಂ ಮಾಡಿ' ತನ್ನ ಮನೆಯ ಹಿಂದಣ ತಾವರೆಗೊಳದಲ್ಲಿ ಕೈತೊಳೆದುಕೊಂಡಾಗ (೪) ಯಶೋಭದ್ರೆ "ಗಂಡನಜೀವಪನೆಂದು ನೆಲಮಾಳಿಗೆಯೊಳ್ ಸುಖಪ್ರಸೂತೆಯಾಗಿ" ಸುಕುಮಾರನನ್ನು ಪಡೆದಳು; ಆ ಮಗುವಿನ ಮೈಲಿಗೆ ಬಟ್ಟೆಗಳನ್ನು ಒಗೆಯುತ್ತಿದ್ದುದನ್ನು ನೋಡಿದ ಒಬ್ಬ ಪಾರ್ವ ಈ ವಿಷಯವನ್ನು ಅವಳ ಗಂಡ ಸೂರದತ್ತನಿಗೆ ತಿಳಿಸುತ್ತಾನೆ. (೫) ರತ್ನಗಂಬಳಿಯನ್ನು ಯಶೋಭದ್ರೆ ಕೊಂಡು ಅದನ್ನು ಮೂವತ್ತೆರಡು ಚೂರಾಗಿಸಿ ತನ್ನ ಮೂವತ್ತೆರಡು ಸೊಸೆಯರಿಗೆ ಮೆಟ್ಟುವ ಹಾವುಗೆಗಳನ್ನು ಮಾಡಿಸಿದ ವಿಚಾರ ವೃಷಭಾಂಕನಿಗೆ ತಿಳಿದದ್ದು ಹೀಗೆ: ಸುದಾಮೆಯೆಂಬ ಸೊಸೆ ಆ ಹಾವುಗೆಗಳನ್ನು ಮೆಟ್ಟಿಕೊಂಡು ಸುಕುಮಾರನ "ಉಪ್ಪರಿಗೆಯ ಪಶ್ಚಿಮ ದ್ವಾರದ ಮೊಗಸಾಲೆಯೊಳ್ ಮೆಟ್ಟಂ ಕಳೆದು ಕುಳ್ಳಿರ್ದವಂ ಮಱೆದು ಒಳಗಂ ಪುಗುವಾ ಸಮಯದೊಳ್

> ಗಗನ ಗತಿಯಲ್ಲಿ ತಿರುಗುವ
> ಖಗರಾಜಂ ಕಂಡು ಪಿಸಿತಮೆಂದದ ಮನದೊಳ್
> ಬಗೆದೆತ್ತಿಕೊಂಡು ಪೋಪುದು
> ಮೃಗಶಾಬೇಕ್ಷಣೆಯ ವಾಮ ಚರಣದ ಮೆಟ್ಟಂ ||

ಆ ಖಗರಾಜನು ಅದನ್ನು ವೃಷಭಾಂಕನ ಅರಮನೆಯಲ್ಲಿ ಬೀಳಿಸುತ್ತದೆ. ಇದನ್ನು ಕಂಡು ವೃಷಭಾಂಕನಿಗೆ ಸುಕುಮಾರನನ್ನು ನೋಡುವ ಆಸೆಯುಂಟಾಗುತ್ತದೆ.

ಈ ವ್ಯತ್ಯಾಸಗಳನ್ನು ನಾಗರಾಜನೇ ಮಾಡಿಕೊಂಡಿಲ್ಲ. ಅವನ 'ಪುಣ್ಯಾಸ್ರವ'ಕ್ಕೆ ಮೂಲ ರಾಮಚಂದ್ರ ಮುಮುಕ್ಷುವಿನಿಂದ ಸಂಸ್ಕೃತದಲ್ಲಿ ರಚಿತವಾದ "ಪುಣ್ಯಾಸ್ರವ ಕಥಾಕೋಶ" ಎಂಬ ಗ್ರಂಥ. ಅದರಲ್ಲಿ ಈ ವಿವರಗಳೆಲ್ಲ ಇವೆ. ಮೇಲಿನ ವ್ಯತ್ಯಾಸಗಳಿಗೆ ಕರ್ತೃ ರಾಮಚಂದ್ರ ಮುಮುಕ್ಷುವೆಂದು ಹೇಳಬಹುದು.

(೩) ಆದಿದೇವನ 'ಸುಕುಮಾರ ಚರಿತೆ' ಎಂಬೊಂದು ಸಾಂಗತ್ಯ ಗ್ರಂಥ ದೊರೆಯುತ್ತದೆ.* ಇದು ರಚಿತವಾದ ಕಾಲ ಸುಮಾರು ಕ್ರಿ.ಶ. ೧೫೦೦ ಇರಬಹುದು. ಅಗ್ನಿಭೂತಿ ವಾಯುಭೂತಿಗಳ ಜನ್ಮದಿಂದ ಕಥೆ ಪ್ರಾರಂಭವಾಗುತ್ತದೆ. ವೈನಾಕನೆಂಬ ಕಳ್ಳ "ಕನ್ನೆಯ ಬಂಟನ ವೃದ್ಧವಧೂ" ಕಥೆಗಳನ್ನು ಚಿತ್ರಪಟದಲ್ಲಿ ಬರೆದು (ಪದ್ಯ 497) ಬತ್ತವನ್ನು ಕದಿಯುತ್ತಿದ್ದ ಇಲ್ಲಿನ ಕಥಾ ಪ್ರಸಂಗ 'ವಡ್ಡಾರಾಧನೆ'ಯ ಸುಕುಮಾರನ ಕಥೆಯಲ್ಲಿ ಇದೆಯೇ ಹೊರತು ಶಾಂತಿನಾಥನ ಗ್ರಂಥದಲ್ಲಿಲ್ಲ; ಸಂಸ್ಕೃತ ಕಥಾಕೋಶದಲ್ಲೂ ಇಲ್ಲ. ಆದ್ದರಿಂದ 'ವಡ್ಡರಾಧನೆ'ಯ ಕಥೆ ಆದಿದೇವನಿಗೆ ಪರಿಚಿತವಾಗಿರಬೇಕು. ಹದ್ದು ಹಾವುಗೆಯನ್ನು ಹೊತ್ತುಕೊಂಡು ಹೋಗಿ ವೃಷಭಾಂಕನ ಅರಮನೆಯಲ್ಲಿ ಹಾಕಿತೆಂಬ ಕಥೆ, "ಪುಣ್ಯಾಸ್ರವ"ದಲ್ಲಿ ಮಾತ್ರ ಇರುವುದು, ಇಲ್ಲಿಯೂ ಕಾಣುವುದರಿಂದ (ಪದ್ಯ 854-856) ಆದಿದೇವನು ನಾಗರಾಜನ ಗ್ರಂಥವನ್ನು ಅವಲೋಕಿಸಿರಬೇಕು. ಯಶೋಭದ್ರೆಯ ಶೃಂಗಾರ ವಿಲಾಸಗಳ ವರ್ಣನೆ, ಅವಳ ಪುತ್ರ ದೋಹಳ, ಗರ್ಭ ವರ್ಣನೆ, ಸುಕುಮಾರನ ಮದುವೆ, ವಿಲಾಸಭೋಗಗಳು—ಇವುಗಳ ವರ್ಣನೆ ಆದಿದೇವನ ಗ್ರಂಥದಲ್ಲಿ, ಶಾಂತಿನಾಥನ ಕೃತಿಯಲ್ಲಿ ಮಾತ್ರವೇ ಇರುವುದಕ್ಕಿಂತಲೂ ವಿಸ್ತಾರವಾಗಿರುವುದರಿಂದ ಅವನ್ನು ಅವನು 'ಸುಕುಮಾರ ಚರಿತೆ'ಯ ಆ ವರ್ಣನೆಗಳ ಮಾದರಿಯಲ್ಲಿ ರಚಿಸಿರಬೇಕು. ಅವನಿಗೆ ಶಾಂತಿನಾಥನ ಕೃತಿಯ ಪರಿಚಯವೂ ಉಂಟಾಗಿದ್ದಿರಬೇಕು. ಆದ್ದರಿಂದ ಆದಿದೇವನ 'ಸುಕುಮಾರ ಚರಿತೆ'ಯು ಮೇಲ್ಕಂಡ ಮೂರು ಕಥೆಗಳ ಬೆರಕೆಯಿಂದ ಆಗಿರುವ ಮಿಶ್ರಕಥೆಯೆಂದು ಹೇಳಬಹುದು.

ಕನ್ನಡ ಸುಕುಮಾರ ಚರಿತೆಗಳ ಪರಸ್ಪರ ಸಂಬಂಧವನ್ನು ಕೆಳಗೆ ತೋರಿಸಿದೆ.

---

* ಜಯಕರ್ಣಾಟಕ ೧೦–೪, ಪು ೩೧೧–೩೧೨.

ಅನಿರ್ದಿಷ್ಟಮೂಲ

ಸುಕುಮಾರ ಕಥೆ (ವಡ್ಡಾರಾಧನೆ)

ಸುಕುಮಾರಚರಿತೆ (ಶಾಂತಿನಾಥ)

ಸುಕುಮಾರ ಕಥೆ (ಬಂಧುವರ್ಮ)

ಸುಕುಮಾರ ಕಥೆ*
ಸಂಸ್ಕೃತ ಪುಣ್ಯಾಸ್ರವ
(ರಾಮಚಂದ್ರ ಮುಮುಕ್ಷು)

ಸುಕುಮಾರ ಕಥೆ
(ಕನ್ನಡ ಪುಣ್ಯಾಸ್ರವ, ನಾಗರಾಜ)

ಸುಕುಮಾರ ಚರಿತೆ (ಸಾಂಗತ್ಯ)
(ಆದಿದೇವ)

---

* ಕನ್ನಡ 'ಪುಣ್ಯಾಸ್ರವ"ವನ್ನು ಬರೆದಿರುವ ನಾಗರಾಜನು "ಸಗರದ ನಗರದವರು ಕೇಳಿಕೊಳ್ಳಲು ಆ ಗ್ರಂಥವನ್ನು ಸಂಸ್ಕೃತದಿಂದ ಕನ್ನಡಿಸಿ ಬರೆದಂತೆ" ಹೇಳಿದ್ದಾನೆ. ಆ ಸಂಸ್ಕೃತ ಗ್ರಂಥ ರಾಮಚಂದ್ರನ "ಪುಣ್ಯಾಸ್ರವ"ವೇ ಆಗಿರಬೇಕು. ಇದರಲ್ಲಿ ಒಟ್ಟು ೫೭ ಕಥೆಗಳನ್ನು ೬ ಅಷ್ಟಕಗಳಲ್ಲಿ ಪ್ರತಿಪಾದಿಸಿದೆ. ರಾಮಚಂದ್ರನು ಕೆಲವು ಕಥೆಗಳಿಗೆ ಆಕರಗಳನ್ನು ಹೇಳಿದ್ದಾನೆ. ಶ್ರೇಣಿಕನ ಕಥೆಯ ಕೊನೆಯಲ್ಲಿ "ಭ್ರಾಜಿಷ್ಣ್ವಾರಾಧನಾಶಾಸ್ತ್ರೇ ಕರ್ನಾಟ ಟೀಕಾಕಥಿತ ಕ್ರಮೇಣೋಲ್ಲೇಖಮಾತ್ರಂ ಕಥಿತೇಯಂ ಕಥಾ" ಎಂದೂ ನಂದಿಮಿತ್ರನ ಕಥಾರಂಭದಲ್ಲಿ "ಅಸ್ಯಕಥಾ ಭದ್ರಬಾಹು ಚರಿತ್ರೇಂತರ್ವರ್ತತ ಇತಿ ತನ್ನಿರೂಪ್ಯತೇ" ಎಂದೂ ಹೇಳಿದ್ದಾನೆ. ಇವೆರಡು ಕಥೆಗಳಿಗೆ ಕನ್ನಡದ 'ವಡ್ಡಾರಾಧನೆ' ಆಕರವೆಂದು ತೋರುತ್ತದೆ. ಹೀಗೆಯೇ ಅವನ ಸುಕುಮಾರ ಕಥೆಗೆ ಮೂಲ ಶಾಂತಿನಾಥನ ಗ್ರಂಥವೆಂದು "ಅನಯೋಃ ಕಥೆ ಸುಕುಮಾರ ಚರಿತ್ರೆ ಯಾತ ಇತಿ ತತ್‌ಕಥ್ಯತೇ" ಎಂಬ ಅವನ ಆ ಕಥಾರಂಭವಾಕ್ಯದಿಂದ ಊಹಿಸಬಹುದು. ಶಾಂತಿನಾಥನಿಗೂ ನಾಗರಾಜನಿಗೂ ನಡುವೆ ರಾಮಚಂದ್ರನಿದ್ದು ತನ್ನ ಗ್ರಂಥರಚನೆಯನ್ನು ಮಾಡಿರಬೇಕು; ಕ್ರಿ ಶ ೧೦೬೮–೧೩೩೧ರ ಅವಧಿಯಲ್ಲಿ ಅವನು ಯಾವಾಗಲೋ ಇದ್ದಿರಬೇಕು. ಇವನಿಗೆ ಕನ್ನಡನುಡಿಯ ಮತ್ತು ಸಾಹಿತ್ಯದ ಪರಿಚಯ ವಿಶೇಷವಾಗಿ ಇದ್ದಂತೆ ತೋರುತ್ತದೆ. ಇವನ ಗ್ರಂಥವನ್ನು ಹಿಂದಿಗೆ ಭಾಷಾಂತರಿಸಿರುವ ಪಂಡಿತ ನಾಥೂಲಾಲ ಪ್ರೇಮಿಾ ಅವರು "ಶ್ರೀರಾಮಚಂದ್ರ ಮುಮುಕ್ಷುನೇ ಶಾಯದ ಯಹ ಗ್ರಂಥ ಕರ್ಣಾಟಕೀಯ ಭಾಷಾಸೇ ಉದ್ಧೃತ ಕಿಯಾಹೈ" ಎಂಬ ಮಾತುಗಳಲ್ಲಿ ಇದೇ ಅಭಿಪ್ರಾಯವನ್ನು ಸೂಚಿಸಿದ್ದಾರೆ.

ಹೀಗೆಯೇ ಸಂಸ್ಕೃತ ಪ್ರಾಕೃತ ಮುಂತಾದ ಭಾರತೀಯ ಭಾಷೆಗಳಲ್ಲಿರುವ ಸುಕುಮಾರನ ಕಥೆಗಳನ್ನು ನಾನಾ ಶಾಖೆಗಳಾಗಿ ವಿಂಗಡಿಸುವುದು ಆ ಕಥೆಗಳನ್ನೆಲ್ಲ ನೋಡಿದಮೇಲೆ ಸಾಧ್ಯವಾಗುತ್ತದೆ. ಆ ಯಾವುದಾದರೂ ಶಾಖೆಯಲ್ಲಿ ಕನ್ನಡದ್ದು ಉಪಶಾಖೆಯಾಗಿರಬಹುದು; ಇಲ್ಲವೇ ಸ್ವತಂತ್ರಶಾಖೆಯಾಗಿರಬಹುದು. ಈ ಕಾರ್ಯವನ್ನು ಬಲ್ಲವರು ಮುಂದುವರಿಸಬೇಕಾಗಿದೆ.

## ವ್ಯಾಕರಣ ಮತ್ತು ಛಂದಸ್ಸು

'ಸುಕುಮಾರ ಚರಿತ'ದ ಭಾಷೆ ಹಳಗನ್ನಡ. ಕೇಶಿರಾಜನು ವರ್ಣಿಸಿರುವ ಅದರ ಲಕ್ಷಣಗಳನ್ನೆಲ್ಲಾ ಈ ಕಾವ್ಯದ ಹಳಗನ್ನಡದಲ್ಲಿ ಕಾಣಬಹುದು. ಪಂಪಾದಿಗಳ "ಸುಮಾರ್ಗ"ವನ್ನು ಮೇಲ್ಪಂಕ್ತಿಯಾಗಿಟ್ಟುಕೊಂಡಿರುವ ಶಾಂತಿನಾಥನ ಭಾಷೆ ಆ ಕವಿಗಳ ಭಾಷೆಯಂತೆಯೇ ಇದೆ. ಅವನದೂ "ಸುಮಾರ್ಗ"ವೆಂದೇ ಹೇಳಬಹುದು. ಒಂದೆರಡು ವೈಲಕ್ಷಣ್ಯಗಳನ್ನು ಇಲ್ಲಿ ತೋರಿಸಿದೆ.

೧) ವರ್ತಮಾನಕಾಲದ ಕೃತ್ತು ಲಿಂಗವಾಗುವುದಿಲ್ಲವೆಂದು ಕೇಶಿರಾಜನ ಅಭಿಪ್ರಾಯ (ಸೂತ್ರ ೭೩); ಕೃತ್ತಾಗದವರ್ಕೆ—ನೋಡಿದಪಂ, ಮಾಡಿದಪಂ ಎಂಬ ಉದಾಹರಣೆಗಳನ್ನೂ ಕೊಟ್ಟಿದ್ದಾನೆ. "ಇರ್ದಪರಿರ್ದಲ್ಲಿಯೆ ನುಡಿದರ್ ಸಭೆಗೆ ಸೋಮಶರ್ಮಾತ್ಮಜರಂ" (ಸು. ಚ. ೨-೨೨) ಎಂಬಲ್ಲಿ ಶಾಂತಿನಾಥನು 'ಇರ್ದಪ' ಎಂಬ ವರ್ತಮಾನ ಕೃತ್ತನ್ನು ಪ್ರಕೃತಿಯನ್ನಾಗಿ ಮಾಡಿಕೊಂಡು ಅದಕ್ಕೆ ಆರ್ ಎಂಬ ಬಹುವಚನದ ಪ್ರತ್ಯಯವನ್ನು ಸೇರಿಸಿ 'ಇರ್ದಪರ್' ಎಂದು ಪ್ರಥಮಾವಿಭಕ್ತಿಯನ್ನು ಮಾಡಿಕೊಂಡಿದ್ದಾನೆ. ಮೇಲೆ ಕೊಟ್ಟಿರುವ ಪದ್ಯಭಾಗದ ಪಾಠ ಸರಿಯಾಗಿದ್ದರೆ ಮಾತ್ರ ಹೀಗಾಗುತ್ತದೆ. ಭಟ್ಟಾಕಳಂಕನು ಕೇಶಿರಾಜನ ಅಭಿಪ್ರಾಯವನ್ನು ಒಪ್ಪಿರುವಂತೆ ಕಾಣುವುದಿಲ್ಲ. ಸೂತ್ರ 447ಕ್ಕೆ ನೋಡಿದಪನಂ, ಮಾಡಿದಪಂಗೆ ಎಂಬ ಪ್ರಯೋಗಗಳನ್ನು ಸೂಚಿಸಿರುವುದೇ ಈ ಅನುಮಾನಕ್ಕೆ ಕಾರಣ. ಭಟ್ಟಾಕಳಂಕನ ಗರಡಿಯಲ್ಲಿ ಪಳಗಿದ್ದ ಬಸವಪ್ಪಶಾಸ್ತ್ರಿ, ಅಯ್ಯಾಶಾಸ್ತ್ರಿ ಮುಂತಾದ ಈಚಿನ ಕವಿಗಳು ವರ್ತಮಾನ ಕೃಲ್ಲಿಂಗವನ್ನು ಬಳಸಿದ್ದಾರೆ.

೨) ಸಂಸ್ಕೃತದ ಅವ್ಯಯಗಳು ಸಮಾಸವನ್ನು ಪಡೆದಲ್ಲದೆ ಪೃಥಕ್ಕಾಗಿ ಕನ್ನಡಕ್ಕೆ ಲಿಂಗವಾಗಲಾರವೆಂದು ಕೇಶಿರಾಜ ಹೇಳುತ್ತಾನೆ (ಸೂ. ೮೧). ಇಹಾದಯಃ (ಸೂತ್ರ ೯) ಎಂಬ ಸೂತ್ರಕ್ಕೆ ಪ್ರಯೋಗವಾಗಿ ಇಹ ಅಮುತ್ರ ಮುಂತಾದ ಅವ್ಯಯಗಳನ್ನೊಳಕೊಂಡ ಇಹಾದಿರಾಕೃತಿಗಣ ನಿರ್ದೇಶವನ್ನು ಭಟ್ಟಾಕಳಂಕ

ಮಾಡಿ ಸಂಸ್ಕೃತದಲ್ಲಿ ಅವು ಲುಪ್ತವಿಭಕ್ತಿಗಳಾಗಿದ್ದರೂ ಕನ್ನಡ ಭಾಷೆಯಲ್ಲಿ ಅವು ವಿಭಕ್ತಿ ಸಮೇತವಾಗಿಯೇ ಕಾಣುತ್ತವೆಂದೂ ಅವಕ್ಕೆ ಲಿಂಗತ್ವವುಂಟೆಂದೂ ಕವಿ ಪ್ರಯೋಗಾಧಾರದಿಂದ ಸಾಧಿಸಿದ್ದಾನೆ. ಇಂಥ ಒಂದು ಪ್ರಯೋಗವನ್ನು “ ನಮಗಿಹಂ ಪರಮುಂಟೇ ” ಎಂಬ ಪದ್ಯಭಾಗದಲ್ಲಿ (೨—೬೭) ಶಾಂತಿನಾಥನು ಕಾಣಿಸಿರುವನು.

(೩) ಛಂದಸ್ಸಿನ ವಿಷಯವಾಗಿದ್ದರೂ ವ್ಯಾಕರಣಾಂಶವೆಂದು ಭಾವಿಸಿ ಕೇಶಿರಾಜನು ಪ್ರತಿಪಾದಿಸಿರುವ ಱಕಾರ ಕುಳಕ್ಷಳಗಳ ಪ್ರಾಸವಿಷಯವನ್ನು ನೋಡಬಹುದು. ಱಕಾರ ಪ್ರಾಸದಲ್ಲಿ ಕುಳಕ್ಷಳಗಳಿಗೆ ಎಡೆಯಿಲ್ಲವೆಂದು ಕೇಶಿರಾಜನ ಮತ. ಇವುಗಳ ಮಿಶ್ರಪ್ರಾಸ ಸಲ್ಲದು. (ಸೂತ್ರ ೧೯). ಈ ನಿಯಮವನ್ನು ಸಾಧಾರಣವಾಗಿ ಶಾಂತಿನಾಥನಲ್ಲಿ ಕಾಣಬಹುದಾದರೂ ಕೆಲವೆಡೆ ಅಪವಾದಗಳಿವೆ: ೨-೨೯, ೩-೪೧, ೪-೯ ೧೦, ೫-೮, ೬-೪೧, ೧೧-೭, ೧೧-೩೦, ೩೫—ಇವು ಕೆಲವು ಉದಾಹರಣೆಗಳು ಮಿಶ್ರಪ್ರಾಸಕ್ಕೆ. ಱಕಾರ ರೇಫಗಳ ಮಿಶ್ರಪ್ರಾಸ ಸರಿಯಲ್ಲ; ಶಾಂತಿನಾಥನು ಈ ನಿಯಮವನ್ನು ಎಲ್ಲಿಯೂ ತಪ್ಪಿಲ್ಲ. ಕೇಶಿರಾಜನು ಸೂ ೨೪ರಲ್ಲಿ ಱಕಾರಸಂಯುಕ್ತದ ಪ್ರಾಸಕ್ಕೆ ರೇಫಸಂಯುಕ್ತವನ್ನು ಹಿರಿಯರು ಬಳಸಿದ್ದಾರೆ; ಆ ರೇಫ ಸಂಯುಕ್ತವನ್ನು ಱಕಾರವಾಗಿ ಉಚ್ಚರಿಸುವುದು ಆಗದು; ಅದು ನಿಸರ್ಗವಾಗಿ ಶುದ್ಧವೆನ್ನುತ್ತಾನೆ.* ರೇಫ ಸಂಯುಕ್ತವನ್ನು ಱಕಾರ ಸಂಯುಕ್ತವನ್ನಾಗಿ ಉಚ್ಚರಿಸಬಾರದೆಂಬ ಕೇಶಿರಾಜನ ನಿಷೇಧವನ್ನು ನೋಡಿದರೆ ಅವನ ಕಾಲದಲ್ಲಿ ಕೆಲವರು ಹಾಗೆ ಉಚ್ಚರಿಸುತ್ತಿದ್ದಿರಬೇಕೆಂದು ಕಾಣುತ್ತದೆ. ಈ ತೆರದ ಉಚ್ಚಾರವಿದ್ದುದಕ್ಕೆ “ ಸುಕುಮಾರ ಚರಿತೆ ”ಯ ಈ ಕೆಳಗಿನ ಪದ್ಯ (೧೨-೧೩) ಒಂದು ನಿದರ್ಶನ.

ಚುಱ್ಚಿದ ತೆಱದಿಂ ಪುಸಿಗಳ
ನುಱ್ಚುವನಿವನೆಂದು ಕಾಯ್ದು ಕರ್ಬುನದಿಂದಂ
ಚುಱ್ಚಿ ಪೆಡತಲೆಯ ತೂಂತಿಂ
ದುಱ್ಚುವರಿಕ್ಕುಱಿಸಿನಾರಕರ್ನಾಲಗೆಯಂ ।

ಇಲ್ಲಿ ಚುರ್ಚು, ಉರ್ಚು ಎಂಬರೇಫ ಸಂಯುಕ್ತಗಳಿಗೆ ಬದಲಾಗಿ ಕೈಬರಹದ ಪ್ರತಿಗಳಲ್ಲಿ ಳಕಾರ ಸಂಯುಕ್ತವನ್ನೆ ಬರೆದಿದೆ. ಇದನ್ನು ಱಕಾರ ಸಂಯುಕ್ತವಾಗಿ

---

* ಈ ವಿಷಯವಾಗಿ ನನ್ನ ಮಿತ್ರರಾದ ಪ್ರೊ॥ ಡಿ. ಕೆ. ಭೀಮಸೇನರಾಯರ ಚರ್ಚೆಯನ್ನು ನೋಡಬಹುದು—“ಶಬ್ದಮಣಿದರ್ಪಣದ ಪಾಠಾಂತರಗಳು ” ಪುಟ ೫೧-೫೪.

ಮುದ್ರಿಸಿದೆ. ಈ ತೆರನ ಉಚ್ಚಾರಣೆಯನ್ನು ಕೇಶಿರಾಜನು ನಿಷೇಧಿಸಿರುವುದಕ್ಕೆ ಕಾರಣಗಳುಂಟು.

ಶಾಂತಿನಾಥನ ಶಬ್ದಭಂಡಾರವು ವಿಸ್ಮಯಕಾರಕವಲ್ಲದಿದ್ದರೂ ಗಮನಾರ್ಹವೂ ಚಿಂತನೀಯವೂ ಆದದ್ದು; ಸಹಜವಾಗಿಯೇ ಇದೆ ಅಲ್ಲಿ ತತ್ಸಮಗಳ ಪ್ರಾಚುರ್ಯ; ತದ್ಭವಗಳನ್ನು ವಿಪುಲವಾಗಿ ಬಳಸಿಲ್ಲ. ಕಥಾಭಾಗದಲ್ಲಿ ದೇಶ್ಯಶಬ್ದಗಳ ಪ್ರಾಚುರವಿದೆ. ಅಪೂರ್ವ ಶಬ್ದಗಳನ್ನು ಇವನು ಬಳಸಿರುವುದು ಎಲ್ಲಕ್ಕಿಂತಲೂ ತುಂಬಾ ಮುಖ್ಯವಾದದ್ದು. ನೆಕ್ಕೊರವಟ್ಟೆ, ಗುಣಣೆ, ಪರುಣೆ, ಕೊಡವಿ, ಎಕ್ಕಸಿರ್ಕ, ಇಳಿಲೆ> ಇನಿಲೆ <ಎಳಿಲೈ, ಕುರವ, ತದುಮಾಡು, ಮೇಕು, ಕಾಲೋಹಣ, ಮುಗುಟ್ < (ತಮಿಳು)ಮುಗಿಟ್, ಎಡಂಬಡು, ಸಾಹಿಯಾಣ, ಪುಟ್ಟಗೆ, ಮಾಸರ, ದೀನಾರ, ಬೆತ್ತಲಟ್ಟೆ, ಪುಡುಕುನೀರ್, ಅಗವಡು—ಮುಂತಾದ ಹಲವು ಶಬ್ದಗಳು ದೊರೆಯುತ್ತವೆ. ಇವುಗಳಲ್ಲಿ ಕೆಲವನ್ನು ಪಂಪನ ಕಾವ್ಯಗಳಲ್ಲಿ ನೋಡಬಹುದು. ಉದಾಹರಣೆ:—ನೆಕ್ಕೊರವಟ್ಟೆ (ಪಂ. ಭಾ. ೧–೧೧೮). ಅಲ್ಲಿಂದೀಚಿನ ಕಾವ್ಯಗಳಲ್ಲಿ ಕೆಲವು ಕ್ವಚಿತ್ತಾಗಿ ಪ್ರಯುಕ್ತವಾಗಿವೆ. ಶಾಂತಿನಾಥನ ಶಬ್ದಜ್ಞತೆ ಅಸಾಧಾರಣವಾದುದೆಂದು ಇದರಿಂದ ತಿಳಿಯಬಹುದು.

ಛಂದಸ್ಸಿನ ದೃಷ್ಟಿಯಿಂದ "ಸುಕುಮಾರಚರಿತೆ" ತುಂಬ ಮುಖ್ಯವಾದುದು. ಅಲ್ಲಿರುವ ಸಂಸ್ಕೃತಜನ್ಯ ಅಕ್ಷರ ವೃತ್ತಗಳಲ್ಲಿ ಯಾವ ವಿಶೇಷವೂ ಇಲ್ಲ; ದೇಶೀಯ ವೃತ್ತಗಳಲ್ಲಿ ಗಮನಾರ್ಹವಾದ ಅನೇಕ ವಿಚಾರಗಳಿವೆ. ಇವುಗಳನ್ನು ಸವಿವರವಾಗಿ ಪ್ರತಿಪಾದಿಸುವುದು ಇಲ್ಲಿ ಸಾಧ್ಯವಿಲ್ಲ; ಕೆಲವು ಸಮಸ್ಯೆಗಳ ಸೂಚನೆಯನ್ನು ಮಾತ್ರ ಮಾಡಿದೆ:

೧. ತ್ರಿಪದಿ:—ಎರಡು ತ್ರಿಪದಿಗಳು (೨-೪೭, ೭೨), ಈ ಗ್ರಂಥದಲ್ಲಿವೆ. ಇವೆರಡೂ ನಾಗವರ್ಮಜಯಕೀರ್ತಿಗಳು ಹೇಳಿರುವ ತ್ರಿಪದಿಲಕ್ಷಣಕ್ಕೆ ಅನುಸಾರವಾಗಿವೆ; ಇವು ಅಂಶಗಣದಿಂದಾದುವು. ಬೇರೆ ವಿಶೇಷವೇನೂ ಇಲ್ಲ.

೨. ಪಿರಿಯಕ್ಕರ:—ಎಂಟು ಪಿರಿಯಕ್ಕರಗಳುಂಟು ಈ ಕಾವ್ಯದಲ್ಲಿ. ಇವುಗಳಲ್ಲಿ ಒಂದು (೧೨-೧೦೯) ನಾಗವರ್ಮನೂ ಜಯಕೀರ್ತಿಯೂ ಕೊಟ್ಟಿರುವ ಲಕ್ಷಣವನ್ನು ಅನುಸರಿಸಿದೆ. ಈ ವೃತ್ತದ ಪ್ರತಿಪಾದದಲ್ಲೂ ಒಂದು ಬ್ರಹ್ಮ+ಐದು ವಿಷ್ಣು+ಒಂದು ರುದ್ರ—ಈರೀತಿ ೭ಗಣಗಳಿರಬೇಕೆಂದು ನಿಯಮ; ಆದರೆ ಇವುಗಳ ವಿನ್ಯಾಸದಲ್ಲಿ ಬೇಕಾದಷ್ಟು ಸ್ವಾತಂತ್ರ್ಯವುಂಟೆಂದು ಕವಿಪ್ರಯೋಗಗಳಿಂದ ತಿಳಿದು

ಬರುತ್ತದೆ. ಕೊನೆಯು ಗಣ ರುದ್ರ ಸಾಧಾರಣವಾಗಿ ಬೇರೆ ಗಣಕ್ಕೆಡೆಗೊಡುವುದಿಲ್ಲ; ಬ್ರಹ್ಮಗಣಸ್ಥಾನದಲ್ಲಿ ವಿಷ್ಣುವೂ, ವಿಷ್ಣುಗಣಗಳೆಡೆಯಲ್ಲಿ ಬ್ರಹ್ಮವೂ ಬರುತ್ತವೆ; ವಿಷ್ಣುಗಣಸ್ಥಾನದೆಡೆಯಲ್ಲಿ ಒಂದೊಂದು ವೇಳೆ ರುದ್ರ ಬಂದರೂ ಬರಬಹುದು ಇವಕ್ಕೆಲ್ಲಾ ಉದಾಹರಣೆಗಳು ಇಲ್ಲಿನ ಪಿರಿಯಕ್ಕರಗಳಲ್ಲಿ ದೊರೆಯುತ್ತವೆ.

೫-೨೭ :—ಎರಡನೆಯ ಪಾದದಲ್ಲಿ ಒಂದು ಗಣ ಊನವಾಗಿದೆ. ಬಹುಶಃ ಅದು ವಿಷ್ಣುಗಣವಿರಬೇಕು. ಮೊದಲ ಬ್ರಹ್ಮಕ್ಕೆ ಬದಲಾಗಿ ವಿಷ್ಣು ಬಂದಿದೆ.

೭-೧೩:—ಮೂರನೆಯ ಪಾದ ಮೊಟಕಾಗಿದೆ; ನಾಲ್ಕನೆಯ ಪಾದದ ಮೂರನೆಯ ಗಣ ರುದ್ರ, ವಿಷ್ಣುವಿಗೆ ಬದಲಾಗಿ.

೭-೧೫ :—ಮೊದಲ ಮೂರು ಪಾದಗಳು ಲಕ್ಷಣಾನುಸಾರಿ; ನಾಲ್ಕನೆಯುದರಲ್ಲಿ ಐದನೆಯ ಗಣ ಬ್ರಹ್ಮ.

೮-೫ :—ಇಲ್ಲಿ ಎರಡು ಪಿರಿಯಕ್ಕರಗಳು ಕಲಸಿ ಹೋಗಿರುವಂತೆ ಕಾಣುತ್ತದೆ. ಪ್ರತ್ಯಂತರಗಳು ದೊರೆತಾಗ ಇದರ ನಿರ್ಣಯವಾಗಬೇಕು.

೮-೨೩ :—ಎರಡನೆಯ ಪಾದದ ಮೂರನೆಯ ಗಣ ಬ್ರಹ್ಮ; ನಾಲ್ಕನೆಯುದರಲ್ಲಿ ಮೊದಲ ಗಣ ವಿಷ್ಣು.

೮-೨೮:—ಮೊದಲ ಪಾದ ಐದನೆಯ ಗಣ ರುದ್ರ; ಎರಡನೆಯ ಪಾದದ ಮೊದಲಯ ಮೂರು ಗಣಗಳು ಒಂದು ರುದ್ರ+ಎರಡು ಬ್ರಹ್ಮ; ಮೂರನೆಯ ಪಾದದಲ್ಲಿ ಏನೋ ದೋಷವಿದೆ; ನಾಲ್ಕನೆಯದರಲ್ಲಿ ಮೊದಲ ಗಣ ವಿಷ್ಣು, ಎರಡನೆಯದು ಬ್ರಹ್ಮ.

೧೧-೫೭ :—ಮೊದಲನೆಯ ಪಾದ ಎರಡನೆಯ ಗಣ ಬ್ರಹ್ಮ; ಮೂರನೆಯ ಪಾದ ಮೂರಾರನೆಯ ಗಣಗಳು ಬ್ರಹ್ಮ; ನಾಲ್ಕನೆಯ ಪಾದ ಎರಡನೆಯ ಗಣ ಬ್ರಹ್ಮ.

೩. **ಷಟ್ಪದ** :—ನಾಗವರ್ಮ ಜಯಕೀರ್ತಿಗಳು ನಿರೂಪಿಸಿರುವ ಷಟ್ಪದ ಲಕ್ಷಣವನ್ನು ಪೂರ್ಣವಾಗಿ ಪ್ರತಿಬಿಂಬಿಸುವ ಷಟ್ಪದವೆಂದರೆ 'ಸುಕುಮಾರ ಚರಿತೆ' ಯಲ್ಲಿರುವುದೇ (೧೨-೫೧). ಈ ಷಟ್ಪದದ ಪ್ರಾಮುಖ್ಯವನ್ನೂ ಅದರ ಗಣ ವಿನ್ಯಾಸ ಕ್ರಮವನ್ನೂ ಶ್ರೀ ತ. ಸು. ಶಾಮರಾಯರೂ ಶ್ರೀ ತೀ.ನಂ. ಶ್ರೀಕಂಠಯ್ಯನವರೂ ಕೂಲಂಕಷವಾಗಿ ವಿಮರ್ಶಿಸಿದ್ದಾರೆ. (ಕ. ಸಾ. ಪ. ಪ. ೩೧-ಸಂ೨, ಕನ್ನಡನುಡಿ ೧೫-ಸಂ ೩,೪, ಪುಟ ೭೮-೮೩). ಶಾಸನದಲ್ಲಿ ದೊರೆಯುವ

ಇಂತಹ ಒಂದು ಷಟ್ಪದವನ್ನು ಶ್ರೀ ಪಾ.ಭಿ. ದೇಸಾಯಿಯವರು ನಿರ್ದೇಶಿಸಿದ್ದಾರೆ. (ಕ.ನು. ೧೫-೨) ಒಂದು ಎರಡು ನಾಲ್ಕು ಐದನೆಯ ಪಾದಗಳಲ್ಲಿ ಎರಡೆರಡು ವಿಷ್ಣುಗಳೂ, ಮೂರಾರನೆಯ ಪಾದಗಳಲ್ಲಿ ಎರಡು ವಿಷ್ಣುಗಳೂ ಅವುಗಳ ಮುಂದೆ ಒಂದು ರುದ್ರಗಣವೂ ಇರಬೇಕು. ಕನ್ನಡ ಷಟ್ಪದಿಯ ಚರಿತ್ರೆಯಲ್ಲಿ ಈ ಷಟ್ಪದಕ್ಕೆ ಅಗ್ರಸ್ಥಾನವಿದೆ. ಇದು ಅಂಶಗಣಘಟಿತವಾದುದೇ ಹೊರತು ಮಾತ್ರಾಗಣದಿಂದಾದುದಲ್ಲ.

**೪. ರಗಳೆ** :—ಸುಕುಮಾರ ಚರಿತೆಯಲ್ಲಿ ನಾಲ್ಕು ರಗಳೆಗಳಿವೆ. (೫-೫೧, ೮-೬೬, ೧೦-೫೬, ೧೦-೬೭). ಇವುಗಳಲ್ಲಿ ಮೊದಲನೆಯದನ್ನೂ ಕೊನೆಯದನ್ನೂ ರಗಳೆಯೆಂದೂ, ಎರಡನೆಯದನ್ನು ಪದ್ದಳಿಯೆಂದೂ, ಮೂರನೆಯದನ್ನು ಆದ್ಯಂತ ಪ್ರಾಸರಗಳೆಯೆಂದೂ ಮಾತೃಕೆಗಳಲ್ಲಿ ಕರೆದಿದೆ. ಪದ್ದಳಿಯೆಂಬ ಹೆಸರು ಗಮನಾರ್ಹ. ಇದು ಸಂಸ್ಕೃತದ 'ಪದ್ಧತಿ'ಯೆಂಬುದರಿಂದ ಬಂದಿದೆ; ಪ್ರಾಕೃತದಲ್ಲಿ ಪದ್ದಡಿ ಎಂಬ ರೂಪವಾಗಿ ಅದರ ವಿಕಾರವೇ ಪದ್ದಳಿ. ಪ್ರಾಕೃತದಲ್ಲಿರುವ ಮಾತ್ರಾವೃತ್ತ 'ಪಜ್ಝಟಿಕಾ' ಎಂಬುದಕ್ಕೂ 'ಪದ್ಧತಿಕಾ' ಎಂಬುದೇ ಮೂಲ. ಪ್ರಾಕೃತ ಛಂದಸ್ಸಿನಲ್ಲಿ 'ಪಜ್ಝಟಿಕೆ'ಯ ಲಕ್ಷಣ ಹೀಗೆ:—ಪ್ರತಿಪಾದದಲ್ಲಿ ನಾಲ್ಕು ಮಾತ್ರೆಗಳ ನಾಲ್ಕುಗಣ, ಕೊನೆಯಗಣ ಮಧ್ಯಗುರುವುಳ್ಳ ಗಣ (∪–∪) ಆಗಿರಲೇ ಬೇಕು, ಎರಡನೆಯಗಣ ಈ ಜಗಣವಾಗಿರಲೂ ಬಹುದು. ಎರಡೆರಡು ಪಾದಗಳಿಗೆ ಅಂತ್ಯಪ್ರಾಸ ಇಂಥ ೧೬ ಪಾದಗಳು ಒಟ್ಟಿಗೆ ಬಂದರೆ ಅದನ್ನು 'ಕಡವಕ' ಎಂದು ಕರೆದಿದೆ. ಅಪಭ್ರಂಶ ಸಾಹಿತ್ಯದಲ್ಲಿ ವರ್ಣನೆಗೂ ಕಥನಕ್ಕೂ 'ಕಡವಕ'ಗಳನ್ನು ಬಳಸಿದೆ. ಹದಿನಾರು ಪಾದಗಳಿರಬೇಕೆಂಬ ನಿಯಮವಿದ್ದರೂ ಕವಿಗಳು ಅದನ್ನು ಪಾಲಿಸಿಲ್ಲ; ಎಷ್ಟುಪಾದಗಳನ್ನು ಬೇಕಾದರೂ ಬಳಸುತ್ತಾರೆ. ಈ 'ಕಡವಕ' ಕನ್ನಡದಲ್ಲಿ ರಗಳೆಯಾಗಿ ಪರಿಣಮಿಸಿದೆ. ನಾಗವರ್ಮ ಜಯಕೀರ್ತಿಗಳು ರಗಳೆಯ ಲಕ್ಷಣವನ್ನು 'ಕರ್ಣಾಟ ವಿಷಯ ಜಾತಿಪ್ರಕರಣ'ದಲ್ಲಿ ಹೇಳದೆ ಸಂಸ್ಕೃತದ ಮಾತ್ರಾ ವೃತ್ತಪ್ರಕರಣದಲ್ಲಿ ಹೇಳಿರುವುದನ್ನು ನೋಡಿದರೆ ಅದು ಅಚ್ಚಗನ್ನಡ ಛಂದಸ್ಸಲ್ಲವೆಂದೂ, ಅಂಶಗಣಕ್ಕೆ ಅದು ಹೊರಗೆ ಎಂಬುದೂ ಗೊತ್ತಾಗುತ್ತದೆ. ಪ್ರಕೃತ 'ಪದ್ದಳಿ'ಯ ಲಕ್ಷಣ ಮೇಲೆ 'ಪದ್ಧತಿ'ಗೆ ಹೇಳಿರುವುದೇ ಆಗಿದೆ; ಕೊನೆಯ ಜಗಣಕ್ಕೆ ಬದಲಾಗಿ ಸರ್ವಲಘುವುಳ್ಳ ಗಣ ಬರಬಹುದು; ಇದು ೮-೬೬ರಲ್ಲಿ ಸಮಗ್ರವಾಗಿ ಕಾಣುತ್ತದೆ. ೫-೫೧ರಲ್ಲಿ ಆದ್ಯಂತಪ್ರಾಸಗಳಿವೆ.

ಕೊನೆಯ ಜಗಣಕ್ಕೆ ಬದಲಾಗಿ ಯಾವ ಚತುರ್ಮಾತ್ರಾಗಣವಾದರೂ ಇರ ಬಹುದು. ಹೀಗೆಯೇ ೧೦-೫೬,೧೦-೬೭ನೆಯ ರಗಳೆಗಳಲ್ಲಿ ಕೊನೆಯ ಗಣ ಜಗಣ, ಇಲ್ಲವೇ ಸರ್ವಲಘುವುಳ್ಳ ಚತುಷ್ಕಲ; ಅಂತ್ಯಪ್ರಾಸಮಾತ್ರವಿದೆ; ಎರಡನೆಯ ಪಾದ ದಲ್ಲಿ ಎರಡನೆಯ ಮೂರನೆಯ ಗಣಗಳು ಜಗಣವಾಗಿವೆ. ಇದು 'ಪಜ್ಝಟಿಕೆ'ಯೇ ವಿನಾ ಬೇರೆ ಏನೂ ಅಲ್ಲ (ಜಯಕೀರ್ತಿಯ ಛಂದೋನುಶಾಸನ ೧-೨೪). ಒಟ್ಟಿ ನಲ್ಲಿ ಈ ರಗಳೆಗಳೆಲ್ಲಾ ಲಕ್ಷಣದಲ್ಲಿ 'ಪಜ್ಝಟಿಕೆ'ಯ ಪ್ರಭೇದಗಳೆಂದು ಹೇಳಬ ಹುದು. ಇವುಗಳಿಗೆ ನಿಷ್ಕೃಷ್ಟವಾದ ಹೆಸರು ಇದ್ದಂತೆ ಕಾಣುವುದಿಲ್ಲ; 'ಪದ್ಧಳಿ', 'ಮಟ್ಟರಗಳೆ', 'ತ್ವರಿತರಗಳೆ' ಎಂದು ಬೇರೆ ಬೇರೆ ಹೆಸರುಗಳಿವೆ. ಮಂದಾ ನಿಲ ರಗಳೆ ಎಂಬುದು ಈಚಿನ ಕಾಲದ ಹೆಸರು.

ಡಿ. ಎಲ್. ಎನ್.

---

## ಗ್ರಂಥ ಪಾಠ

ಈ ಗ್ರಂಥದ ಸಂಪಾದನೆಗೆ ಎರಡು ಕೈಬರಹದ ಮಾತೃಕೆಗಳನ್ನು ಬಳಸಿದೆ. ಮೊದಲನೆಯದು ಓಲೆಯ ಪ್ರತಿ(ಕ.) ಕೊನೆಯಲ್ಲಿ ಬಹು ಗ್ರಂಥಪಾತವಿದೆ; ನಡುವೆ ಅಲ್ಲಲ್ಲಿ ಸಣ್ಣ ಸಣ್ಣ ಭಾಗಗಳು ನಷ್ಟವಾಗಿವೆ. ಱಕಾರವನ್ನು ಆದಷ್ಟು ಸರಿಯಾಗಿಯೇ ಬಳಸಿದೆ. ಸಾಮಾನ್ಯವಾಗಿ ಇದರ ಪಾಠವನ್ನೇ ಸ್ವೀಕರಿಸಿದೆ. ಈ ಪ್ರತಿ ಮೂಡಬಿದರೆಯ ಪಂಡಿತ ಶ್ರೀವರ್ಮ್ಯ ಕೆ. ಭುಜಬಲಿಶಾಸ್ತ್ರಿಗಳ ಕೃಪೆಯಿಂದ ದೊರೆಯಿತು. ಅವರಿಗೆ ಇದಕ್ಕಾಗಿ ಕೃತಜ್ಞತೆಗಳು. ಎರಡನೆಯ ಪ್ರತಿ ಕಾಗದದ್ದು (ಗ); ಮೈಸೂರಿನ ಓರಿಯೆಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟಿಗೆ ಸೇರಿದೆ (ನಂ. ೨೫೨). ಇದರ ಲಿಪಿ ಓದಲು ಕಷ್ಟ; ಕಾಗುಣಿತದ ಸ್ಖಾಲಿತ್ಯಗಳಿವೆ; ಗ್ರಂಥ ಪಾತಗಳಂತೂ ಬಹಳವಾಗಿವೆ. ಹನ್ನೆರಡನೆಯ ಆಶ್ವಾಸದ ಕೊನೆಯ ಭಾಗ ಇದರಲ್ಲೂ ನಷ್ಟವಾಗಿದೆ. ಮಿಕ್ಕ ಆಶ್ವಾಸಗಳಲ್ಲಿ ಒಟ್ಟೊಟ್ಟಿಗೆ ಬಹುಭಾಗ ಲುಪ್ತವಾಗಿದೆ. ಇದರಿಂದ ಗ್ರಂಥ ಸಂಪಾದನೆಗೆ ತುಂಬ ಪ್ರಯೋಜನವಾಗದಿದ್ದರೂ ಅಲ್ಲಲ್ಲಿ ಮೊದಲ ಪ್ರತಿಯಲ್ಲಿ ನಷ್ಟವಾಗಿರುವುದನ್ನು ತುಂಬಲು ಸಾಧ್ಯವಾಗಿದೆ. ಎರಡು ಪ್ರತಿಗಳಿಂದಲೂ ಹನ್ನೆರಡನೆಯ ಆಶ್ವಾಸವನ್ನು ಪೂರ್ಣವಾಗಿ ಪಡೆಯಲು ಆಗುವುದಿಲ್ಲ. ಪ್ರತ್ಯಂತರಗಳು ದೊರೆತಾಗ ಗ್ರಂಥ ಪೂರ್ಣವಾಗಬಹುದು. ಈಗ ಇವೆರಡು ಪ್ರತಿಗಳ ಆಧಾರದ ಮೇಲೆ ಮುದ್ರಿಸಿರುವ ಗ್ರಂಥಪಾಠದಲ್ಲಿ ಬಹಳ ಕ್ಲೇಶಗಳಿವೆ. ಅವುಗಳ ಪರಿಹಾರ ಬೇರೆ ಪ್ರತಿಗಳು ಸಿಕ್ಕರೆ ಆಗುತ್ತದೆ. ಬೀರಾರಿನ ಅಕೋಲ ಜಿಲ್ಲೆಯ ಕಾರಂಜ ಎಂಬ ಊರಿನಲ್ಲಿರುವ ಬಲಾತ್ಕಾರ ಗಣದ ಜೈನ ಬಸದಿಯಲ್ಲಿ 'ಸುಕುಮಾಲ ಚರಿತ್ರ' ಎಂಬೊಂದು ಓಲೆಯ ಗ್ರಂಥವಿರುವಂತೆ ತಿಳಿದುಬಂದಿದೆ. ಇದು ಶಾಂತಿನಾಥನ ಗ್ರಂಥವಾಗಿರಬಹುದು. ಇದನ್ನು ನೋಡುವುದಕ್ಕಾಗಲಿಲ್ಲ; ಏಕೆಂದರೆ ಇದು ದುರ್ಲಭ. ಈಗ ಮುದ್ರಿತವಾಗಿರುವ ಗ್ರಂಥದಲ್ಲಿ ಹಲವು ತಪ್ಪುಗಳು ಉಳಿದಿರುವುದಕ್ಕಾಗಿ ವಿಷಾದ; ಶುದ್ಧಾಶುದ್ಧದಲ್ಲಿ ಆದಷ್ಟು ಇವನ್ನು ಸೂಚಿಸಿದೆ.

ಡಿ. ಎಲ್. ಎನ್.
ಟಿ. ಎಸ್. ಎಸ್.

# ಸುಕುಮಾರ ಚರಿತಂ

ಶ್ರೀಮನ್ನಾಕಾಧಿನಾಥಾನತ ಮಕುಟಮಣಿದ್ಯೋತಿತಾಂಘ್ರಿದ್ವಯಂ ನಿ
ಷ್ಕಾಮಂ ಶ್ರೀವರ್ಧಮಾನಪ್ರವರ ಮುನಿಜನಾನಂದ ಸಂಸ್ತುತ್ಯ ಸಿಂಧು
ಸ್ತೋಮಾಳಂಕಾರಿತಾಂಭೋನಿಧಿ ನಿರುಪಮ ಬೋಧಾಕರಂ ಮೋಕ್ಷಲಕ್ಷ್ಮೀ
ಧಾಮಂ ತ್ರೈಳೋಕ್ಯನಾಥಂ ಕುಡುಗೆಮಗಮೃತಾವಾಸಮಂ ವೀರನಾಥಂ ೧

ಪರಮಾನಂತ ಚತುಷ್ಟಯೈಕ ನಿಳಯರ್ ಲೋಕೈಕ ಪೂಜ್ಯರ್ ಪ್ರಸಿ
ದ್ಧರಮೂರ್ತರ್ ನಿರಪಾಯರಕ್ಷರರಜೇಯರ್ ನಿಷ್ಠಿತಾತ್ಮರ್ ಜಗ
ದ್ಗುರುಗಳ್ ಕರ್ಮಕಳಂಕಪಂಕರಹಿತರ್ ತಾವೆಂಬಿನಂ ಸಂದ ಸಿ
ದ್ಧರನಂತರ್ ದಯೆಗೆಯ್ವರಕ್ಕೆಮಗನಂತೋದಾತ್ತ ಸಂಸಿದ್ಧಿಯಂ ೨

ಇರೆ ಷಟ್ತ್ರಿಂಶದ್ಗು[1]ಣಂ[1]ಗಳ್ ತಮಗಮರ್ದಿರಲಾಚಾರಮುಯ್ದುಂ ಬೆಡಂಗಿಂ
ದೊರೆವೆತ್ತತ್ಯಂತಮಾಗುತ್ತಿರಲಧಿಗಮಶಿಷ್ಯೋತ್ಕರಾನುಗ್ರಹತ್ವಂ
ನಿರುತಂ ಕೈಗಣ್ಮಿ ಪೊಣ್ಮುತ್ತಿರಲೆಸಗುವ ಚಾರಿತ್ರ ಸಂಶುದ್ಧರೀ ದು
ಸ್ತರ ಸಂಸಾರಾಬ್ಧಿಯಿಂದಂ ಪೊಱಮಡಿಸುಗೆ ಸದ್ಧರ್ಮರಾಚಾರ್ಯರೆಂದುಂ ೩

ನಡೆಯಿಂ ಧರ್ಮದ ಬಟ್ಟೆಯೊಳ್ ಬಿಸುಡಿಮಾ ದುಷ್ಪಾಪ ದುರ್ಮಾರ್ಗಮಂ
ಕಿಡಿಸಿಂ ಶಲ್ಯಕಷಾಯವರ್ಗರಿಪುವಂ ರತ್ನತ್ರಯಜ್ಯೋತಿಯಂ
ಪಡೆಯಿಂ ನೀಮೆನುತಂ ವಿನೇಯಜನಮಂ ಕಲ್ಪಿಪ್ಪುಪಾಧ್ಯಾಯರಾ
ಗಡುಮೆಮ್ಮಂ ಮನಮೊಲ್ದು ಕಲ್ಪಿಸುಗೆ ಸನ್ಮಾರ್ಗೋಪದೇಶಂಗಳಂ ೪

ಪಗೆ ಕರ್ಮಂ ಪೆಱವಲ್ಲವೆಂದಘಕುಲಪ್ರಧ್ವಂಸನೋಪಾಯಮಂ
ಬಗೆಯುತ್ತುಂ ಸಮಸಂದ ಮೂಲಗುಣಮಿರ್ಪತ್ತೆಂಟುಮಂ ತಾಳ್ದಿ ನಂ
ಬುಗೆಯಿಂ ಮಿಕ್ಕಱಿವಿಂ ಸದಾಚರಿತದಿಂ ಸನ್ಮಾರ್ಗದಿಂ [2]ಸ[2]ಲ್ವ ಸಾ
ಧುಗಳೆಮ್ಮಂ ದಯೆಯಿಂದೆ ಬೋಧಿಸುತಮಿರ್ಕೆಂದುಂ ಜಿನೇಂದ್ರೋಕ್ತಿಯಂ ೫

---

1. ರುದ್ಗುಣಂ (ಕ) 2. ನ (ಕ)

ವರಪುಣ್ಯೋದಯಹೇತು ಶಾಶ್ವತಮಹಿಂಸಾಲಕ್ಷಣಂ ಸದ್ಗುಣಾ
ಕರಮೊಳ್ಪಿಂ[1]ಗೆಱ[1]ವಟ್ಟು ನೆಟ್ಟನೆ ಪುನರ್ಜಾತಕ್ಷಯಶ್ರೀಗೆ ತಾ
[2][ಯ್ಗ][2]ರು ರತ್ನತ್ರಿತಯಾವಭಾಸಿ ಬಹುಬಂಧಚ್ಛೇದಿ ಸಂಸಾರ ಸಂ
ಹರಣಂ ಧರ್ಮಮುದಾರ್ಮಮಕ್ಕೆಮಗೆ ಸಂಸಾರಾಬ್ಧಿತೀರಂಬರಂ ೬

ಸುದತೀಸದ್ರೂಪಮಂ ತಾ[2]ಳ್ದಿ[2]ದ ವನಜಭವಪ್ರೇಯಸೀನಾಮಮಂ ತಾ
ಳ್ದಿದ ದುಗ್ಧಾಂಬೋಧಿಯೊಳ್ಪುಟ್ಟಿದ ಜಿನವಚನೋದ್ಭೂತೆ ಸನ್ಮಾರ್ಗದಿಂ ಕಂ
ದದ ಮೆಯ್ಯಿಂ ಮಂಡನಾಳಂಕರಣ ವಚನದಿಂ ವೃತ್ತವಕ್ಷೋಜದಿಂ ಸ
ತ್ಪದದಿಂದೊಪ್ಪಿರ್ದ ವಾಕ್ಸುಂದರಿ ಪರಮವಚೋವೃದ್ಧಿಯಂ ಮಾಡುಗೆಮ್ಮೊಳ್ ೭

ವಿಕ[3]ಚೇಂ[3]ದೀವರವಕ್ತ್ರೆ ಸನ್ಮರಕತಚ್ಛಾಯಾಂಗಿ ರಾಮಾಂಗೆ ವೃ
ತ್ತಕುಚದ್ವಂದ್ವೆ ವಿನೀಳಕುಂತಳೆ ವಿನೇಯಾಧಾರೆ ಸಂಪದ್ಗುಣಾ
ಧಿಕೆ ಸಿಂಹಾಸನೆ ಜೈನಶಾಸನ ವಿಶೇಷೋದ್ಭಾಸೆ ಕೂಷ್ಮಾಂಡಿಯಂ
ಬಿಕೆ ಯಕ್ಷೇಶ್ವರಿ ಕೂರ್ತು ರಕ್ಷಿಸುಗೆ ಭವ್ಯಾನೀಕಮಂ ಸಂತತಂ ೮

ಕನಕಚ್ಛಾಯನಜೇಯಸಂಹನನನೂನಸ್ವಾಪದೇಯಾದಿ ನಾ
ಥನಭೀರಸ್ವಗಿತಂ ಜಿನೇಂದ್ರಪದಪದ್ಮಾರಾಧಕಂ ಸಿಂಧುರಾ
ಸನನಬ್ಜಾಯತನೇತ್ರನೀಗಭಿಮತಂ ಸರ್ವಾಹ್ಣಯಕ್ಷಂ ವಿನೇ
ಯನಿಕಾಯಕ್ಕಭಿವೃದ್ಧಿಯಂ ಕೃತಿಗೆ ನಿರ್ವಿಘ್ನೋದಾತ್ತಸಂಸಿದ್ಧಿಯಂ (?) ೯

ಪುರುಪರಮಜಿನಾದಿ ಪರಂ
ಪರೆಯಿಂ ಶ್ರೀವರ್ಧಮಾನಜಿನಪರ್ಯಂತಂ
ಬರಮರ್ಹದ್ದೀಕ್ಷಿತರಾ
ದರ ಚರಣ ಸರೋಜಮೆಮಗೆ [4][ಶ][4]ರಣಕ್ಕೆಂದುಂ ೧೦

---

1. ಗೆಸೆವಱ (ಕ) 2. ಯ್ಗು (ಕ) 3. ಳ್ದ (ಕ) 4. ಚ (ಗ)
5. ಸ್ವ (ಕ)

ಶ್ರುತಕೈವಲ್ಯ ವಿಭೂತಿಯಂ ತಳೆದು ಶಿಷ್ಯಾನುಗ್ರಹೈಕಾರ್ಥನಿ
ಷ್ಠಿತರಾ ಮೋಕ್ಷುಗಳಾ ಮುನಿಪ್ರವರರಾ ಯೋಗೀಂದ್ರರಾ ಸಂಶ್ರಿತ
ಬ್ರತರಾ ಸಾಧುಗಳೆಂಬಿನಂ ವಸುಧೆಯೊಳ್ ಶ್ರೀ ವಿಷ್ಣುನಂದ್ಯಾಪರಾ
ಜಿತ ಗೋವರ್ಧನ ಭದ್ರಬಾಹುಮುನಿನಾಥಖ್ಯಾತಿಯಂ ತಾಳ್ದಿದರ್ ೧೧

ಜಯಭದ್ರಾಖ್ಯ ಸುಭದ್ರ ಪಾಂಡುಯತಿ ಕಂಸಾಚಾರ್ಯ ಲೋಹಾರ್ಯ ಸ
ಜ್ಜಯಪಾಳಾರ್ಯ ವಿಶಾಖದತ್ತ ಜಯಬಾಹ್ವಾದಿ ವ್ರತೀಕರ್ ತಪೋ
ನಿಯತರ್ ಚಾರುಚರಿತ್ರರೂರ್ಜಿತಯಶರ್ ನಿರ್ಮತ್ಸರರ್ ನಿರ್ಮಳರ್
ನಿಯಮಜ್ಞರ್ ಸಕಳಾಗಮಜ್ಞರಮಳರ್ ಸಂದರ್ ಧರಾಚಕ್ರದೊಳ್ ೧೨

ಧೈರ್ಯಪರಸ್ವಪರತಪ
ಸ್ಕಾರ್ಯರ್ ತತ್ತ್ವಾರ್ಥಕರ್ತೃಗಳ್ ಜಿನಮತತಾ
ತ್ಪರ್ಯರೆನೆ ಗೃದ್ಧ್ರಪಿಂಛಾ
ಚಾರ್ಯರನಾಚಾರ್ಯವರ್ಯರೆನ್ನದರೊಳರೆ ೧೩

ಶ್ರೀ ಮಂದರಸೇನ ಮುನಿ
ಸ್ವಾಮಿಗಳ ಮುನೀಂದ್ರವಂದ್ಯಪದ ಭೂತಬಲಿ
ಸ್ವಾಮಿಗಳ ಪುಷ್ಪದಂತ
ಸ್ವಾಮಿಗಳ ಸಮಾನಮೊಳರೆ ಬಗೆವೊಡೆ ಜಗದೊಳ್ ೧೪

ಚತುರಂಗುಲಪ್ರಮಾಣೋ
ಚ್ಛ್ರಿತ[1]ಋ[1] ದ್ಧಿಪ್ರಾಪ್ತರಮಳಚಾರಿತ್ರ ಸಮ
ನ್ವಿತ ಗುಪ್ತಿಗುಪ್ತರತ್ಯೂ
ರ್ಜಿತಧೈರ್ಯರ್ ನೆಗಳ್ದ [2]ಕೊ[2]ಂಡಕುಂದಾಚಾರ್ಯರ್ ೧೫

---

1. ರಿದ್ಧಿ (ಕ) 2. ಕೋಂ (ಗ)

ಅವನೀತಳದೊಳ್ [1]ಕ[1]ವಿ ಗಮ
[2]ಕಿ[2] ವಾದಿ ವಾಗ್ಮಿತ್ವ ತತ್ತ್ವಪಾರಗರೆಂದೇ
ನವಯುವದಿಂ ಬಣ್ಣಿಸುವುದೊ
ಭುವನಂ ಶ್ರೀ ಪೂಜ್ಯಪಾದಭಟ್ಟಾರಕರಂ ೧೬

ಆಚಾರಾಂಬುಧಿಪಾರಗರ್ ಜಿತಮದರ್ ಜ್ಞಾನರ್ಧಿಸಂಪನ್ನರು
ರ್ವೀಚಕ್ರಸ್ತುತಪಾದಪಂಕಜರುಪೇಕ್ಷಾಸಂಯುತರ್ ನಿಷ್ಠಿತಾ
[3]ಶೋಚ[3]ಜ್ಞರ್ ಜಿನತತ್ತ್ವತತ್ಪರರಜೇಯರ್ ಶ್ರೀ ಜಟಾಸಿಂಹನಂ
ದ್ಯಾಚಾರ್ಯರ್ ನೆಗಳ್ದರ್ ಪಯೋನಿಧಿಪರೀತಾಶೇಷ ಭೂಭಾಗದೊಳ್ ೧೭

ಪರಮೇಷ್ಠಿ ಸ್ವಾಮಿಗಳೇ
ಭರತಾವನಿಯೊಳಗೆ ನೋಟ್ಪೊಡಿವರೆಂದಿಂತೀ
ಧರೆ ಬಣ್ಣಿಸೆ ನೆಗಳ್ದರ್ಕವಿ
ಪರಮೇಷ್ಠಿ ಸ್ವಾಮಿಗಳ್ ಸಮಸ್ತಾವನಿಯೊಳ್ ೧೮

ಯಮಿನಾಥೋತ್ತಮ ಸಿಂಹನಂದಿಜಯನಂದ್ಯಾಚಾರ್ಯಪಾದಾರವಿಂ
ದಮನೋರಂತೆ ನಿರಂತರಂನೆನೆವ ಚಿತ್ತಂ.............................
.......................................................................
.................................ನಿಲ್ಕೆ ಮಚ್ಚಿತ್ತದೊಳ್ ೧೯

ಸದಮಳಚರಿತರನುದ್ಧೃ
ತದೋಷರಂ ವಿಗತರೋಷರಂ ಸಕಳಕಳಾ
ವಿದರಂ ನೆಟ್ಟನೆ ಮಲಧಾ
ರಿದೇವ[4]ರಂ[4] ದೇವರೆಂದು ಬಣ್ಣಿಪುದು ಜಗಂ ೨೦

1. ಗ (ಕ) 2. ರೆ (ಕ) 3. ಶೊಚ್ಚ (ಕ) 4. ರೆ (ಕ)

ಪರಮಪ್ರಭಾವರಂ ಶ್ರೀ
ಧರ ದೇವರನನುಪಮಾನಜಿನಸಮಯಸಮು
ದ್ಧರಣ ಪರಿಣತ ನಿಜಾಂತಃ
ಕ[1]ರಣರನಖಿಳಾವನೀತಳಂ ಕೀರ್ತಿಸುಗುಂ ೨೧

ಭೂರಿಕಳಾವಿಬೋಧಿತ ಸುಧಾಕರರೂರ್ಜಿತ ಸಾಧು ಸಂಘನಿ
ಸ್ತಾರಕರಂಗಜಾತ ಮಹಿಜಾತ ವಿದಾರಕರುಗ್ರ ಕರ್ಮಸಂ
ಹಾರಕರತ್ಯುದಾರತರ ನೂತನಗುಣಾನ್ವಿತ ಚಂದ್ರಕೀರ್ತಿಭ
ಟ್ಟಾರಕರೆಂದು ಬಣ್ಣಿಪುದು ವಾರಿಧಿವೇಷ್ಟಿತ ಭೂರಿಭೂತಳಂ ೨೨

ಮದಹರರೆಂಬುದೂರ್ಜಿತ ಬಹುಶ್ರುತರೆಂಬುದು ಸಾಧುಸಂಗರೆಂ
ಬುದು ಸುಚರಿತ್ರರೆಂಬುದು ಜಿತೇಂದ್ರಿಯರೆಂಬುದು ನಿಷ್ಕಷಾಯರೆಂ
ಬುದು ಗುರುಭಕ್ತರೆಂಬುದು ಗುಣಾನ್ವಿತರೆಂಬುದು ಗುಪ್ತಿಗುಪ್ತರೆಂ
ಬುದು ನಯ[2]ನಂ[2]ದಿ ದೇವರನಗಾಧಪಯೋಧಿಪರೀತಭೂತಳಂ ೨೩

ಅಮಿತಜಿನಮಾಳೆಯೊಳ್ ವ
ರ್ಧಮಾನಜಿನನೆಂತುಪಾಂತ್ಯದೊಳ್ ನೆಗಟ್ದವೊಲ
ಪ್ರಮಿತ ಮುನಿಮಾಳೆಯೊಳ್ ವ
ರ್ಧಮಾನಮುನಿ ನೆಗಟ್ದನೀ ಧರಿತ್ರೀತಳದೊಳ್ ೨೪

ಸಮತಾಭಾವನೆ ವರ್ಧಮಾನಮುಚಿತಧ್ಯಾನಕ್ರಮಂ ವರ್ಧಮಾ
ನಮೆ ಮಾನೋನ್ನತಿ ವರ್ಧಮಾನಮಮಳಜ್ಞಾನೋದಯಂ ವರ್ಧಮಾ
ನಮಶೇಷಂ ದಯೆ ವರ್ಧಮಾನಮಖಿಲಸ್ವಾಧ್ಯಾಯಮುಂ ವರ್ಧಮಾ
ನಮೆನಲ್ ತಾಂ ದೊರೆ ವರ್ಧಮಾನಮುನಿಯೊಳ್ ಶ್ರೀವರ್ಧಮಾನಾಹ್ವಯಂ ೨೫

---

1 ತಪ್ಪ (ಕ) 2 ಣಂ (ಕ) 3 ಮು (ಕ)

ಕ್ಷಮೆ ಮೆ[1]ಯ್[1] ಮಾರ್ದವವೋಜೆ ಸಾಜಮುಳವಟ್ಟಿರ್ದಾರ್ಜವಂ ಸೈಪು[2]ಶೌ[2]
ಚಮುದಾತ್ತಸ್ಥಿತಿ ಸತ್ಯವೊಂದಿದಱಿತಂ ತ್ಯಾಗಂ ಲಸತ್ಕೀರ್ತಿ ಸಂ
ಯಮುಮಾಚಾರಗುಣಂ ತಪಂ ಛಲಮುಕಿಂಚನ್ಯಂ ನಯಂ ಬ್ರಹ್ಮಚ
ರ್ಯ[3][ಮೆ][3] ಮಾನೋನ್ನತಿ ವರ್ಧಮಾನಮುನಿಗಕ್ಕುಂ ಪೆಱರ್ಗಕ್ಕುಮೇ ೨೬

ಕಾರ್ಯಮಿವೆ ಸತತಮೆಮಗೆ ಸ
ಪರ್ಯಮಿದೇ ಮುಕ್ತಿಪದಮನೆಯ್ದುವಿನಂ ತಾ
ತ್ಪರ್ಯಮಿದೆ ವರ್ಧಮಾನಾ
ಚಾರ್ಯ ಮಹೈಶ್ವರ್ಯಕರಣ ಚರಣಂ ಶರಣಂ ೨೭

ವಿದಿತವ್ಯಾಕರಣದ ತ
ರ್ಕದ ಸಿದ್ಧಾಂತದ ವಿಶೇಷದಿಂ ತ್ರೈವಿದ್ಯಾ
ಸ್ಪದರೆಂದೀ ಧರೆ ಬಣ್ಣಿಪು
ದು ದಿವಾಕರನಂದಿದೇವಸೈದ್ಧಾಂತಿಗಳಂ ೨೮

ಅನುಪಮ ಗುಣರನುಪಮ ತಪ
ರನುಪಮ ಸಿದ್ಧಾಂತ ವಾರ್ಧಿಪಾರಗರೆಂದೀ
ವನಧಿಪರೀವೃತ ಸಕಳಾ
ವನಿ ಪೊಗಟ್ಟುದು ಸಕಳಚಂದ್ರಸೈದ್ಧಾಂತಿಗಳಂ ೨೯

ಸಂತತವೊಂದಿನಿಂದ ತಪದೊಳ್ ಶ್ರುತದೊಳ್ ಗುಣದೊಳ್ ವಿಶೇಷದಿಂ
ದಿಂತಿವರೆಲ್ಲರಿಂ ಪಿರಿಯರಿಂತಿವರ್ಗಗ್ಗಳದಗ್ರಗಣ್ಯರಾ
ರಿಂತಿವರೆಂದು ಕೀರ್ತಿಪುದು ನೋಡು ದಿವಾಕರ ನಂದಿದೇವ ಸೈ
ದ್ಧಾಂತಿ ಮುನೀಂದ್ರರಂ ನತನರೇಂದ್ರರನಬ್ಧಿಪರೀತ ಭೂತಳಂ ೩೦

---

1 ಯಿ (ಗ) ಸೌ (ಗ) 3 ಮು (ಕ)

ಕಂತುಮದಾಪಹರ್ ತಪದೊಳಿಂತಿವರೆಂದು ಮಹಾಪ್ರಸಿದ್ಧ ಸಿ
ದ್ಧಾಂತಪಯೋಧಿಗಳ್ ಶ್ರುತದೊಳಿನ್ನಿವರೆಂದು ವಿಶೇಷ ಭಕ್ತಿಯಿಂ
ಸಂತತಮಿಂತು ಬಣ್ಣಿಸುತಮಿರ್ಪುದು ನೆಟ್ಟನೆ ಮಾಘಣಂದಿ ಸೈ
ದ್ಧಾಂತಿ ಮುನೀಂದ್ರರಂ ಲವಣವಾರಿಧಿವೇಷ್ಟಿತ ಭೂರಿಭೂತಳಂ ೩೧

ಎನೆ ನೆಗಟ್ದ [1][ಭ್ಯ][1] ದಯನಿಕಾ
ಯನಿರತ ಯತಿ ವೃಷಭಚರಣನಳಿನಂಗಳ್ ಪಾ
ವನಚರಿತಂಗಳ್ ಮಾಟ್ಕೆಮ
ಗನೂನದಯೆಯಿಂದಗಾಧ ಬೋಧೋದಯಮಂ ೩೨

ಪರಮತಪೋಧನರಾರೊ
ರ್ವರಿನೊರ್ವರೆ ವಿತಾಂತೇಷಮನುಪಮರತ್ನಂ (?)
ಧರೆಯೊಳಗೊಂದೊಂದಱಿನೊಂ
ದು ರಂಜಿಸಂತಿರೆ ಸಮಗ್ರತಾಗುಣದಿಂದಂ ೩೩

ಪ್ರಕಟಯಶೋನಿಳಯರ್ ತಾ
ರ್ಕಿಕಚೂಡಾಮಣಿಗಳಮಳ ಜಿನಶಾಸನದೀ
ಪಕರಾರ್[2]ಯ್ವ[2]ಡೆ ಸರ್ವ
ಜ್ಞಕಲ್ಪರಕಳಂಕದೇವರೆಂದಪುದು ಜಗಂ ೩೪

ದೊರೆವೆತ್ತ ತರ್ಕಶಾಸ್ತ್ರದ
ಪರಿಣತಿಗಂ ನೆಗಟ್ದ ಚಕ್ರವರ್ತಿಯ ಸಭೆಯೊಳ್
ಬೆರಲೆತ್ತಿದರೆಂ[3]ದೊ[3]ಡೆ ವಾ
ದಿರಾಜದೇವರ ಸಮಾನಮಾರೀ ಧರೆಯೊಳ್ ೩೫

---

1 ಬಿ (ಕ) 2 ಯ್ದೊ (ಸಂ) 3 ದೊ (ಸಂ)

ಯಮಕದ ಗಮಕದ ಬಿನ್ನಣ[1]
ಮಮರ್ವಿನೆಗಂ[1] ತತ್ತ್ವಮುಂ ಕವಿತ್ವಮುಮೆತ್ತಂ
ಸಮಸಂದಿರೆ ಪೇೞ್ವೋಜೆಗೆ
ಸಮನಿಲ್ಲ ಧನಂಜಯಂಗೆ ಕವಿತಾಗಮಿಕರ್ ೩೬

ರವಿಯಿಂದೆಂತು ತಮಂ ಮೃಗಾಧಿಪನಿನೆಂತುಗ್ರದ್ವಿಪಂ ತೀವ್ರವಾ
ಯುವಿನೆಂತಭ್ರಕುಳಂ ತೆರಳ್ವ ತೆಱದಿಂ ಮಿಥ್ಯಾರಜಂ ತೂಳ್ದು ಪಾ
ಱುವಿನಂ ನಿರ್ಮಳಧರ್ಮಮೊಂದಿ ನಿಲೆ ಪೇೞ್ದಿಂ ಪಂಪನತ್ಯಂತ ಸೌ
ಷ್ಠ[2]ವದಿಂ[ದಾದಿ][2] ಪುರಾಣಮಂ ಬುಧಜನಪ್ರಸ್ತುತ್ಯ ಕಲ್ಯಾಣಮಂ ೩೭

ನಿರುಪಮ ನವರಸ ರಸಿಕತೆ
ದೊರೆವೆತ್ತಿರೆ ದೇಸಿ[3] ದೇಸೆವೆತ್ತಿ[3]ರೆ ಪರಮಾ
ದರದಿಂ ಶಾಂತಿಜಿನೇಶ್ವರ
ಪುರಾಣಮಂ ಪೇೞ್ದ ಪೊನ್ನನಂ ಪೊಗೞದರಾರ್ ೩೮

ಜಾಣಿನ ಬೆಡಂಗು ವಿಬುಧ
ಪ್ರೀಣನಕರಮೆನಿಸಿ ನೇರ್ಪು[4]ನೇರ್ಪೊಡೆ[4] ಪೇೞ್ದಿಂ
ಪ್ರಾಣಿಹಿತಾರ್ಥದಿನಜಿತ ಪು
ರಾಣಮನಳವಟ್ಟ ಕವಿತೆಯಿಂ ಕವಿರತ್ನಂ ೩೯

ಅವಿರಳ ಸಮ್ಯಕ್ತ್ವದೊಳಂ
ಕವಿತೆಯ ಬಲ್ಮೆಯೊಳಮಾ ಮಹೀಮಂಡಲದೊಳ್
ಕವಿ ಪಂಪನ ಕವಿ ಪೊನ್ನನ
ಕವಿರತ್ನನ ದೊರೆಗಮೊರೆಗಮೇಂ ಬಂದಪರೇ ೪೦

---

1 ಮವವಿನೆಗಂ (ಗ) 2 ವಂದಿಂದೆ (ಕ) 3 ದೆಸೆವಿ (ಕ) 4 ನೆಪ್ಪಡೆ (ಕ)

ಕವಿಪರಮೇಶ್ವರನೆನಿಸಿದ
ಕವೀಂದ್ರಚೂಡಾಮಣಿಯ ಕವಿತ್ವಂ ತತ್ವ
ಕ್ಕವಳಂಬನಮಾದುದು ಸ
ತ್ಕವಿಗಳ್ ಪೆಱರೊಳರೆ ಕವಿಗಳಾದಿತ್ಯನವೊಲ್ ೪೧

ಸುಕರ ರಸಭಾವದಿಂ ಸಾ
ತ್ವಿಕ ಸೌಂದರ್ಯದಿನಪೂರ್ವ ಪದಗತಿಯಿಂದಾ
[ರ್ಯ]ಕೆಯು ದೊರೆಯೆನಿಸಿ ಕೃತಿ ಚತು
ರ ಕವಿಕದಂಬಕದ ಬಗೆಯನುಗಿಯಲ್ವೇಡಾ ೪೨

ವಿಪುಲ ಪದರಚನೆ ಪದರಚ
ನೆ ಪೊಚ್ಚ ಪೊಸದೇಸೆ ದೇಸೆ ಪೊಸ ಬಗೆ ಬಗೆ ರಂ
ಜಿಪ ರಸಿಕತೆ ರಸಿಕತೆ ಕುಸಿ
ವ ಪಸರಿಸುವ ರೀತಿ ರೀತಿಯೆನೆ ಮೆಚ್ಚದರಾರ್ ೪೩

ರಸದೊಳಮರ್ಕೆ ಬಿನ್ನಣದೊಳೊಟ್ಟ[1]ಜೆ[1] ಮಾತಿನ ರೀತಿಯೊಳ್ ಚಲಂ
ಕುಸಿವ ನಿಮಿರ್ಚುವೋಜೆಯೊಳುದಾತ್ತತೆ ಸೂಕ್ತಿಯೊಳರ್ಥಯುಕ್ತಿ ಕಾ
ಳಸೆಯೊಳಪೂರ್ವಭಂಗಿ ಪೊಸದೇಸೆಯೊಳೊಂದಿದ ಮಾರ್ಗವೊಳ್ಪುವೆ
ತ್ತೆಸೆದಿರೆ ಪೇಟ್ದು ರಂಜಿಸದೆ [2]ಕೆಮ್ಮನೆ[2] [3]ಬಲ್ಮೆ[3]ಗೆ ಮುಯ್ಯನಾಂಪುದೇ

ಪ್ರತಿಭಾಸಂಸ್ಕೃತಿಯಿಂದಳಂಕೃತಿಯಿನರ್ಥವ್ಯಕ್ತಿಯಿಂ ಸೂಕ್ತಮಾ
ಕೃತಿ ಪುಣ್ಯಾ[4]ಕೃ[4]ತಿ ತಾಂ ಚಮತ್ಕೃತಿವಿಲಾಸಾವಾಸಮೆಂದೆಂದು ಪಂ
ಡಿತರೆಲ್ಲಂ ಬಗೆಗೊಂಡು ಕೊಂಡುಕೊನೆಯುತ್ತಿರ್ಪನ್ನೆಗಂ ಪೇಟಿದು
ದ್ಧತ ಚಾಪಲ್ಯನ ಪೇಟ್ದ ಕಾವ್ಯಮುನದಂ ಕೈಕೊಳ್ವರಾರ್ ಕೇಳ್ವರಾರ್ ೪೫

---

1 ರಕೆ (ಕ) ಜಿ (ಗ) 2 ತೆಕನೆ (ಕ) 3 ಬಲ್ಕೆ (ಕ) 4 ಕ್ರಿ (ಕ)

ಸುಕಥಾಳಾಪಮನೋತು ಪೇೞ್ವುದು ಪದಾರ್ಥಾರ್ಥೋಕ್ತಿಯಿಂ ಶಾಸ್ತ್ರವ
ಸ್ತುಕವೀಂದ್ರರ್ಬಗೆಗೊಳ್ವಿನಂ ಬಿಸುಟು ಮಿಥ್ಯಾಮಾರ್ಗಮಂ ಮಾಯೆ ಲೌ
ಕಿಕಮಂ ತತ್ತ್ವವಿರುದ್ಧಮಂ ಕುಮತಮಂ ಕುಸ್ಪಷ್ಟ ನಾನಾ ಕುಹೇ
ತುಕ ದೃಷ್ಟಾಂತ ಕುಮಾರ್ಗ ಕುತ್ಸಿತ ಕುಭಾಷಾದ್ಯಾದಿ ದೋಷಂಗಳಂ ೪೬

ಭಾಷಾಸಂಸ್ಕರಣಪ್ರಮಾಣನಯನಿಕ್ಷೇಪರ್ ಜಿನೇಂದ್ರಾಗಮಾ
ಶೇಷಜ್ಞರ್ ನಿಕಷಜ್ಞರಪ್ಪುದುಚಿತಂ ವಿದ್ವತ್ಸಭಾಮಧ್ಯದೊಳ್
ಕಾಳೋಗ್ರೋರಗನಂತೆ ದಾರುಣಮುಖ[1]ರ್ ದುಷ್ಟ[1]ರ್ ಖಳರ್ ದುರ್ಮುಖರ್
ದೋಷಾನ್ವೇಷಣರಪ್ಪವರ್ ಪೞಿದೊಡೇನಂ ಮಾೞ್ಪರೇಗೆಯ್ಯರೋ (?) ೪೭

ಗುಣದೋಷಮಿದೆಂದಱಿಯರ್
ಗುಣಂಗಳಂ ದೋಷಮೆಂದು ದೋಷಂ[3]ಗಳುಮಂ[3]
ಗುಣಮೆಂದು ಪೞಿವ ಪೊಗೞ್ವವ
ಗುಣಿಗಳ ಗುಣಮಂ ಗುಣಜ್ಞನೇನೆಣಿಸುವುದೇ ೪೮

ಜಿನಮಾರ್ಗಂ ಸ್ವೈರಮಾರ್ಗಂ ಜಿನಮತಮೆ ಮತಂ ಜೈನಧರ್ಮಂ ಸ್ವಧರ್ಮಂ
ಜಿನತತ್ತ್ವಂ ಸೂಕ್ತತತ್ತ್ವಂ ಜಿನಚರಿತಮೆ ನಿ[4]ರ್ಣೀತ[4] ಚಾರಿತ್ರಮಾದ
ತ್ತೆನಸುಂ [5]ವಿದ್ವಜ್ಜನಂ ಬಣ್ಣಿಸೆ ನೆಗೞ್ದುದಱಿಂದೀತನತ್ಯಂತ ವಿದ್ವ
ಜ್ಜನಸಂದೋಹ ಪ್ರಣೂತಂ ಪರಮಜಿನಮತಾಂಭೋಜಿನೀರಾಜಹಂಸಂ ೪೯

ಜಿನವಚನವಿನಿರ್ಗತ ವಾ
ಗ್ವನಿತೆಗೆ ಮಾಂಗಲ್ಯಕಾರಣಂ ಮಂಡನಮೀ
ತನ ವಾಗ್ವಿಲಾಸಮಾದ
ತ್ತೆನಿಸಿದನೀತನೆ ಸರಸ್ವತೀಮುಖಮುಕುರಂ ೫೦

---

1 ದೂರ್ಷ್ಟೈ (ಕ) 2 ದೂ (ಕ) 3 ಗಳಂ (ಕ) 4 ಸಿರಕ್ತ (ಕ) 5 ಧ್ವಜ (ಕ)

ಕ್ಷಯುವೃಜಿನಂ ಜಿನಸಮಯಂ
ಸ್ಮಯರಹಿತಂ ಹಿತವಚಃಪ್ರಿಯಂ ಪ್ರಿಯಧರ್ಮಂ
ಪ್ರಯುತಯುತಂ ಸದ್ವಿನಯಂ
ನಯವಾಕ್ಪ್ರಸರಂ ಸರಸ್ವತೀಮುಖಮುಕುರಂ ೫೧

ಸಹಜಕವಿ ಚತುರಕವಿ ನಿ
ಸ್ಸಹಾಯಕವಿ ಸುಕವಿ ಸುಕರಕವಿ ಮಿಥ್ಯಾತ್ವ
ಪ್ರಹರಕವಿ ಸುಭಗಕವಿ ನುತ
ಮಹಾಕವೀಂದ್ರಂ ಸರಸ್ವತೀಮುಖಮುಕುರಂ ೫೨

ಅಸಹಾಯನಾಗಿಯುಂ ಸುಜ
ನ ಸಹಾಯಂ ಮದವಿಹೀನನಾಗಿಯುಮೂರ್ಜಿ
ಪ್ರಸರೋತ್ಕಟನಾದಿಕನಂ
........................................................................................೫೩
...............................
...............................

ಪ್ರಕಟಯಶಂ ಜೈನೇಂದ್ರಾಂ
ಘ್ರಿಕಮಲಭೃಂಗಂ ಸರಸ್ವತೀ ಮುಖ ಮುಕುರಂ ೫೪

ಜನಕಂ ಶ್ರೀ ಜೈನಭಾಸ್ವತ್ಕ್ರಮಯುಗಲಸರೋಜಾತಭೃಂಗಂ ವಿಶಿಷ್ಟೇ
ಷ್ಟನಿದಾನಂ ಸತ್ಯರತ್ನಾಕರನೆನಿಸಿದ ಗೋವಿಂದರಾಜಂ ಮುನೀಂದ್ರಾ
ಭಿನುತ ಶ್ರೀವರ್ಧಮಾನವ್ರತಿಪತಿಗಳುಪಾಧ್ಯಾಯರಾರ್ಹಂತ್ಯಧರ್ಮಂ
ತನಗಾರ್ಮಂ ಭೂಷೆ ರತ್ನತ್ರಯಮೆನೆ ನೆಗಟ್ದಂ ಧಾತ್ರಿಯೊಳ್ ಶಾಂತಿನಾಥಂ ೫೫

ಸುಂದರ ತುಹಿನಾಚಳ ಸಂ
ಕ್ರಂದನಗಜ ಶಾರದಾಭ್ರ ತಾರಾದ್ರಿ ಪಯಃ
ಕುಂದೇಂದು ಯಶೋಭಾಸುರ
ನೆಂದು ಮನಂಗೊಂಡು ಕೊಂಡುಕೊನೆದಾದರದಿಂ ೫೬

ಮಿಗಿಲಾಗಿರ್ದಭಿಧಾನಸಂಹತಿಗಳಂ ಮೆಯ್ಮೆಯ್ಯೊ[1]ಳಿಟ್ಟ[1]ಟ್ಟುೞಿಂ
ಪೊಗೞ್ದೋ[3]ರಂತೆ ಸಮಸ್ತ ವಸ್ತುಕವಿಗಳ್ ಚೆಲ್ವಪ್ಪಿನಂ ಬಂಧುರೋ
ಕ್ತಿಗಳಿಂ ನೀನಭಿವರ್ಣಿಸಿಂತಿದನೆನಲ್ ಕೈಕೊಂಡು ತಾತ್ಪರ್ಯದಿಂ
ಬಗೆದೆಂ ಬಣ್ಣಿಸಲುಂತೆ ಪೊಗ್ಗೆ ಜಿನಧರ್ಮಖ್ಯಾತಿಯಂ ಬಣ್ಣಿಸಲ್ ೫೭

ಅವುಳ[2]ಕೃ[2]ತಿ ತಾಯೆತ್ತಬ್ರ (?)
ಸಮಾಲ್ಪಮತಿಯೆತ್ತ ಪೇೞ್ವ[3]ನಾಂ ಗಡಮೇಂ ಚಿ
ತ್ರಮೊ ಬಹುಳ ಬಹಳ ಗಗನ
ಪ್ರಮಾಣಮಂ ತಳದೊಳಳೆದು ಕಂಡರುಮೊಳರೇ ೫೮

ಭುವನಸ್ತುತ್ಯಜಿನಸ್ತವಂಗಳೊಳಗೊಂದಂ ಚಿತ್ತದೊಳ್ಮೆಚ್ಚಿ ಬೆ
ಚ್ಚವೊಲೆತ್ತಾನುಮೊಱಲ್ದು ಚಿಂತಿಸಿದವಂಗಂ ಸಾರ್ವ ಪುಣ್ಯಾಸ್ರವಂ
ಪವಣಿಲ್ಲೆಂದೊಡೆ ಮೇರೆಯಿಲ್ಲದ ಜಿನೋಕ್ತಾರ್ಥೋಕ್ತಿಯಂ ವ್ಯಕ್ತಮಾ
ಗೆ ವಲಂ ಭಕ್ತಿಯಿ[3]ನೋತು[3] ಪೇೞ್ವವನ ಪುಣ್ಯಪ್ರಾಪ್ತಿ ಸಾಮಾನ್ಯಮೇ ೫೯

ಪರಮಾತ್ಮಂ ನಿಷ್ಠಿತಾತ್ಮಂ ಜಿನಪತಿ ಪರಮಸ್ವಾಮಿ ಸದ್ಧರ್ಮಮಾರ್ಗಂ
ಗುರು ವಂದ್ಯಂ ವರ್ಧಮಾನ ವ್ರತಿಪತಿ ಸುಕುಮಾರಂ ಕಥಾನಾಯಕಂ ತ
ಚ್ಚರಿತಂ ಕಾವ್ಯಂ ಮದೀಯಾನುಜನನುಬಲಮೆಂದಂ[4]ದೆ[4] ದಲ್ ಮದ್ವಚೋವಿ
ಸ್ತರ ವಿನ್ಯಾಸಂ ಬಲಂಬೆತ್ತುದು ಪೆಱರ್ಗದನಿಂತಂತೆನಲ್ಕೆಂತು ತೀರ್ಗುಂ ೬೦

ಈ ಕೃತಿ ಕೇಳ್ದ ಭವ್ಯನಿವಹಕ್ಕೆ [5]ಚಮತ್ಕೃತಿ[5] ಮೆಚ್ಚುವೊಂಗೆ ಪು
ಣ್ಯಾಕೃತಿ ಭಾರತೀಸತಿಗೆ ಮಾಡಿದಳಂಕೃತಿ ಪುಷ್ಪಚಾಪ ಬಾ
ಣಾಕೃತಿ ಬಾಜಿಪೊಂಗೆ ಮುಕುರಾಕೃತಿ ಭಾವಿಸುವಂಗಗಾಧ ಬೋ
ಧಾಕೃತಿಯೆಂದೊಡಾರ್ಗಮಿದನಂತೆನಲುಂತೆನಲೆಂತು ತೀರ್ಗುಮೋ ೬೧

1 ಳಿದದ್ದ (ಕ) 2 ಮ (ಕ) 3 ನೊತ್ತು (ಕ) 4 ದಿ (ಕ) 5 ಚಮಂತ್ಕೃತಿಯ (ಕ)

ಸುಕವೀಂದ್ರರುಂ ವಿ[1]ನೇ[1]ಯ
ಪ್ರಕರಮುಮುಟ್ಟಿದವಜ್ಝೊಳೇನನಿಂ ನೋಡುವರೀ
ಸುಕುಮಾರಚರಿತದೊಳ್ ನೋ
ಟ್ಕೆ ಕಾವ್ಯಧರ್ಮಮುಮನಮಳಜಿನಧರ್ಮಮುಮಂ ೬೨

ನಿಯತಂ ಚತುರನುಯೋಗ
ಪ್ರಯೋಗ ಪೂರ್ವಾನುಯೋಗ ಸಾಗರವೀಚೀ
ಚಯದಿಂ ಪೊಱಪೊಣ್ಮಿದುದತಿ
ಶಯ ಸುಕಥಾನೂತ್ನರತ್ನರಶ್ಮಿ ಕಳಾಪಂ ೬೩

ಶ್ರೀಮದಘಾರಿ ವೀರಜಿನಸನ್ನಿಧಿಯೊಳ್ ವಿಪುಲಾದ್ರಿಯೊಳ್ ಜಿನ
ಸ್ವಾಮಿಮತೋಕ್ತಿಯಿಂ ಮಗಧನಾಯಕನಂ ತಿಳಿವಂತು ಗೌತಮ
ಸ್ವಾಮಿಗಳಲ್ಕಱಿಂ ತಿಳಿಯೆ ಪೇೞ್ದುದನೂರ್ಜಿತಮಾಗೆ ಪೇೞ್ವೆನು
ದ್ದಾಮಕವಿತ್ವತತ್ವರುಚಿಯಿಂ ಸುಕುಮಾರ ಕಥಾಪ್ರಬಂಧಮಂ ೬೪

ವ॥ ಅದೆಂತೆಂದೊಡಖಿಲಕರಿಮಕರದಂತಘಾತೋಚ್ಚಲಚ್ಛೀಕರೋತ್ತುಂಗ ಭಂಗುರತರತ್ತರಂಗಮಾಲಾಕೀರ್ಣ ಲವಣಾರ್ಣವ ಪರಿವೃತಮುಮೇಕ ಲಕ್ಷ ಪರಿಮಾಣ ಯೋಜನ ಶುಂಭದ್ವಿಷ್ಕಂಭಮುಂ ಸಮವೃತ್ತಾಕಾರಪ್ರಕಾರಮುಂ ಪೂರ್ವಾಪರಾಯತ ಹಿಮವನ್ಮಹಾಹಿಮವನ್ನಿಷಧನೀಲರುಕ್ಮಿಶಿಖರಿ ನಾಮಾಭಿರಾಮವರ್ಷಧರ ಧರಾಧರಾವಭಾಸಿಯುಂ ಭರತ ಹೈಮವತ ಹರಿವರ್ಷ ವಿದೇಹ ರಮ್ಯಕ ಹೈರಣ್ಯವತೈರಾವತಾಭಿದಾನ ಕ್ಷೇತ್ರಸಪ್ತಕ ವಿರಾಜಿತಮುಂ ಗಂಗಾ ಸಿಂಧು ರೋಹಿದ್ರೋಹಿತಾಸ್ಯಾ ಹರಿದ್ಧರಿಕಾಂತಾ ಸೀತಾಸೀತೋದಾನಾರೀ ನರಕಾಂತಾ ಸುವರ್ಣಮಾಲಾ ರೂಪ್ಯ ಕೂಳಾರಕ್ತಾರಕ್ತೋದಾಪ್ರಭೃತಿ ಚತುರ್ದಶಮಹಾನದೀಪ್ರವಾಹಕಮಯುಮುಂ ಜಂಬೂವೃಕ್ಷಲಾಂಛನರಮಣೀಯಮುಮಾಗಿ ನೆಗೞ್ತೆಗಂ ಪೊಗೞ್ತೆಗುಮಗುಂದಲೆಯಾದ ಜಂಬೂದ್ವೀಪದ ನಟ್ಟನಡುವೆ

ಇಳೆಯಂ ಸಾಸಿರಯೋಜನಂಬರೆಗಮಾನುಚ್ಛ್ರಿದೆನಿರ್ದಂ ಮಹೀ
ತಳಮಧ್ಯಸ್ಥನೆನಂತುಮಲ್ಲದೆಯುಮಿಂದ್ರಾವಾಸಮಂ ಮುಟ್ಟಿದೆಂ

1. ನ (ಕ)

ಬೆಳಗುತ್ತಿರ್ಪುವು ತಾರಕಾಪ್ರಭೃತಿಗಳ್ತಾವೆನ್ನ ನೆಂಬೊಂದು [ಪೆಂ
ಪಳವಟ್ಟಿರ್ಪಿನಮಂತದೇನೆಸೆದುದೋ ತನ್ಮಂದರೋರ್ವೀಧರಂ] ೬೫

ಅನಿಮೇಷಾವಳಿ ಮಾಳೆಗಟ್ಟಿ ತರದಿಂ ದುಗ್ಧಾಬ್ಧಿಯಂ ಮುಟ್ಟಿ ಕಾಂ
ಚನರೂಪ್ಯಂಗಳ ಕುಂಭದಿಂ ಮೊಗೆದು ಜೈ ಜೈಯೆಂಬಿನಂ ಪಾಕಶಾ
ಸನ ಹಸ್ತಾಗ್ರದೊಳೆತ್ತಿ ತಂದು ಕುಡೆ ಕೊಂಡಿಂದ್ರಂ ಜಿನೇಂದ್ರಂಗೆ ಮ
ಜ್ಜನಮಂ ಕುಂದದೆ ಮಾಳ್ಪನೆಂದೊಡದಱೊಳ್ಪಂ ಬಣ್ಣಿಸಲ್ಬಲ್ಕುರ್ಮೆ ೬೬

ಒಗೆದುಚ್ಛ್ರೋನ್ನತಿಯೊಂದು ಪೆಂಪು ಸಲೆ ಸೂರ್ಯೇಂದುಗ್ರಹಾನೀಕಮೋ
ಲಗಿಸುತ್ತುಂ ಬಲವರ್ಪ ಪೆಂಪು ಜಿನನಾಥಸ್ನಾನಕಲ್ಯಾಣದಿಂ
ಜಗದೊಳ್ಪೊಂಪುಱವೋದ ಪೆಂಪು ಸುರಕೇಳೀಲೀಲೆಯಿಂ ತಳ್ತ ಪೆಂ
ಪು ಗಿರೀಂದ್ರಾಹ್ವಯುಮಾದ ಪೆಂಪು ಮಿಗೆ ಪೆಂಪಂ ಪೆತ್ತುದಾ ಪರ್ವತಂ ೬೭

ಮಹಿಮೆವಡೆದಿಂತು ಸೊಗಯಿಸು
ವ ಹೇಮಕುತ್ಕೀಳದಿಂದೆ ತೆಂಕಣದೆಸೆಯೊಳ್
ಮಹಿ ಭರತಂ ಷಟ್ಖಂಡಾ
ವಹಮಲ್ಲಿ ಶುಭಾವಹಂ ವಿನೀತಾಖಂಡಂ

[ಅದು ಪೆಂಪಿಂಗೆ ತವರ್ ಸುಖಕ್ಕೆ ಕಣಿ ಸೌಖ್ಯಕ್ಕಾಗರಂ ಲೀಲೆಗಾ
ಸ್ಪದಮಾಯುಕ್ಕೆಱಿವಟ್ಟು ಭೋಗದ ನೆಲಂ ಸದ್ಧರ್ಮದಾರ್ಮಂ ವಿಲಾ
ಸದ ತಾಣಂ ಚದುರಿಂಗೆ ತಾ[1][ಯ್ಗ][1]ರು ವಿನೋದಕ್ಕಾದಿ ತನ್ಮಧ್ಯಸಂ
ಪದಮಾಗಿರ್ದುದು ವತ್ಸಮೆಂಬುದು ಜನಾಂತಂ ಸಂತತೋತ್ಸಾಹದಿಂ] ೬೯

ಆ ವತ್ಸವಿಷಯಮಖಿಲೋ
ರ್ವೀವದನಾಳಂಕೃತಂ ಧರಿತ್ರೀಕಾಂತಾ
ಲಾವಣ್ಯಹೇತು ಭೂಲಲ
ನಾವದನಲಲಾಮಮೆಂಬಿನಂ ಸೊಗಯಿಸುಗುಂ ೭೦

1. ಯ್ಯ (ಕ)

ಬಳಸಿರ್ದುದ್ಯಾನಮುದ್ಯಾನದೊಳೊದವಿದ ಪದ್ಮಾಕರಂ ಪದ್ಮಷಂಡಂ
ಗಳೊಳೆತ್ತಂ ಸುತ್ತುಗೊಂಡಿರ್ದಳಿಕುಳಮಳಿನೀಗೇಯದೊಳ್ಕಾಡಿ ತಳ್ತಿಂ
ದೊಳಮಿಂದೋಳಕ್ಕಳಂಕಾರಮನೊದವಿಸುಪುತ್ಕೋಕಿಲಂ ಕೋಕಿಲಾಳೀ
ಕುಳನಾದಕ್ಕಾದಮೊಳ್ಪಂ ಪಡೆವ ಶುಕನಿಕಾಯಂ ಕರಂ ರಯ್ಯಮೆತ್ತಂ ೭೧

ಬಗೆಗೊಳಿಸಿರ್ದ್ದ ಮಾದುಫಲಮುಣ್ಮುವ ಕಂಪನೆ ಬೀಱುತಿರ್ಪ ಸಂ
ಪಗೆ ಕರಮೊಪ್ಪಿ [ತೋರ್ಪ] ವಕುಳಂ ದೊರೆವೆತ್ತು ಮಡಲ್ತ ಬಳ್ಳಿಮ
ಲ್ಲಿಗೆಗಳ ಬಳ್ಳಿಮಾವುಗಳ ಬಳ್ಳಿಗವುಂಗಿನ ಬಳ್ಳವಳ್ಳಿಯೊಂ
ದಗಣಿತಲೀಲೆ ನೋಪ್ಪಿ ಜನಮಾಳೆಗೆ ಸೋಲಮನುಂಟುಮಾಡುಗುಂ ೭೨

ಮೊರೆವುನ್ಮತ್ತಮಧುಬ್ರಜಂ ಸುಳಿವಕಾದಂ[1][ಬಂ][1] ತೆಱಂಬೊಯ್ದು ಭೋ
ರ್ಗರೆದೆತ್ತಂ ಪುಗಲೆಂಬ ಕೋಕಿಲೆ ಸಮಂತಾದಟ್ಟಿಱಿಂ ಕೂಡುತಿ
ರ್ಪ ರಥಾಂಗಂ ನಲಿದಾಡಿ ನರ್ತಿಸ ನವಿಲ್ ಬಂಡುಂಬ ಪೆಣ್ದುಂಬಿ ಸು
ಸ್ವರದಿಂದೋದುವ ಕೀರಮಾರ ಬಗೆಗಂ ಸಮ್ಮೋಹಮಂ ಮಾಡವೇ ೭೩

ನವಗಂಧೋದ್ಗಮಗಂಧಶಾಳಿ ಶುಕಲೀಲಾಳಾಪದಿಂದಾದಮೊ
ಪ್ಪುವ ಚೆನ್ನಲ್ ಸಹಕಾರಪಕ್ವರಸಸಾರಾಸಾರಪಾನೀಯದಿಂ
ಸವಿಶೇಷಂ ಬೆಳೆದೊಪ್ಪಿ ತೋರ್ಪ್ಪ ಕಳಮಂ ತಾನೆಲ್ಲಿಯುಂ ಚೆಲ್ವ ಪೊ
ಣ್ಮುವಿನಂ ದೇಸೆಗೆ ದೇಸೆವೆತ್ತು ಬಹುಪೊಸಂ ಮಾಸಂ ದೇಶದೊಳ್ (?) ೭೪

ಎಡೆವಱಿಯದೊಳ್ಪೊಡಂ
ಬಡೆ ಬೆಡಂಗು ಪಿಂಗದೆ ವಿಲಾಸಮೋಸರಿಸದೆ ನೇ
ರ್ವೊಡೆ ನಗರ ಖೇಡ ಖರ್ವಡ
ಮಡಂಬ ಪತ್ತನಮವೆತ್ತಲುಂ ಸುತ್ತಿಱಿಗುಂ ೭೫

ಅತಿಶಯಮಾದ ದೇವ[2]ಗೃ[2]ಹಸಂಕುಳದಿಂ ಕರಮೊಪ್ಪುವ[3]ಪ್ಸ[3]ರಃ
ಪ್ರತತಿವಿಲಾಸದಿಂ ವಿಬುಧಸಂತತಿಯಿಂ ದಿವಿಜಾವನೀಕ ಸಂ
ಹತಿಯಿನಿದೊಂದು ಕಲ್ಪಮವಿಕಲ್ಪದಿನುರ್ವಿಯೊಳಾದುದೆಂಬ ವಿ
ಶ್ರುತವಚನಂಗಳಿಂ ನಿಖಿಲಶೋಭೆಯನಾಂತುದು ತನ್ಮಹೀತಳಂ ೭೬

---

1 ಬೊಂ (ಕ) 2 ನೃ (ಕ) 3 ಸ್ಸ (ಕ)

ಇಳಿತಂದತ್ತಿಂದ್ರಲೋಕಂ ಗಗನವಲಯದಿಂ ಮಧ್ಯಲೋಕಕ್ಕೆ ಧಾತ್ರೀ
ತಳದೊಳ್ ಭೋಗೀಂದ್ರಲೋಕಂ ರಸೆಯಿನೊಗೆದು ನಿಂದತ್ತು ವಿದ್ಯಾಧರೋರ್ವೀ
ವಲಯಂ ತದ್ರಾಜತಾದ್ರೀಂದ್ರದಿನನುನಯದಿಂ ಬಂದು ಬೇಱಕೊಂದು ಪೆಂಪಂ
ತಳೆದತ್ತೆಂಬಂದದಿಂದಂ ಸೊಗಯಿಸುಗುಮಿಳಾಚಕ್ರದೊಳ್ ವತ್ಸದೇಶಂ

ವ|| ಇಂತು ಮದನಮಂಗಲ ವೀರಲಕ್ಷ್ಮೀವಿಲಾಸನಿಳಯಮೆನಿಸಿದ ವತ್ಸಜನಪದವನಿತೆಗೆ ವದನಮೆನಿಸಿ|

ಆಡುವವಹಿವಿಲಾಸದಿಂ (?)
ದೆಡೆಯುಡುಗದೆ ರತ್ನದಿನನೂನ ಗಾಂಭೀರ್ಯದಿನಾ
ಕಡಲನವಗಯಿಸಿ ತೋರ್ಪುದು
ವಿಡಂಬಿ ಮಹಿಮಾವಳಂಬಿ ಕೌಶಂಬಿಪುರಂ ೭೮

ಅಂಬುಧಿವೇಷ್ಟಿತಾಖಿಳಧರಾತಳದೊಳ್ ಪುರಮಿನ್ನದಿನ್ನುಮಿ
ಲ್ಲೆಂಬ ಪೊಗೞ್ತೆಗತ್ತಳಗಮೆಂಬ ನೆಗೞ್ತೆಗೆ ಜನ್ಮಭೂಮಿ ತಾ
ನೆಂಬ ಜಸಕ್ಕೆ ತಾ[1][ಯ್ಗರು][1]ವಿದೆಂಬ ವಿಭೂತಿಯುನಾಂತುದಿಂತು ಕೌ
ಶಂಬಿಪುರಂ ಜಿತಾಮರಪುರಂ ಕಮನೀಯ ಚತುಷ್ಕಗೋಪುರಂ ೭೯

ವ|| ಅದನಾಳ್ವನವನತಾರಾತಿನೃಪ ಮಣಿಮಯಕಿರೀಟ ಪ್ರಭಾಲೀಢಚಳನನಳಿನಯುಗ್ಮನುದಾತ್ತವೀರಲಕ್ಷ್ಮೀಲತಾರ್ಪಣದ್ರುಮಾಯಿತಾಯತೋತ್ತುಂಗಾತ್ಮ ಕೌಕ್ಷೇಯಕಸ್ತಂಭನಧಃಕೃತಾನಂತ ಚಿರಂತನ ಜಗತ್ಪ್ರಣೂತ ಭೂತಳಾಧಿನಾಥನರ್ಥಿಸಂಘಾತನವಬರ್ಹಿಣಾನಂದಕರಣ ಪ್ರತ್ಯಗ್ರಜಲಧರಾಗಮಂ ನಿರಂತರ ದಿಗಂತರಾಳಸ್ಥಿತದಂತಿಸಂತಾನದಂತಾಂತರೋಪಾಂತಪರಿಚುಂಬಮಾನ ಯಶಃ ಕಾಂತಾಕಾಂತನುತ್ತುಂಗಭಂಗುರತರತ್ತರಂಗಸಂಘಾತಾರ್ಣವಪರೀತಾಶೇಷಕ್ಷ್ಮಾ ಚಕ್ರಸಂರಕ್ಷಣದಕ್ಷದಕ್ಷಿಣಭುಜೋತ್ಖಡ್ಗನುದ್ದಾಮ ದಾರುಣ ಪ್ರತಾಪಕೋಪ ಪಾವಕ ಕಬಳಿತಾರಾತಿಬಳನತಿಬಳನೆಂಬೊಂ

1 ಯ (ಕ)

ಆ ಹರಿವಿಭವನ ನಯನನು ।
ನೋಹರಿ ಹರಿಣಾಕ್ಷಿ ಹಂಸಗಾಮಿನಿ ಮಧುಪ ॥
ವ್ಯೂಹನಿಭ ಕುಟಿಳಚಿಕುರವು ।
ನೋಹರೆ ಮನಸಿಜನ ಕಣೆಗೆ ದೊಣೆಯೆನೆ ನೆಗೞ್ದಳ್ ॥ ೭೯ ॥

ವ ॥ ಅಂತು ಮನೋಹರಿ ಮಹಾದೇವಿಯೊಳಾ ಧರಾಧೀಶ್ವರನಿಷ್ಟವಿಷಯ ಕಾಮಭೋಗಂಗಳನನವರತಮನುಭವಿಸುತ್ತುಂ ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರೆಯಿರೆ

ಮಲೆಪರ್ಮಾಱಾಂಪರಿಲ್ಲಕ್ರಮದಿನದಟರಾಟಂದರಿಲ್ಲುರ್ಕಿ ಬೇಡ ।
ರ್ಚಲದಿಂ ಮಾರ್ಕೊಂಡರಿಲ್ಲೊಟ್ಟಜೆನೆರಸು ಕುಱುಂಬರ್ತಱುಂಬಿರ್ದ್ದರಿಲ್ಲೆ
ತ್ತಲುಮುದ್ದಂ ಬಂದು ದಳ್ಳೆಂದುರಿವ ರಿಪುಗಳಿಲ್ಲಳ್ಕಿಬಿಕ್ಕುರ್ಕಿತ್ತುರ್ಕಿ ಭೂಮಂ ।
ಡಳಮಾಜ್ಞಾಸಿದ್ಧಮಾದತ್ತತಿಬಳವಿಭುಗಂಭೋಧಿಪರ್ಯಂತಮಾಗಳ್ ॥ ೮೦ ॥

ಜಿನಪಾದಪಂಕಜಭ್ರಮ
ರನೆನಿಸಿ[1] ಜಿನಸಮಯದಿವ್ಯಭವನೋತ್ತಮಕಾಂ ॥
ಚನಕಳಶನೆನಿಸಿ ಜಿನಶಾ ।
ಸನದೀಪಕನೆನಿಸಿ ನೆಗೞ್ದನಾ ಧರಣೀಶಂ ॥ ೮೧ ॥

ದಯೆಯಿಂ ಮರ್ಯಾದೆಯಿಂ ಮೇರೆಯಿನನುಪಮ ಸನ್ಮಾನದಿಂದಾನದಿಂ ಸ ।
ತ್ಪ್ರಿಯದಿಂದಂ ಸಂತತೋತ್ಸಾಹಮನನವರತಂ ಮಾಡುತುಂ ನೂತ್ನರತ್ನ
ತ್ರಯಭೂಷಾಭೂಷಿತಾಂಗಂ ಸುಖದಿನರಸುಗೈಯುತ್ತಮೊಪ್ಪಿರ್ದ ಕೌಶಂ ।
ಬಿಯೊಳತ್ಯುತ್ಸಾಹದಿಂದಂ ಪರಮಜಿನಮತಾಂಭೋಜಿನೀ ರಾಜಹಂಸಂ ॥ ೮೨ ॥

ಗದ್ಯ ॥ ಇದು ಸಮಸ್ತ ವಿನಯಜನವಿನುತ ಶ್ರೀವರ್ಧಮಾನ ಮುನೀಂದ್ರ ವಂದ್ಯ ಪರಮ ಜಿನೇಂದ್ರ ಶ್ರೀಪಾದಪದ್ಮ ವರಪ್ರಸಾದೋತ್ಪನ್ನ ಸಹಜಕವೀಶ್ವರ ಶ್ರೀಶಾಂತಿನಾಥಪ್ರಣೀತಮಪ್ಪ ಸುಕುಮಾರಚರಿತ್ರದೊಳ್ ಪೀಠಿಕಾಪ್ರಕರಣಂ ಪ್ರಥಮಾಶ್ವಾಸಂ

1. ರನೆನಿಸಿಯು (ಸ)

## ದ್ವಿತೀಯಾಶ್ವಾಸಂ

ಶ್ರೀಮಹಿತನಹಿತಸಕಲಮ ।
ಹೀಮಹಿತಪಯೋಧರಪ್ರಭಂಜನನನ್ವೀ ॥
ತಾಮರವಿಲಾಸನೆಸೆದನಿ ।
ಳಾಮಂಡಳದೊಳ್ ಸರಸ್ವತೀಮುಖಮುಕುರಂ ॥ ೧ ॥

ಆತಂಗೆ ವಿಜಯಲಕ್ಷ್ಮೀ ।
ಪ್ರೀತಂಗೆ ದಯಾನ್ವಿತಂಗೆ ನಿರುಪಮಗುಣವಿ ॥
ಖ್ಯಾತಂಗೆ ವಿಜಿತಶತ್ರು ।
ವ್ರಾತಂಗೆ ಪುರೋಹಿತಂ ನಿಜ ಸ್ವಾಮಿಹಿತಂ ॥ ೨ ॥

ಕುಶಲಮತಿ ವಿ[1]ಶ್ವ[1]ವಿದ್ಯಾ ।
ವಿಶದಂ ...................................... ಮಹೋದಾರಗುಣಂ ॥
ವಿಶದಯಶೋನಿಳಯಂ ಸೋ ।
ಮಶರ್ಮನೆಂಬೊಂ ದ್ವಿಜನ್ಮವಂಶಲಲಾಮಂ ॥ ೩ ॥

ಆ ವಸುಧಾಮರಾಗ್ರಣಿಗೆ ಕಾಶ್ಯಪಿಯೆಂಬೊಳುದಾತ್ತಕೀರ್ತಿಲ ।
ಕ್ಷ್ಮೀವಿಭವಾಭಿರಾಮೆ ಗುಣಧಾಮೆ ಕುಲಾಂಗನೆ ಹಾವಭಾವಶೋ
ಭಾವಹರೂಪವಿಭ್ರಮವಿಲಾಸಸಮನ್ವಿತೆ ಕೋಮಳಾ[2]ಸಿ[2]ತೇಂ ।
ದೀವರಲೋಳನೇತ್ರೆಯೆನೆ ಸಂತೊಸದಿಂ ಸುಖಮಿರ್ದರಿರ್ಪಿನಂ ॥ ೪ ॥

ಅಭಿನುತಮಂ ಶ್ರೀಮಹತ್ತರ ।
ವಿಭೂತಿಯಂ ತಳೆದ ಸೋಮಶರ್ಮಂಗಂ ಶ್ರೀ ॥
ನಿಭೆ ಕಾಶ್ಯಪಿಗಂ ಸುತರ ।
ಗ್ನಿಭೂತಿಯುಂ ವಾಯುಭೂತಿಯುಂ ಪೆಸರಿಂದಂ ॥ ೫ ॥

---

1. ಶ್ರು (ಕ) 2. ಸ್ವಿ (ಗ)

ವ || ಆ ಬಾಲಕರ್ ಬಾಲ್ಯದಿಂತೊಟ್ಟು ಗೋಳಾಂಗೂಳರಂತೆ ಸಹಜಚಾಪಲ್ಯರುಂ ಜಳೂಕಾಮುಖರಂತೆ ದೋಷಗ್ರಾಹಿಗಳುಂ ಸುರಶರಾಸನದಂತೆ ನಿರ್ಗುಣರುಂ ತೀಕ್ಷ್ಣಕೌಕ್ಷೇಯದಂತೆ ನಿಸ್ತ್ರಿಂಶಭಾವರುಂ ಶಿಶಿರಕರನಿಕರದಂತೆ ಕುಮುದಪ್ರಕಾಶಕರರುಂ ಖರಕರನಂತೆ ಖರದಂಡಪ್ರಿಯರುಂ ಉದಧಿಯಂತೆ ಜಡಸ್ವಭಾವರುಂ ವಿಷನೋರಗನಂತೆ ದ್ವಿಜಿಹ್ವರುಂ ಸಾರ್ವಭೌಮೋಪಜೀವಿಗಳಂತೆ ವಿಷಯಾಸಕ್ತರುಮೆನಿಸಿ ಮಾತಾಪಿತೃಗಳ ಮಾತುಗಳಂ ಕೈಕೊಳ್ಳದೆ ಸರ್ವಸ್ವಮಂ ಕೊಂಡು ಕೇಡಾಳಿಗಳಾಗೆ

ತಿಱಿಕಲ್ಲಾಡುವ ಬೊಟ್ಟುವೋರಿಸುವ ಸೆಂಡಂ ಪೊಯ್ವ ಬಾದಿಂಗೆ ಕೈ ।
ನಿಱಿದೆರ್ದಾಡುವ ಕೋೞಿಲಾವಗೆತಗರ್ಕೋಣಂ ವಿದಿಕೌಂಚೆಂಬಿವಂ(?)
ಸೆಱೆಗೆಯ್ದಿಕ್ಕೆಗೆ ಪೂಣ್ದು ಪೋರಿಸುವ ನಾನಾಕ್ರೀಡೆಯಿಂದಿರ್ವರುಂ ।
ತಱಿಸಂದುದ್ಧತಭಾವದುಬ್ಬರದಿನೇನುದ್ವೃತ್ತರಾಗಿರ್ದರೋ || ೬ ||

ವ || ಅಂತುಮಲ್ಲದೆಯುಂ

ನಗರಾಭ್ಯಂತರ ದೇವತಾಭವನದೊಳ್ ಚೌವಟ್ಟದೊಳ್ ಬೀದಿವೀ ।
ದಿಗಳೊಳ್ ಜೂಜಿನದಿಂಡೆಯೊಳ್ ತ[1]ಗ[1]ರಕೇಳೀ ವಿದ್ಯೆಯೊಳ್ ದುರ್ಜನೋ
ಪಗತೋದ್ದೇಶದೊಳಂ ಪಣ್ಯವರ್ಮವೀಧಿವ್ರಾತದೊಳ್ ಮಾವಗಂ(?) ।
ತಗುಣಾತ್ಮರ್ ವಿನಯಸ್ಪೃಹೀಣರವಿನೀತರ್ ನೀತಿಗೆಟ್ಟಾಡುವರ್ || ೭ ||

ತಂದೆ ಕಡಂಗಿ ಕಲ್ಪಿಸುವ ಕಲ್ಪಿಯನೊಲ್ಲದೆ ತಾಯ್ಮಗುಟ್ದಿ ನಿ ।
ರ್ವಂದದಿನೆಯ್ದಿ ಬಗ್ಗಿಸುವ ಬಗ್ಗಣೆಗಳ್ಕದೆ ಮಿತ್ರವರ್ಗಮೇ ||
ನೆಂದೊಡಮೆಂದುದಂ ನೆಗಱದುದ್ಧತಿಯಿಂದಮವಂದಿರುರ್ಕ್ಕಿ ದ ।
ಕ್ಕುಂದಲೆವಾಯ್ವರಂತುಟಿ ಬಹುವ್ಯಸನಾರ್ತರನಾರೊ ಬಾರಿಪರ್ || ೮ ||

ಹರಿಣಿ || ಸಿರಿಯ ತವಿಲಿಂ ಮಕ್ಕ[2]ಳ್ಕೈ ಮಿ[2]ಕ್ಕು ಪೇೞ್ದುದು ಗೆಯ್ಯದಿ ।
ರ್ಪಿರವನವನೀದೇವಾಮ್ನಾಯಕ್ಕೆ ನೊಚ್ಚಿದನಾಗಿ ಮೆ ||
ಯ್ಗುರಿವೆಸಕದಿಂ ನಿಚ್ಚಂ ಬೆಂಬಿರ್ದು ಚಿಂತಿಸಿ ದುಃಖದೊಳ್ ।
ಪಿರಿದುಮವರಿಂ ಕಣ್ಗೆಟ್ಟಂ ಭಟ್ಟಂ ನಿಕೃಷ್ಟರ ದೂಸಱಿಂ ||೯ ||

---

1 ಕ (ಗ) 2 ಳಂಮಿ (ಕ)

ಕಲ್ಮಷಿಕವಾಗಿ ತನ್ನೊ ।
ಕ್ಕಲ್ಮಕ್ಕಳಿನೆಕ್ಕಸಿರ್ಕವಾದೊಡೆ ಪಾರ್ವಂ ॥
ವುಲ್ಮಲನೆ ವುಱುಗಿ ಕೂಡೆಯೊ ।
[1]ಡಲ್ಮ[1]ಸಿಯುಪ್ಪಿನೆಗವೆುಯ್ದ್ವೆ ಬೆದವೆದ ಬೆಂದಂ ॥ ೧೮ ॥

ವ ॥ ಇಂತಾತ್ಮೀಯಾತ್ಮಜರಿನಾದ ಕುಲಾಪವಾದಪರಾಭವದ ದಾವಾನಳದಿಂ ದ[ಂ]ದಹ್ಯಮಾನಮಾನಸನುಮಸಹ್ಯಮಾನ ಚಿಂತಾಂತರಂಗನುಮಾಗಿ ಕೆಲವು ಮಿಸಮಿರ್ಪವಸರದೊಳವಸರಂಬಡೆದನೆಂಬಂತೆ

ತೆಱಪುವಡೆದಡಸಿ ರುಜೆ ಮೆ ।
ಯ್ಮಾಱುಗುವಿನಮುವುಂಕಿ ಸೋಂಕಿ ನಿಃಕರುಣತೆಯಿಂ ॥
ಕಱುತು ಜವನೆಂಬ ಬಱಸಿಡಿ ।
ಱಲೆಱಗಿದುದೆಗುವವೊಲಹಿಯನಹಿಗರಳಹರಂ ॥ ೧೧ ॥

ವ ॥ ಅಂತು ಸೋಮಶರ್ಮಂ ಲೋಕಾಂತರಿತ [ನಾದ] ನೆಂಬುದನತಿಬಲಮಹಾರಾಜಂ ಕೇಳ್ದು

ವೇದವಿದಂ ಸಕಳಕಳಾ ।
ವೇದಿ ಸಮಸ್ತಾಧಿಕಾರಪರಿಚಿತನಾಶೀ ॥
ರ್ವಾದಪ್ರಿಯಂ ಪರಿವೃತ ।
ನಾದನೆ ವಿಶ್ರುತ ಬಹುಶ್ರುತೋದಾತ್ತಯಶಂ ॥ ೧೨ ॥

ಆದೊರೆಯ ಹಿತಪುರೋಹಿತ ।
ನಾದೊರೆಯ ಸುಮಂತ್ರಿ ಕಱೆದನೆಂದೊಡೆ ಪೆಱದೇ ॥
ನೀ ದೊರೆಯ ರಾಜ್ಯಮೆನಗಿದ ।
ನಾದರಮುಶ್ಲಾಘನೀಯಮುಫಳಮುಸೇವ್ಯಂ ॥ ೧೩ ॥

---

1 ಲ್ಮ (ಗ)

ವ ॥ ಎಂದು ಪಿರಿದುಂ ಕಟ್ಟುಕಡೆದು ಸೋಮಶರ್ಮನ ಮಕ್ಕಳಪ್ಪಗ್ನಿಭೂತಿಯುಂ ವಾಯುಭೂತಿಯುಮಂ ತನ್ನಲ್ಲಿಗೆ ವರಿಸಿ ತದೀಯ ಹೃದಯಾಂತರ್ಗತ ಶೋಕಾಗ್ನಿ ಜ್ವಾಲಾಕಲಾಪಮನಾತ್ಮೀಯವಚೋವಿಸ್ತರಸಾರವಾರಿಪ್ರವಾಹದಿಂ ಪ್ರ[1]ಶ[1]ಮಿಸಿ ತಾಂಬೂಲಾದಿ ದಾನಸನ್ಮಾನಪುರಸ್ಸರಮವರ ಪೂರ್ವವೃತ್ತಿಯುಮಂ ಕಮ್ಮವಟ್ಟಿಯುಮನಿತ್ತು ಬೀಡಿಂಗೆವೋಗಿಮೆಂಬುದುಂ

ಅವರನುನಯದಿಂ ಮನೆ ।
ಗೆ ವಂದು ಕಾಶ್ಯಪಿಯ ದುಃಖಮಂ ಕಳೆದು ಮಹೋ
ತ್ಸವಮಪ್ಪಂತಿರೆ ಸಂತೋ ।
ಷವಾರ್ತೆಯುಂ ಪೇಳ್ವಿ ಸಂತಮಿರೆ ಕೆಲದಿವಸಂ ॥ ೧೪ ॥

ವ ॥ ಒಂದುದಿನಮಾ ನರೇಂದ್ರಂ ಲೀಲೆಯಿಂದೊಡ್ಡೋಲಗಂಗೊಟ್ಟಿರ್ದಶೇಷ ವಿದ್ವಜ್ಜನ ಸಭಾಭ್ಯಂತರ ಮೃಗೇಂದ್ರವಿಷ್ಟರಾರೂಢನಾಗಿರ್ಪುದುಂ ಪರನೃಪಾಸ್ಥಾನದಿಂ ವಿಜಯಜಿಹ್ವನೆಂಬೊನೊರ್ವ ವಾದಿ ಸಕಲಕಲಾವೇದಿ ಸಂವಾದಾರ್ಥಿಯಾಗಿ ಬಂದು ನಿಜ ವಿದ್ಯಾಡಂಬರಮಂ ಮೆಱೆಯಲೆಂದರಮನೆಯ ಬಾಗಿಲೊಳ್ ನಿಂದು ಪತ್ರಾಲಂಬನಂ ಮಾಡಿರ್ಪುದುಂ ತದ್ವೃತ್ತಾಂತಮೆಲ್ಲಮನರಸನಱಿದು ಬರವೇಳ್ವುದುಮಪೂರ್ವಮಪ್ಪ ಶ್ಲೋಕಸೂನ್ಯಾಸಸಮಾಸಸಂಸಾರವಚನರಚನೆಗಳಿನತಿಬಳನುಮಂ ತತ್ಸಭಾಜನಮುಮಂ ಮನಂಗೊಳಿಸಿ

ಪದವಿದ್ಯಾಮಾರ್ಗದೊಳ್ ವ್ಯಾಕರಣಪರಿಣತಾಳಾಪದೊಳ್ ಮಿಕ್ಕಪಟ್ತ ।
ರ್ಕದೊಳಾರ್ಗಂ ದುರ್ಗಮೆಂಬಂತಿರೆ ವಿಲಸದಲಂಕಾರದಿಂ ತಳ್ತುಪನ್ಯಾ
ಸದ ವಿನ್ಯಾಸಂ ಬಲಂಬೆತ್ತೆಸೆಯೆ ನೃಪಸಭಾಮಧ್ಯದೊಳ್ ಪೆರ್ಚಿ ವಾ[1]ಗ್ಘ[1]ಂ ।
ಘದೊಳಾಗಳ್ ಬೆಟ್ಟಿನಲ್ಪಿಟ್ಟಿನಲೆಡೆಗುಡದಾಶ್ಚರ್ಯಮಂ ತಾಳ್ದಿ ನಿಂದಂ ॥ ೧೫ ॥

---

1 ಸ್ಥ (ಗ)

ವ ॥ ಅಂತುತ್ತರೋತ್ತರೋಪನ್ಯಾಸನವೃತ್ತಿಸಂಪತ್ತಿಯಂ ತಾಳ್ದಿದ ಪರವಾದಿಗೆ ಪ್ರತ್ಯುತ್ತರಂಗುಡುವನ್ನರಾರುಮಿಲ್ಲದಿರ್ಪುದಂ ಕಂಡು ತಲೆಯಂ ತೂಗಿದೂಗಿ ವಿಸ್ಮಯೋದಾತ್ತಚಿತ್ತನಾಗಿ ಸೋಮಶರ್ಮಾಪತ್ಯರಂ ಬರವೇೞ್ಪೆಂಬುದುಮಲ್ಲಲ್ಲಿಗೆಲ್ಲರುಂ ಪರಿತಂದಗ್ನಿಭೂತಿಯುಮಂ ಪಕ್ಕದೊಳಿರ್ದ ವಾಯುಭೂತಿಯುಮಂ ಕಂಡು ವಿಜಯಜಿಹ್ವವಾದಿಯಿನಾದ ವೃತ್ತಾಂತಮೆಲ್ಲಮಂ ಸವಿಸ್ತರಮುಱಿಪಿ

ನಡೆಯಿಂ ತೊಡರ್ದವನೊಳ್ಗಿಲೆ ।
ನುಡಿಯಿಂ ನೀಮೆಂದು ಬಂದವರ್ನುಡಿವುದುಮಾ ॥
ಜಡರಳ್ಕಿ ಬಳ್ಕಿ ನಡನಡ ।
ನಡುಗಿ ಸುರಳ್ದುಗಿದು ಸುಗಿದು ಬಂದತಿಭಯದಿಂ ॥ ೧೬ ॥

ವ ॥ ತನ್ನೃಪೇಂದ್ರಭವನೋಚಿತೋದ್ದೇಶದೊಳ್

ಇಕ್ಕಿದ ಲೋಹಾಸನದೊಳ್ ।
ತಕ್ಕ[2]ರ[2] ಮಾನ್ಯರ ವಿಶಿಷ್ಟರಂದದಿನೊಳಗಂ ॥
ಪೊಕ್ಕು ಸಭಾಸಂಯೋಗ್ಯರ ।
ಪಕ್ಕದೆ ಕುಳ್ಳಿರ್ದೊಡತಿಬಲಕ್ಷ್ಮಾಪಾಲಂ ॥ ೧೭ ॥

ಪೃಥ್ವಿ ॥ ನಿರೀಕ್ಷಿಸಿ ನಿಕೃಷ್ಟದುಷ್ಟಗಣರಂ ಗತಪ್ರಜ್ಞ [ರ]ಂ ।
ನಿರಂತರ ದಿಗಂತರೋಪಗತ ದುರ್ಯಶಃಪ್ರಾಪ್ತರಂ ॥
ದುರಾತ್ಮರನಖಿಲ್ಯರಂ ಬಳಿಕ ಸೋಮಶರ್ಮಾತ್ಮಜಾ ।
ತರಂ ಖಳವಿನೀತರಂ ವಿಕೃತಮಾರ್ಗ ವಿಖ್ಯಾತರಂ ॥ ೧೮ ॥

ಆಗ್ರಹಿಸಿ ತರ್ಕಶಾಸ್ತ್ರಸ ।
ಮಗ್ರತೆಯಂ ತೋರ್ಪುದಿಲ್ಲಿ ನೀಮೆನೆ ಕುಳಿಕಾ ॥
ಹಿಗ್ರಸ್ತರಂತೆ ನುಡಿವುದ ।
ವಗ್ರಹಮೆಂದುರ್ಗುಗೊಂಡರಂತೆ ನಿತಾಂತಂ ॥ ೧೯ ॥

1 ಲ್ಲಿ (ಗ) 2 ದ (ಗ)

ವ || ಮೂಗುವಟ್ಟು ಬಾಯ್ವಿಟ್ಟು ನೀರೊಳ್ ಮುಱುಗಿದರಂತುಸಿರ್ವಿಡಿವಂತು[ಂ]ಪಾವಡರ್ದರಂತುಂ ಮೆಯ್‌ಬೆಮರುತ್ತುಮಿದಿರೊಳ್ ಕುಳ್ಳಿರ್ದ ವಿಜಯಜಿಹ್ವವಾದಿಯುಂ ಭೋಂಕನೆ ಕಂಡು

ಬೆಕ್ಕಂ ಕಂಡಿಲಿಯಂತಿರು |
ಪಿರ್ಕಿಸಿದು ಕುಸುಂಗಿ ತತ್ಸಭಾಭ್ಯಂತರದೊಳ್ ||
ಮಾರ್ಕೊಳ್ಳದೆ ಮಾರ್ನುಡಿಯದೆ |
ಬಿಕ್ಕೆನ್ನದೆ ಮಿಡುಕದಿರ್ದರಂತಿರ್ಪಿನೆಗಂ || ೨೦ ||

ವೇದವಿದಂ ಸಕಳಕಳಾ |
ವೇದಿಸಮಸ್ತಾಧಿಕಾರ ಪರಿಚಿತನಾಶೀ||
ರ್ವಾದ ಪ್ರಿಯಂ ಪರಿವೃತ |
ನಾದನೆ ವಿಶ್ರುತ ಬಹುಶ್ರುತೋದಾತ್ತಮತಂ || ೨೧ ||

ಅಯಶೋಮೂರ್ತಿಗಳತಿ ದು |
ರ್ನಯವರ್ತಿಗಳನೂನಸಪ್ತವ್ಯಸನಾ ||
ಶ್ರಯರೆಂದಿರ್ದ[2]ಪ[2]ರಿರ್ದ |
ಲ್ಲಿಯೆ ನುಡಿದ[ಂ]ಸಭೆ[1]ಗೆ[1] ಸೋಮಶರ್ಮಾತ್ಮಜರಂ || ೨೨ ||

ಅಱಿಯುತ್ತಂ ಕಲ್ಲೊಳ್ ನಾ |
ರಱಿಸುವುದುಂ ಪಾಪಸೂತ್ರದೊಳ್ ಧರ್ಮಮನೋ ||
ತಱಿಸುವುದುಮಿವರೊಳಕ್ಕರ |
ಮಱಿಸುವುದುಂ ಭಾವಿಪಂದು ನಿಷ್ಫಳಮಲ್ತೇ || ೨೩ ||

---

1 ಯೊಳುಸಗಿ (ಗ)

ಬೀಣೆಯ ಕೊಟಿಲ ಬೆದಂಡೆಯ ।
ಗಾಣರ ಬಱವಿಡಿದು ಸುೞದು ಕುಂ[ದಿಂ]ಕಥಕ ॥
ಶ್ರೇಣಿಯೊಡನೆಳಸಿ ಬಳಸುವ ।
ನಾಣಿಲಿಗಳನೀ ಬುಧಾಳಿಯೊಳ್ ಪುಗಿಸು[1]ವುದೆ[1] ॥ ೧೪ ॥

ಈ ಜಡರನತರ್ಕಿತಬುಧ ।
ರಾಜಸಭಾಸದರೊಳಿರಿಸಿ ರಿಪುನೃಪಮುಕುಟ ॥
ವ್ರಾಜಿತಪದಾಬ್ಜ ವಿಬುಧಸ ।
ಮಾಜದೊಳಾದತ್ತು ಹಾಸ್ಯರಸಮುಪ್ರತಿಮಂ ॥ ೧೫ ॥

ವ ॥ ಎಂದಿಂತು ನಾನಾಪ್ರಕಾರದಿಂ ತಿರಸ್ಕರಿಸಿ ನುಡಿವುದುಮಾತಿಬ
ಳನತಿಲಜ್ಜಾಭರದಿಂ ಸಿಗ್ಗಾಗಿ

ಎನಗೆ ಹಿತಂ ಪುರೋಹಿತನನೂನಗುಣಾಗ್ರಣಿ ಸೋಮಶರ್ಮನಾ ।
ತನ ತನುಜಾತರಪ್ರಮಿತಶಾಸ್ತ್ರವಿಶಾರದರಾದೊರಕ್ಕಮೆಂ
ಬಿನಿತನೆ ಮೆಚ್ಚಿ ಬಿಚ್ಚತಿಕೆಯಿಂ ಪರಿಭಾವಿಸದೀ ದುರಾತ್ಮ ದು ।
ರ್ಜನರ್ಗೆ ನಿಕೃಷ್ಟದುಷ್ಟರಿವರ್ಗಾನೊಸೆದಿತ್ತೆನುದಾತ್ತ ವೃತ್ತಿಯಂ ॥ ೧೬ ॥

ಗುಪ್ತಾಳೋಚನಕಾರ್ಯ ।
ಕ್ಕಾಪ್ತರ್ ವಿದ್ಯಾಬ್ಧಿಪಾರಗರ್ ಸಕಲಗುಣ ॥
ಪ್ರಾಪ್ತರಿವರೆಂದು ಬಗೆದೆಂ ।
ಸಪ್ತವ್ಯಸನಾಭಿಭೂತರಪ್ಪುದನಱಯೆಂ ॥ ೧೭ ॥

ನೆರೆದೀ ಸಭೆಯೊಳ್ ಲಜ್ಜಾ ।
ಭರದಿಂ ತಲೆಯೆಱಕಮಾದುದಿಂದೆನಗೀ ದು ॥
ಶ್ಚರಿತರನಿವಂದಿರಂ ಪರಿ ।
ಹರಿಸಿಮಯೋಗ್ಯರನಖಿಲ್ಯರಂ ನಿರ್ಗುಣರಂ ॥ ೧೮ ॥

ಪಟಿ[3]ಯರಿವರೆನ್ನ ವಂಶಾ।
ವಟಿ◌ಯಿಂದಂ ಬಂದರೆಂದು ಮನ್ನಿಸದೆ ಮಹೀ ॥
ತಳನಾಥಂ ಮುನಿಸಿಂದಂ।
ಕಳೆದಂ ನಿರ್ಗುಣರನಾರು[2]ಮೇಂ[2] ಮಂನಿಪ[1][ರೆ][3] ॥ ೨೯ ॥

ವ ॥ ಅಂತವರನರಮನೆಯಿಂ ಪೊಱಮಡಿಸಿ ಕಳೆದು ಪರವಾದಿಯಂ ದಾನ ಸನ್ಮಾನಾದಿಗಳಿಂ ಸಂತೋಷಂಬಡಿಸಿ ಸೋಮಶರ್ಮನ ದಾಯಿಗನಪ್ಪ ಸೋವಿಲನೆಂ ಬೊಂಗೆ ತನ್ಮಂತ್ರಿಪದವಿಯಂ ದಯಂಗೆಯ್ವುದುಮಾಪ್ರಪಂಚಮನೆಲ್ಲಮನಗ್ನಿಭೂ ತಿಯುಂ ವಾಯುಭೂತಿಯುಮಱಿದು ಚಿಂತಾಕ್ರಾಂತರಾಗಿ ತಮ್ಮ ಮನೆಗೆವಂದು

ಜನನಿಯ ಮೊಗಮಂ ನೋಡ।
ಲ್ಕೆ ನಾಣ್ಚಿ ಸಿಗ್ಗಾಗಿ ಬಾಗಿ ತಲೆಯಂ ಚಿಂತಾ ॥
ಬ್ಧಿನಿಮಗ್ನರಾಗಿ ಕಣ್ಣೀ।
ರನಿಕ್ಕುತಿರೆ ನೋಡಿ ಕಂಡು ಕಾಶ್ಯಪಿ ಭರದಿಂ ॥ ೩೦ ॥

ಇದು ದಲ್ ವಿಸ್ಮಯಮಾಗಿ ತೋಱಿದಪುದೇನಿಂತೀಗಳೆನ್ನಿಂದನಾ।
ದುದೊ ಮೇಣಲ್ಲದೊಡಾಳ್ದನಿಂ ತೊಡಗಿತೋ ಮೇಣಾಪ್ತರಿಂದಿಂತು ಪು
ಟ್ಟಿದುದೋ ಮೇಣ್ಪರಿವಾರದಿಂ ಜನಿಯಿಸಿತ್ತೋ ಪೇೞಿಮೆಂದೆಂದು ಗ।
ದ್ಗದಕಂಠಸ್ಥಿತೆಯಾಗಿ ತನ್ನ ಮನದೊಳ್ ವಿಭ್ರಾಂತಿಯಂ ತಾಳ್ದಿದಳ್ ॥ ೩೧ ॥

ವ ॥ ಅಂತು ಪಿರಿದುಮುಬ್ಬೆಗದಿಂ ನಿಮಗಿನಿವಿರಿದು ಕೌತೂಹಳಮಾರಿಂದ ಮಾಯ್ತೆಂದು ಬೆಸಗೊಳ್ವುದುಮಗ್ನಿಭೂತಿ ವಿಜಯಜಿಹ್ವವಾದಿಯಿನಾದ ವೃತ್ತಕ ಮುಮಂ ಸಭಾಸದರ್ತಮ್ಮನವಕರ್ಣಿಸಿ ಕಿಡೆನುಡಿದುದುಮನತಿಬಳನೆಳೆದು ಕಳೆ ದುದುಮಂ ಸೋವಿಲಂಗೆ ಮಂತ್ರಿಮಹತ್ತರವೃತ್ತಿ ಸಾರ್ದುದುಮಂ ಸವಿಸ್ತರಮ ಱಿಪುವುದುಂ

ಮನದೊಳ್ ಪೆರ್ಚಿದ ಶೋಕಮುಣ್ಮೆ ತನುವಿಂ ಕೈಗಣ್ಮೆದುಃಖಂ ವಿಲೋ।
ಚನದಿಂದಂ ಪೊಱಪೊಣ್ಮೆ ಬಾ[1]ಷ್ಪ[1] ಜಲಮಂದುದ್ವೇಗದಿಂದೀಗಳಿಂ ॥
ತಿಸಿತೊಂದಾದ ವಿಷಾದ[2]ಮುಂ[2] ಕುದಿ[3][ಪ][3]ವುಂ ಮಾತೇಂ ಪೊದಳ್ದಿನ್ನ ಮು।
ನ್ನಿನ ಕರ್ಮೋದಯಮೆಂದು ಬಾಯಬಿಡು ಚಿಂತಾಕ್ರಾಂತೆಯಾಗಿರ್ಪುದುಂ ॥ ೩೨ ॥

---

1 ಜ್ಪ (ಗ) 2 ಮಂ (ಗ) 3 ವ (ಗ)

ವ ॥ ಆಗಳವರ್ ತಾಯ ಮೊಗಮನಾವ ಮೊಗದೊಳ್ ನೋಡುವಮೆಂದು ನಾಣ್ಚಿ ಚಿಂತಿಸುವ ಚಿಂತೆಯೊಳತಿಬಳನೃಪಾಸ್ಥಾಯಿಕೆಯೊಳ್ ಪುಲ್ಲಿಂ ನೊಚ್ಚಿದರಾದೆ ವೆಂಬೇವದೊಳಂ ತಮ್ಮನುಜಱ ಸೆಜ³ಗೆಯ್ದು ತಮ್ಮ ಕಮ್ಮವಟ್ಟೆಯಂ ತಮ್ಮ ದಾಯಿಗಂಗೆ ಕೊಟ್ಟರೆಂಬ ಮಚ್ಚರದೊಳಂ ಸಕಳ ಕಳಾಕುಶಲಂಗೆವುಟ್ಟಿಯುಮನಕ್ಷರ ಜಠರರೇವಂದೆವೆಂಬ ಕಷ್ಟತೆಯೊಳಂ ನಿರ್ಮಳಮಪ್ಪ ನಿಜಾನ್ವಯಕ್ಕೆ ಕಳಂಕಪಂಕಾದ್ಯ ನೇಕಾಪವಾದವಾದುದೆಂಬ ಮಱುಕದೊಳಂ ಮಲ್ಮಲಂ ಮಱುಗಿ ಕಾಶ್ಯಪಿಯ ಮೊಗಮಂ ನೋಡಿ

ಅಂಘಾಬಳದಿಂ ದುರ್ವ್ಯಸ
ನಂ ಘಟಿಯಿಸೆ ಸುಪೂಜಿತಾರ್ಥ ಶಾಸ್ತ್ರಂಗಳನು ॥
ಲ್ಲಂಘಿಸಿ ಕಠೋರವಾಣಿಗ ।
ಳಿಂ ಘಾತಿಸುತಿರ್ದೆಮಿನ್ನೆವರೆಗಂ ನಿಮ್ಮಂ ॥ ೩೩ ॥

ನಿಮಗೆ ಸುತರಾಗಿ ವೇದಾ ।
ಗಮಂಗಳಂ ಕಲ್ತು ರಾಜಸಭೆಯೊಳ್ ವಿದ್ಯೋ ॥
ತ್ತಮರೆನಿಸಿ ಸುಖಮಿರಲ್ಪಡೆ ।
ಯೆಮೆಂಬುದಿದು ಪೂರ್ವಜನ್ಮಕೃತಕರ್ಮಫಳಂ ॥ ೩೪ ॥

ಅವಿವೇಕಂ ದೊರೆಕೊಂಡು ಪೋದುವಿನಿತುಂ ಕಾಲಂಗಳಂತುಂ ಪರಾ ।
ಭವಭಾರಂ ಪಿರಿದಂತಱಿಂ ಬಹುಕಳಾಳಾಪಂಗಳಂ ಕಲ್ತು ಬ ।
ರ್ಪೆವಮೋಘಂ ಬಿಡಿಮೆಂಬುದುಂ ಗಳಿತಬಾಷ್ಪಾಂಭಃಕಣಂ ಬೇಗಮು ।
ಣ್ಮುವಿನಂ ಪೊಣ್ಮುವಿನಂ ವಿಷಾದದೊದವಿಂ[1]ದೆ³ಂ[1]ದಳ್ ನಿಜಾಪತ್ಯರಂ ॥ ೩೫ ॥

ಪಿತೃವಿದೋರ್ದಿಸುವಂದು ಶುದ್ಧಗೆಯೊಳಾ ಸಿದ್ಧಂ[illegible]ಮೋಯೆಂಬ ವಿ ।
ಶ್ರುತವರ್ಣಂಗಳನಾದೊಡಂ ಬರೆದಿರಿಲ್ಲೊಂ ಭೂರ್ಭುವಸ್ವಾದಿಪ ॥
ದ್ಧತಿಯಿಂ ಕಲ್ತಿರುಮಿಲ್ಲಮಾವಿಚಿತಿಯೊಳ್ ನೀಮಗ್ನಿಮಾಳೆಪ್ಪರೋ
ಹಿತಮೆಂದೋದಿದಿರಿಲ್ಲ ಶಿಕ್ಷೆಯೆಡೆಯೊಳ್ ಕೈಕೊಂಡಿರಿಲ್ಲೊಂದುಮಂ ॥ ೩೬ ॥

---

1 ಶಂ (ಗ)

ಆದೊರೆಯು ತಂದೆ ತಾನಿ।
ರ್ದೋದಿಸೆ ಕೈಕೊಳ್ಳದವರುಮಿನ್ನೋದುವಿರೇ ||
ಬಾದೇನೋ ನೀವುಮಿನ್ನಿ।
ನ್ನೋದಿದಿರೋದಿದಿರಿಮಿನ್ನು ಸುಮ್ಮನಿರೆಂದಳ್ || ೩೭ ||

ವ || ಎಂದು ನೊಂದು ನುಡಿದ ತಾಯ ನುಡಿಯೆ ತನ್ನ ಪರಾಭವವನು ನಱಿಯೆ ತೆಱೆಯೆ ನೆಱನೆತ್ತಿ ಮೂದಲಿಸಿದಂತಾಗಿ ಪಿರಿದಾದುಮ್ಮಳಿಕೆಯಿಂದಲ್ಲಿ ಪೊಕ್ಕು ವಿದ್ಯಾಭ್ಯಾಸಂಗೆಯ್ದು ಬಂದಲ್ಲದೆ ನಿಮ್ಮ ಮೊಗಮಂ ನೋಡೆನೆಂದು ಪೊಡೆವಟ್ಟು ಪೋಪ ಮಾಣಿಗಳನಿನಿಸಾನುಂ ಮಾಣಿಮೆಂದು ಕಾಶ್ಯಪಿಯಿಂತೆಂದಳ್-ನಿಮಗಿನಿತೊಂದು ನಿರ್ವೇಗಮುಂ ವಿದ್ಯೋದ್ಯೋಗಮುಪ್ಪುದೆಂಬುದೆಲ್ಲಮೆನ್ನ ಪುಣ್ಯ ಮಾದೊಡಂ ಪರದೇಶಕ್ಕೆ ದೇಸಿಗಮಾರ್ಗದಿಂ ಪೋಗಿ ಸೇದೆಗಿಡಲ್ವೇಡ ಮಗಧ ದೇಶದ ರಾಜಗೃಹಾಧಿಸ್ಥಾನಾಧಿಪತಿಯಪ್ಪ ಸುಬಳಮಹಾರಾಜನ ರಾಜ್ಯಲಕ್ಷ್ಮೀಸ ಮುದ್ಧರಣಕರಣ ಪರಿಣತಾಂತಃ ಕರಣನೆನಿಸಿ

ಸಕಲವ್ಯಾಕರಣಾರ್ಥನಿಶ್ಚಿತಮನಂ ಸಾಹಿತ್ಯವಿದ್ಯಾಬ್ಧಿ ವೈ।
ದಿಕಸಂವೇದಿ ಮಹಾನುಭಾವನಖಿಳೋರ್ವೀಸ್ತುತ್ಯನಾತ್ಮಪ್ರಸಿ।
ದ್ಧ ಕವೀಂದ್ರಾಗ್ರಣಿ ಚಾರು ಭಾಸುರಯಶಃ ಶ್ರೀ ಭಾಸಿ ಭೂಭೂತಭುಂ।
ಭುಕವಾಗ್ಮಿಪ್ರವರಂ ವರೇಣ್ಯನವನೀದೇವಾನ್ವಯಕ್ಕುತ್ತಮಂ || ೩೮ ||

ದ್ವಿಜವಂಶಾಂಬರತಿಗ್ಮರೋಚಿ ಸುಬಳಕ್ಷ್ಮಾಪಾಲಪಾಣಿಗ್ರಹ।
ಪ್ರಜಸಂರಕ್ಷಣದಕ್ಷನಾಶ್ರಿತಜನಾಧಾರಂ ಸಮಸ್ತಾಧಿಕಾ ||
ರಿ ಜಿತಾತ್ಮಂ ಸುಚರಿತ್ರನಪ್ರತಿಮಶುಂಭದ್ಭಾಗಧೇಯಂ ಮಹ।
ಗ್ರಜನು[1]ರ್ವಿ[1]ಲಲನಾಲಲಾಟತಿಲಕಂ ವಿದ್ವಜ್ಜನಾಳಂಕೃತಂ || ೩೯ ||

ಅಮಿತಗುಣಾಧಾರಂ ನಿ।
ಮ್ಮ ಮಾವನುದ್ದಾಮಧಾಮನನುಪಮಮಹಿಮೋ ||
ತ್ತಮನರಿಬಳಜೈತ್ರಂ ಸೂ।
ರ್ಯಮಿತ್ರನಾತ್ರೇಯಗೋತ್ರಪಾತ್ರಪವಿತ್ರಂ || ೪೦ ||

---

1 ಬ್ಬಿ (ಗ)

ಸುಖಸಂಕಥಾವಿನೋದದಿ ।
ನಖಿಳಸುಖೋಪಭೋಗಮಂ ಭೋಗಿಸುತಂ ॥
ನಿಖಿಳಬಳ ಸುಬಳನೃಪತಿಗೆ ।
ನಖಮಾಂಸಪ್ರೀತಿಯಿಂದೊಡಂಬಡೆ ನೆಗೞ್ದಂ ॥ ೪೧ ॥

ಆಱುವತ್ತು ನಾಲ್ಕು ಕಳೆಗಳೊ ।
ಳಱಿಯದುದಿಲ್ಲವರನೆಯ್ದೆ ದಿಙ್ಮೂಢತೆಯಂ ॥
ಮಱೆದು ಸಕಲಾಗಮಂಗಳ ।
ನಱಿದೊಳ್ಪಂ ಮೆಱೆದು ಬಂದು ನಿಶ್ಚಿಂತಮಿರಿಂ ॥ ೪೨ ॥

ಅವಧರಿಸಿಂ ನಿಮ್ಮಯ್ಯಂ ।
ಗವರಜೆತತ್ಸೂರ್ಯಮಿತ್ರಸಹಧರ್ಮಿಣಿ ಚಾ ॥
ರುವಿಲೋಕೆಯಾಕೆ ಪೆಸರೊಳ್ ।
ಸುವೇದಿ ನಿಮ್ಮತ್ತೆ ವಿನಯದಿಂ ಬೆಸಕೆಯ್ಯಿಂ ॥ ೪೩ ॥

ವ ॥ ಎಂದು ತನಗೆ ಪರಮ ವಿಶ್ವಾಸಮುಳ್ಳ ಲೇಖಕನಿಂ ಸೂರ್ಯಮಿತ್ರಂಗೆ ವಿನಯಪತ್ರಮಂ ಬರೆಯಿಸಿ ತದಗ್ನಿಭೂತಿಯ ಕೈಯೊಳ್ ಕೊಟ್ಟು ತದನಂತರ ಮಾತ್ಮೀಯಾತ್ಮಜರ ಮೊಗಮಂ ನೋಡಿ

ಮಱೆಯದೆ ಸೂರ್ಯಮಿತ್ರನ ಪದಾಂಬುಜ ಭಕ್ತಿಯನೆಂದುಮೋಜೆಯಂ ।
ಮಱೆಯದೆ ಬುದ್ಧಿಯಂ ಮಱೆಯದಾಚರಣೋಕ್ತಿಯನುಕ್ತಮಾರ್ಗಮಂ
ಮಱೆಯದೆ ದಾಯಿಗಂಗೆ ವರಮಂತ್ರಿಪದಂ ನೃಪನೀಯೆ ಸಾರ್ದದಂ।
ಮಱೆಯದೆ ಸಂತತಂ ಬಸನಮಂ ಮಱೆದಿರ್ಪುದು ಬೇಡಿಕೊಂಡಪೆಂ ॥ ೪೪ ॥

ವ ॥ ಎಂದು ನುಡಿದ ಜನನಿಯ ನುಡಿಯನವಧಾರಿಸಿ ।

ಬೆಸಸಿದ ನಿಮ್ಮ ವಚೋವ ।
ಸ್ತುಸಾರಮಂ ಕೇಳ್ದು ಮನದೆಗೊಂಡೆಮುಮೋಘಂ ॥
ಬೆಸಕೆಯ್ವೆಮೆಂಬುದುಂ ಕಾ ।
ರ್ಯಸಿದ್ಧಿಯಕ್ಕೆಂದು ಪರಸಿ ನಲ್ವರಕೆಗಳಿಂ ॥ ೪೫ ॥

ವ ॥ ಅಂತವರಿರ್ವರುಂ ನಾನಾ ನದೀನದಾಂತರಾಳ ಸಂಪಜ್ಜನಪದಂಗಳಂ ಕಳಿದು ಕತಿಪಯಪ್ರಯಾಣಂಗಳಿಂ

ಖಚರಪುತ ॥ ಸಲ್ಲತಾಭವನಂಗಳೊಳಂ ಜಲಂಗಳೊಳಂ ಸಹಕಾರ ಕಂ ॥
ಕೆಲ್ಲಿ ಪಲ್ಲವರಾಜಿತ ಶೈತ್ಯಸ್ಥಾನದೊಳಂ ಶ್ರಮವಾಜಿ[3] ಬಂ ।
ದಲ್ಲಿಗಲ್ಲಿಗೆ ವಿಶ್ರಮಿಸುತ್ತುಂ ಪೋಗಿ ಧರಾಮರರೆಯ್ದಿದರ್ ।
ಮಲ್ಲಿಕಾಕುಸುಮೋದ್ಗತಸೌರಭೋದ್ಗಮ ರಾಜಗೃಹಾಖ್ಯಮಂ ॥ ೪೬ ॥

ತ್ರಿಪದಿ ॥ ಪುರಬಹಿರ್ಭಾಗ ವಿಸ್ತರಿತ ನಂದನದೊಳಂ ।
ಕುರಿತ ಪಲ್ಲವಿತ ಮುಕುಳಿತ ಕುಸುಮಿತಾ ।
ಪರಿಮಿತ ಫಲಿತ ತರುಗಳೆ ॥ ೪೭ ॥

ವ ॥ ಇಂತತಿಶಯವಿಲಾಸಕ್ಕೆ ನಿವಾಸಮುಂ ವಿಭೂತಿಗೆ ನಿಕೇತನಮುಂ ಪೆರ್ಮೆಗೆ ತವರ್ಮನೆಯುಂ ಧರ್ಮಕ್ಕಾರ್ಮವುಮೆನಿಸಿದ ರಾಜಗೃಹ ಪುರವರ ಶ್ರೀಯುನ[ಬ್ಬಿ]ವಟ್ಟು ನೋಡಿ ಮೆಚ್ಚುತಂ ಬಂದು ಸೂರ್ಯಮಿತ್ರ ಮಹತ್ತರೋ ದಾತ್ತಸೌಂದರ್ಯಭವನದ್ವಾರಮಂ ದ್ವಾರಪಾಲಕರ್ ಪುಗಿಸೆ ಪೊಕ್ಕು ವಿದ್ವಜ್ಜನ ಸಭಾಭಿರಾಮನಪ್ಪ ತಮ್ಮ ಮಾವನಂ ಕಂಡು ಸರ್ವಾಂಗಾಲಿಂಗಿತೋರ್ವೀತಳರಾಗಿ

ಅಭಿವಾದಮೆಂದು ನಿಂದ ।
ಗ್ನಿಭೂತಿಯುಂ ವಾಯುಭೂತಿಯುಂ ವಿಪ್ರವರಂ ॥
ಗಭಿಮುಖದೊಳಿರ್ಪುದುಂ ಕಂ ।
ಡಭಿನವರಿವರೆಂದು ಸೂರ್ಯಮಿತ್ರಂ ತನ್ನೊಳ್ ॥ ೪೮ ॥

ವ ॥ ವಿಸ್ಮಯಂಬಟ್ಟು ನೀಮಾರ್ಗಾವದೇಶದವರಿರಾರಮಕ್ಕಳಿರೆತ್ತವೋ ದಪ್ಪಿರೇನಿಮಿತ್ತದಿನಿಲ್ಲಿಗೆ ವಂದಿರೆಂಬುದುಂ—ವತ್ಸವಿಷಯದ ಕೌಶಂಬೀನಗರವ ನಾಳ್ವತಿಬಳಮಹಾರಾಜನ ಪುರೋಹಿತಪ್ರಧಾನಂ ಸೋಮಶರ್ಮನೆಂ[3]ಬೊಂ[3] ವಿಪ್ರ ಕುಲೋತ್ತಮನ ಪತ್ನಿ ಕಾಶ್ಯಪಿಯೆಂಬೊಳವರ ಮಕ್ಕಳಗ್ನಿಭೂತಿಯುಂ ವಾಯು ಭೂತಿಯುಮೆಂಬೆವಶೇಷ ವಿದ್ಯಾಭ್ಯಾಸನಿಮಿತ್ತದಿಂ ಭವದಂಘ್ರಿಸ್ಮರಣಪರಿಣತಾಂತಃ

1 ರ್ಥ (ಕ) 2 ಗಾ (ಗ) 3 ಬೊ (ಕ)

ಕರಣರಾಗಿ ಬಂದೆವೆಂದಾತ್ರೀಯಪ್ರಪಂಚಮನಜಿುಪಿ ನಿಜಭಗಿನೀದತ್ತ ವಿಜ್ಞಾಪನ
ಪತ್ರಮನವಧಾರಿಸಿವೆಂದು ಪಾದಪೀಠೋಪಕಂಠದೊಳಿಕ್ಕುವುದುಂ

ಸುತ್ರಾಣುಂ ಸುತ್ತಿಲ್ಲದೆ ।
ಸುತ್ತಲೆ°ದಿರ್ದೊಂದು ವಿನಯುವತ್ತ್ರಳಿಯಂ ವಿ ॥
ಪ್ರೋತ್ತುಮನದನಂತರ್ಗತ ।
ಚಿತ್ತದೊಳಿಂತೆಂದು ತನ್ನೊಳನುವಾಚಿಸಿದಂ ॥ ೪೯ ॥

ಸ್ವಸ್ತಿ ಸಮಸ್ತ ಧರಾಮರ ।
ವಿಸ್ತಾರಕನಮಳಗುಣಗಣಾಂಬುಧಿ ವಿಬುಧ ॥
ಪ್ರಸ್ತುತಪರಂಗೆ ಕಾಶ್ಯಪಿ ।
ವಿಸ್ತರಮೆನಿಸಿರ್ದ [1][ವಿ][1]ನಯುದಿಂ ಬಿನ್ನವಿಕುಂ ॥ ೫೦ ॥

ಜಿತಕೋಪಂ ಚಾರುರೂಪಂ ನಿರುಪಮತರಸೂತ್ರಾರ್ಥತತ್ವಪ್ರವೀಣಂ ।
ಕೃತಕೃತ್ಯಂ ಸೂಕ್ತಸತ್ಯಂ ಪರಹಿತಚರಿತೋದಾತ್ತಕೀರ್ತಿಪ್ರಭಾವಂ
[2][ಮಿತವಾ][2] ಕ್ಯಂ ಸದ್ಗುಣೈಕ್ಯಂ ಪ್ರಕಟಿತ ವಿಜಯ ಶ್ರೀನಿವಾಸಂ ವಿಶೇಷಾ ।
ರ್ಜಿತಪುಣ್ಯಂಮದ್ವರೇಣ್ಯಂ ನೆಗಟ್ದಿತಿಬಳಭೂಪಾಲಮಂತ್ರಿಪ್ರಧಾನಂ ॥ ೫೧ ॥

ವಿನಯಾಳಂಕರಣಂ ವಿಶಿಷ್ಟಕರಣಂ ಕುಂದೇಂದುನೀಹಾ ।
ರನಿಭಾನೂನಯುಶಂ ಧರಾಮರಚರಿತ್ರಾಂಭೋಧಿ ವಿಶ್ವಾವನೀ ॥
ವಿನುತಂ ಭೂರಿವಿಭೂತಿಯುಂ ತಳೆದು ಕರ್ಮಾಯತ್ತದಿಂ ತನ್ನ ಮ ।
ಯ್ದುನನಾಭೀಳಕೃತಾಂತದಂತವಿವರೋಪಾಂತಾಂತಮಂ ಪೊರ್ದಿದಂ ॥ ೫೨ ॥

ವ ॥ ತದನಂತರಂ ತತ್ಪರಿಜನಂ ವಿಧುವಿರಹಿತಮಾದ ರಾತ್ರಿಯ ಕುಮುದ ವನದಂತೆ ಕರಂ ಕುಮುದರಾಗಿ ಕೊರಗಿ ಪರಾಗದಂತೆ ದೆಸೆದೆಸೆಗೆ ಪರೆದುಪೋಪುದುಂ ತ್ವದೀಯ ಭಾಗಿನೇಯುಂ ಮುನ್ನಮುಳ್ಳ ಭಾಗಾಂಶಮೆಲ್ಲಮಂ ತ್ಯಾಗಭೋಗೋಪ ಭೋಗಾದಿ ವ್ಯಸನಕ್ಕಸದ್ವ್ಯಯಂ ಮಾಡಿ ಕಿಡಿಸಿಯುಂ ಶೈಶವಭಾವಗಿಂ ತಾಳ್ದಿ ನ್ನೆಗಂ ಸುವಿದ್ಯಾಭ್ಯಾಸಭಾಗ್ಯಮುಂ ಭಾಗ್ಯಮುಮಿಲ್ಲದೆನಸುಂ ರಾಜಯೋಗ್ಯರಾಗ

1 ರ (ಗ) 2 ಮತಥಾ (ಕ)

ದುದಂ ಕಂಡತಿಬಳಮಹಾರಾಜಂ ತದೀಯಾನ್ವಯಾಗತಮಂ ಪುರೋಹಿತಾಸ್ಪದಮಂ ಮಂತ್ರಿಪದಮುಮಂ ದಾಯಿಗರ್ಗೆ ಕುಡುವುದುಂ ಮತ್ಪುತ್ರರಗ್ನಿಭೂತಿಯುಂ ವಾಯುಭೂತಿಯುಂ ಸಿಗ್ಗಾಗಿ ವಿದ್ಯಾಕಾಂಕ್ಷಿತರಾಗಿರ್ಪುದಂ ಕಂಡವರಂ ತಮ್ಮಲ್ಲಿ ಗಟ್ಟಿದೆನವರಂ ತಾವು ಕೈಕೊಂಡು ಸಕಲಕಲಾಕುಶಲರಾಗಿ ಮಾಳ್ಪುದೆಂದು ಬಂದ ವಿನಯವತ್ತಳೆಯ ಪದಕಂ ಪರಿಭಾವಿಸಿ ನೋಡಿ ಮಯ್ದುನನ ಮರಣಕ್ಕೆ ಕಟ್ಟುವಡೆದು ಮನದೊಳೆ ಸೈರಿಸಿ ತನ್ನೊಳಿಂತೆಂಗುಮಾನಿವಂದಿರನಾದರಿಸಿ ಪಸರಂಗೊಟ್ಟೆನಪ್ಪೊಡೆನಗೆ ಸುಸರಮಾಗಿ ಬೆಸಕೆಯ್ಯಲಱಿಯರಱಿಯದಂದದಿನುಱೆ ಸೆಱೆಗೆಯ್ದು ಪೆಜರ ಮಾರ್ಗದೊಳಿರ್ದಡಲ್ಲದೆ ತಱಿಸಂದು ನೆಗಟಿರೆಂದು ಮೇಲ್ಮೆಲೆಗೆಯ್ಯದೆ ಬಲ್ಮೊಗಂ ಮಾಡಿ ತನ್ನಳಿಯಂದಿರ ಮೊಗಮಂ ನೋಡಿ

ಇದಱಿಂದಂ ಬಿಸವಂದಮಾಗಿ ಪಿರಿದುಂ ವಿಭ್ರಾಂತಿಯಂ ಮಾಡಿದ ।
ಪ್ಪುದು ಮುನ್ನಿಲ್ಲದ ತನ್ನ ವರ್ತನಮಿದೊಂದಾಶ್ಚರ್ಯಮಂ ತೋಱಿದ ॥
ಪ್ಪುದು ಮಿಥ್ಯಾವಿನಯಪ್ರಪಂಚವಚನಂ ಕೈಮಿಕ್ಕು ಠಕ್ಕಿಕ್ಕಿದ ।
ಪ್ಪುದು ಪತ್ರಂ ಬಹು ಚಿತ್ರಮಪ್ಪುದಿದು ಮಚ್ಚಿತ್ತಕ್ಕಿದೇಂ ಚಿತ್ರಮೋ ॥ ೫೩ ॥

ವ ॥ ಅದಲ್ಲದೆಯುಂ

ಅನುಜೆಯರೊಳ್ ಕಾಶ್ಯಪಿ ಮ ।
ಯ್ದುನರ್ಕಳೊಳ್ ಸೋಮಶರ್ಮನಳಿಯಂದಿರ ಮಾ ॥
ತಿನೊಳಗ್ನಿವಾಯುಭೂತಿಗ ।
ಳೆನಿಸಿದರಂ ಕಥೆಯೊಳಾದೊಡಂ ಕೇಳ್ದಱಿಯೆಂ ॥ ೫೪ ॥

ಎಮಗೆ ಜಗದ್ವಿದಿತಂ ಸೂ ।
ರ್ಯಮಿತ್ರವೆಸರುಂಟು ಮಱಸಲಾಗದಮೋಘಂ ॥
ನಿಮಗದಱೊಳೆಲ್ಲಮೇಂ ನಿ ।
ಮ್ಮ ಮಾವನೆನಿಸಿರ್ದ ಸೂರ್ಯಮಿತ್ರನೆನಲ್ಲೆಂ ॥ ೫೫ ॥

ವ ॥ ಎಂತುಂ ನಿಮಗೆ ವಿದ್ಯಾಭ್ಯಾಸಂಗೆಯ್ವ ತಾತ್ಪರ್ಯಮುಳ್ಳೊಡೆ ನೀಮಾರ್ಗಾದೊಡಮಕ್ಕೆ ನಿರಾಲಸ್ಯದಿಂ ನಿರ್ಬಂಧದಿಂ ನಿರ್ವಿಕಲ್ಪದಿಂ ನೀಮಿರ್ವರುಂ ನಿಶ್ಚಯಮೋದುವೊಡಾವುಮಾ ಮಾರ್ಗದಿಂದೋದಿಸಿ ಪಂಡಿತರಾಗೆ ಮಾಳ್ಪೆಮಾಹಾ

ರಾಚ್ಛಾದನಂಗಳಂ ನಿಮ್ಮ ಮೆಚ್ಚಿದೆಡೆಯೊಳ್ ಎಡೆಮಾಡಿಕೊಂಡು ನೀಡಿರದೋದಿ
ಮೆಂಬುದುಮವರೊರ್ವರೊರ್ವರ ಮೊಗಮಂ ನೋಡಿ ನಾವುಂತುಂ ವಿದ್ಯಾರ್ಥಿಗಳಾಗಿ
ಗುರುಶುಶ್ರೂಷಾದಿ ವ್ಯಾಪಾರದಿಂ ಭರವಸಂಗೆಯ್ದು ಸಕಲಶಾಸ್ತ್ರಾಭ್ಯಾಸವಂ ಗೆಯ್ವು
ಮೆಂದಿರ್ಪಮಿವರ್ ನಮ್ಮನತ್ಯಾಗ್ರಹದಿಂ ಶಿಕ್ಷಿಸಿ ಸಾಕ್ಷರಿಕರಂ ಮಾಟ್ಪೊಡೆ ಸಮ್ಮ
ಲ್ಲದುದಾವುದೆಂದು ತಮ್ಮಿರ್ವರುಮೇಕಸ್ಥರಾಗಿ ಸೂರ್ಯಮಿತ್ರನ ನುಡಿಗೊಡಂಬಟ್ಟು
ಪೊಡೆವಟ್ಟು

ಎಮಗೀ ಪೊಟಿಲೊಳ್ ನಿಚ್ಚಂ ।
ಭ್ರಮಿಯಿಸಿ ಮಜ್ಜೀವರಕ್ಷಣಾರ್ಥಂ ಶಾಸ್ತ್ರ ॥
ಕ್ರಮಮನಱಿವನ್ನೆಗಂ ಗ್ರಾ ।
ಸಮಾತ್ರಮಿಲ್ಲಾಯ್ತೆ ಸೂರ್ಯಮಿತ್ರಸ್ವಾಮಿ ॥ ೫೬ ॥

ವ ॥ ಎಂಬುದುಮವರ ಮನದ ಪರಿಚ್ಛೇದಮಱಿದು ಕೆಲವು ದಿವಸಕ್ಕೆ

ವಿಲಸದ್ವಾಪರ ವಾರಯೋಗ ಗುಣಮುಂ ಸಲ್ಲಗ್ನಮುಂ ತಾರಕಾ ।
ಬಲಮುಂ ಕೂಡೆ ನವಗ್ರಹೋತ್ತಮಬಳಂ ಕೈಗಣ್ಮೆ ಧಾತ್ರೀಹಿತಂ ॥
ಗಳನವ್ಯಾಕುಲಮೋಕ್ಷಸಾಧನೆಗಳಂ ಸಿದ್ಧಂನಮಾದ್ಯಕ್ಷರಂ ।
ಗಳನಿಷ್ಟಾರ್ಥಕರಂಗಳಂ ಸಕಲವಿದ್ಯಾಬೀಜಪುಂಜಂಗಳಂ ॥ ೫೭ ॥

ವ ॥ ಮೊದಲ್ ತೊಡಗಿಸಿ ನಿರ್ಬಂಧದಿಂದಮೋದಿಸುತ್ತುಮವಂದಿರ ತಿರಿದು
ತಂದ ಕೂಟಮೇಗಣ್ಗೆಂದಾಗಿಯುಮನಿಸೆಣ್ಣೆಯುಮನುಪ್ಪುಮಂ ಮೊದಲಾಗಿಯು
ಮೆಱೆಯುಲುಮಿಕ್ಕಲುಂಬೇಡೆಂದು ತನ್ನ ಮನೆಯ ಬಾಣಸಿಗರ್ಗೆ ಪೇಟ್ದು ತಾನುಮಾ
ಮಾರ್ಗದೊಳತಿಸಿಸ್ಮರತೆಯಿಂ ಶಿಕ್ಷೆಗೆಯ್ಯುತ್ತುಂ ಕತಿಪಯ ಸಂವತ್ಸರಗಳ್
ಪೋಪುದುಮಗ್ನಿಭೂತಿಯುಂ ವಾಯುಭೂತಿಯುಂ ವೇದವೇದಾಂತ ತರ್ಕ ವ್ಯಾಕರ
ಣಾದಿ ಸಕಲವಿದ್ಯಾಪಾರಗರಾಗಿರ್ದಲ್ಲಿ ಪಿರಿಯಾತಂ ಸ್ವಭಾವದಿಂ ಋಜುಮಾರ್ಗ
ವೃತ್ತಿಯಂ ತಳೆದು ವಿನಯವಿಭೂಷಣನಾದಂ ಕಿಱಿಯಾತಂ ನಿಸರ್ಗದಿಂ ವಕ್ರಗತಿ
ಪರಿಣಾಮದಿನುದ್ವೃತ್ತಚಿತ್ತದಿನುನ್ಮತ್ತನಾದನಿಂತವರಿರ್ವರುಮೊಂದು ದಿವಸಂ
ಸೂರ್ಯಮಿತ್ರಂಗೆ ಲಲಾಟತಟನಿಹಿತಕರಕಮಳ ಮುಕುಳರಾಗಿ ನಿಂದಿರ್ದಗ್ನಿಭೂತಿ
ನಿರ್ಭರಭಕ್ತಿಭರದಿಂ

ನಿಮ್ಮ ದಯೆಯಿಂದಮನುಪಮ ।
ಸಮ್ಮತಮಂ ಹಿತಮನಖಿಳಶಾಸ್ತ್ರಾಗಮಮಂ ॥
ನಿಮ್ಮಿಂದಮಱಿದೆವದಱಿಂ ।
ನಿಮ್ಮುಪಕಾರಮನದೇತಱಿಂ ನೀಗುವೆಮೋ ॥ ೫೮ ॥

ಮಣಿಭೂಷಣ ॥ ದೇಸಿಗರ್ಕಳನಖಿಲ್ಯರನೆಮ್ಮನೊಱಲ್ದು ವಿ ।
ದ್ಯಾ ಸಭಾನಿರತರಾಗಿಸಿದಿರ್ ನಿಮಗಂ ಸಮಂ
ತೀ ಸುವೇದಿಗಮುದಾತ್ತತೆಯಿಂದಮೆ ಗಡ್ಡಮುಂ ।
ಮಿಾಸೆಯುಂ ಬೆರಸು ಪುಟ್ಟಿದೆವೆಂದವಧಾರಿಸಿಂ ॥ ೫೯ ॥

ವ ॥ ಎಂದು ಬೀೞ್ಕೊಳ್ವುದುಮವರ್ಗೆ ತನ್ನನಱಿಪುವುಜ್ಜುಗದಿಂ ಮಜ್ಜನಂ ಬುಗಿಸಿ ದಿವ್ಯವಸ್ತ್ರಾಭರಣಂಗಳನುಡಲುಂ ತುಡಲುಮಿತ್ತು ತನ್ನ ಪಂತಿಯೊಳುಣಲಿಕ್ಕಿಸಿ ಕಪ್ಪುರಂ ಬೆರಸು ತಂಬುಲವಂ ಕೊಟ್ಟು ನಡೆಗಲ್ತಿಗಳನಿರ್ಬರ್ಗಮೇಱಲ್ ಕೊಟ್ಟು ಪಿರಿದಾಳಂ ನೆರಂಬೇೞ್ದು ಕಿಱಿದಂತರಂ ಕಳಿಪುತ್ತುಂ ಬಂದು ಪುರಬಹಿರುಪವನೋದ್ದೇಶದೊಳ್ ನಿಂದು

ನಿಮಗಾಂ ಪರ್ವದಿನಂಗಳೊ ।
ಳನಾಗಿಯುಂ ಕಿಂಚಿದನ್ನಮಂ ಕಿಂಚಿತ್ತೈ ॥
ಲಮನಕ್ಕೆಮೆಱೆಯಿಮೆಂದೆಂ (?) ।
ದುಮಱಿಯೆನೇನೆಂಬೆನೆನ್ನ ನಿಷ್ಕರುಣತೆಯಂ ॥ ೬೦ ॥

ಆಂ ನಿಮಗೆ ಮಾವನೆಂ ನೀ ।
ಮೆನ್ನನುಜೆಯ ತನುಜರಪ್ಪಿರಿದು ನಿಶ್ಚಯಮಾಂ ॥
ಮುನ್ನಮೊಸೆದೆನ್ನನಱಿಪಿದೊ ।
ಡೆನ್ನನಣಂ ಬಗೆಯಿರೆಂಬ ಬಗೆಯನೆ ಬಗೆದೆಂ ॥ ೬೧ ॥

ಕಿಱಿಯಂದು ತಂದೆ ಬಗ್ಗಿಸ ।
ಲಱಿಯನೆ ತಾಯ್ ಜಡಿದು ತಿಳಿಪಲಱಿಯಳೆ ವಿಷಯ ॥
ಕ್ಕೆಱಗಿದರಂ ತಲೆಗೇಱಿಸೆ ।
ಕೊಱಚಾಡುವರೆಂದುಪಾಯದಿಂದೋದಿಸಿದೆಂ ॥ ೬೨ ॥

ವ ॥ ಎಂದು ತನ್ನಕ್ಕೆವತನದಿನೋದಿಸಿದ ವೃತ್ತಾಂತಮನಾದ್ಯಂತಮಱಿಯೆ ಪೇೞ್ದನ್ನೆವ್ಮೊಳಪ್ಪ ಬಂಧುತ್ವಮನೆಂದುಂ ಮಱೆಯದಿರ್ಪುದೆಂದು ಬುದ್ಧಿವೇೞ್ದು ಪರಸಿ ಪೋದನಿತ್ತಲಾ ವಾಯುಭೂತಿ ಮಹಾಪ್ರಳಯಕಾಲದ ವಾಯುವಿನಂತೆ ಮಾಮಸಕಂ ಮಸಗಿ

ಅಗಣಿತಪುಣ್ಯನಬ್ಬೆಯೊಡವುಟ್ಟಿದ ಮಾವನಶೇಷಶಾಸ್ತ್ರಪಾ ।
ರಗನತಿ ಧನ್ಯನೆಂದು ಪರಿಭಾವಿಸಿ ಬಂದೊಡವಜ್ಞೆಗೆಯ್ದು ನಾ ॥
ಯ್ದ್ವಗದೆಡೆಯೆಲ್ಲಮಂ ಪುಗಿಸಿ ಬಯ್ಕದ ಭಾಜನಮಾಗೆ ಮಾಡಿ ತೊ ।
ಟ್ಟಗೆ ವಿಭು ಸಾಯೆ ಪೊಯ್ದು ಕಿವಿಯಂ ಪಿಡಿದೂಡಲೊಡರ್ಚಿ ಬಂದನೇ ॥ ೬೩ ॥

ತಾಂ ಗಡ ನಮಗೀಗಳ್ ಮಾ ।
ವಂ ಗಡ ನಾಮುಂ ಗಡೀಗಳಳಿಯಂದಿರೆವಿ ॥
ನ್ನಂ ಗಡ ನಮಗಂ ತಮಗಂ ।
ಸಂಗತಸಂಬಂಧಬಂಧುರಂ ಬಂಧುತನಂ ॥ ೬೪ ॥

ಪಸಿದಿರ್ ನೀರಡಿಸಿದಿರೆಂ ।
ದು ಸೇದೆಯಂ ಶ್ರಮಮುನಱಿವುದೆನಸುಂ ಗೆಂಟಾ ॥
ಬಿಸಿಲೊಳ್ ನಿಂದೊಡೆ ನೆಟಿಲ ।
ತ್ತ ಸಾರಿಮೆಂದೆಂದುಮಱಿವನಲ್ಲಂ ನಮ್ಮಂ ॥ ೬೫ ॥

ವ ॥ ಎಂಬುದುಮಗ್ನಿಭೂತಿ ವಾಯುಭೂತಿಯಂ ಬಿಡೆ ಜಡಿದು

ಮುನ್ನವತಿವ್ಯಸನಪರ
ಗೆನ್ನಂ ಪೇೞ್ದಂದು ಬಗೆಯಲಱಿಯಲೆನುತ್ತುಂ।
ತನ್ನಂ ಪೇೞದೆ ಪೇೞ್ದಂ
ಸನ್ನುತ ವೇದಾದಿ ಶಾಸ್ತ್ರಮಂ ದಯೆಯಿಂದಂ ॥ ೬೬ ॥

ಮತಿಗೆಟ್ಟು ಬಾಯ್ಗೆವಂದಂ।
ತೆ ತಿರಸ್ಕರಿಸುವುದು ಪುರುಷಕಾರಮೆ ಗುರುವಂ ॥
ಶ್ರುತಹೀನರಂತೆ ಕೆಮ್ಮನೆ।
ಕೃತಘ್ನರಾದಂದು ನಮಗಿಹಂ ಪರಮುಂಟೇ ॥ ೬೭ ॥

ಎಂಬುದುಂ ವಾಯುಭೂತಿ ಕಿನಿಸಿ ಕಿ-ಂಕಿ[ರಿ][1] ವೋಗಿ ॥

ಆವನುಪಕಾರ[2]ಮನಾಂ ಪೇ।
[ೞ] ವೇೞ್ವುದೆ ನಮ್ಮ ತಿರಿದು ತಂದುಣ್ಬಶನ ॥
ಕ್ಕವ[ರ][3]ಣ್ಣೆ ಸೂಜಿಮೊನೆಯೆನಿ।
ಸುವೆಣ್ಣೆಯುಂ ಬಂಗುಮಾದ ಕೞಿಯುಂ ಪೇೞ್ಗಂ ॥ ೬೮ ॥

ಪದೆಪುಗೆಡ[ಲ]ಟ್ಟಿಯೊಡವು।
ಟ್ಟಿದ ಮಾವನ ಮನೆಯೊಳುಂಡುಟ್ಟುಂ ನೀ ॥
ಮೊದೆದೊಡೆಗೆಯ್ವೆಯೊ ನಾಯು।
ಣ್ಣದ ದೋಣಿಯೊಳೂಡಿದೊಂಗೆ ಪದಯಿದನೆ ಕರಂ ॥ ೬೯ ॥

ವ ॥ ಅಲ್ಲದೆಯುಂ ದುರಾತ್ಮನಾತ್ಮೀಯ ಭವನದೊಳ್ ಸದಾಕಾಲಂ ಮಹಾಜನಕ್ಕೆ ಸಹಸ್ರಭೋಜನಮನಿಕ್ಕುವಂ ಗ್ರಹಣ ಸಂಕ್ರಮಣ ಪುಣ್ಯತಿಥಿಗಳೊಳಂ ಮೊದಲಾಗಿಯುಂ ನಮಗಕ್ಷಮಾತ್ರಾಹಾರಮಂ ಬಿಂದುಮಾತ್ರ ತೈಲಮುಮನಿಕ್ಕುವುದುಮೆೞ[3]ವುದು [ಮಿ]ನಿಸಾನುಂ ಗೆಂಟು

1. ಂಗಿ (ಗ) 2. ಕಮನಂ ಪೇಳಲು (ಗ) 3. ರ (ಕ)

ತನಗಿಕ್ಕುವೆಱಿವ ಕರುಣಂ ।
ಮನದೊಳಮಿನಿತಿಲ್ಲ ಪಾಪಕರ್ಮನವಂ ಮಾ ॥
ವನೆ ನಮ್ಮ ಕರಕೆಯೊಳ್ ಕ ।
ಲ್ಲನಿಕ್ಕುವಂ ನಿಕ್ಕುವಂ ಪ್ರಭಾಕರಮಿತ್ರಂ ॥ ೭೦ ॥

ವ ॥ ಎಂದು ನುಡಿದ ನಿಜಾನುಜನ ಪರುಷತರವಚನವ್ರಾಂತಗಳಂ ಕೇಳ್ದು ಮಱುಮಾತುಗುಡದೆ

ಎನಿತಖಿಳಕಳಾಕೋವಿದ ।
ನೆನಿಸಿದೊಡಂ ಪಾಪಿ ಧರ್ಮದತ್ತೆಸಗನದೆಂ ।
ತೆನೆ ಸಂಸ್ಕಾರ ಶತೇನಾ ।
ಪಿ ನಗೂಧಃ ಕುಂಕುಮಾಯತೇಯೆಂಬುದಱಿಂ ॥ ೭೧ ॥

ವ ॥ ಎಂಬಿದಂ ತನ್ನಂತರ್ಗತದೊಳೆ ಬಗೆದು ಪೆಱಪೆಱದು ವಾರ್ತೆಗಳನೆ ನುಡಿಯುತ್ತುಂ ಪಯಣದ ಮೇಲೆ ಪಯಣಂ ಬಂದು ಕೆಲವು ದಿವಸಕ್ಕೆ ಕೌಶಂಬಿಯನೆಯ್ದೆವಂದು ಶುಭದಿನಮುಹೂರ್ತದೊಳ್ ನಿಜಾಂಬಿಕಾನಿವಾಸಕ್ಕಾಗಿ ಬರ್ಪಾಗಳ್

ತ್ರಿಪದಿ ॥ ಬಡವಂ ನಿದಾನಮಂ ಪಡೆದಂತೆ ಕುರುಡಂ ಕ ।
ಣ್ಬಡೆದಂತೆ ಮನದೊಳ್ ಪಿರಿದುಮುತ್ಸಾಹಮಂ ॥
ಪಡೆದಳಾತ್ಮಜರ ಬರವಿಂದೆ ॥ ೭೨ ॥

ವ ॥ ಆ ಪ್ರಸ್ತಾವದೊಳ್

ಅಪರಿಮಿತಭಕ್ತಿಯಿಂ ತ
ನ್ನ ಪದಾಂಭೋಜಕ್ಕೆ ವಿನತರಾಗಲೊಡಂ ಕಾ ।
ಶ್ಯಪಿ ಸಂತೂಸದಿಂ ತಬ್ಬಿ
ಸಿ ಪರಸಿದಳ್ ಪಲವು ಪರಕೆಗಳಿಂದಂ ॥ ೭೩ ॥

ವ|| ತದನಂತರಮವರ್ ತಮ್ಮ ಪೋದ ಬಂದ ವೃತ್ತಾಂತಮೆಲ್ಲಮಂ ಸವಿಸ್ತರಂ ಪೇೞ್ದು ಪ್ರಶಸ್ತಲಗ್ನದೊಳಾತ್ಮೀಯ ಸ್ವಾಮಿಯಪ್ಪಾತಿಬಳಮಹಾರಾಜನನುಚಿತ ಪ್ರತಿಪತ್ತಿಗಳಿಂ ಕಂಡು

ಶ್ಲೋಕಾರ್ಥೋಪನ್ಯಾಸ |
ಶ್ಲಾಘ್ಯನಿನಾದ ಮುದಮಾಗಳ್ ನವಮಾರ್ಗೀ ||
ಶ್ಲೇಷಂ ಮಿಗೆ ತೋಱಲುಪ |
ಶ್ಲೋಕಿಸಿ [ದಿಂ] ಬೞಿಕೆ ಕೊಟ್ಟು ಶೇಷಾಕ್ಷತಮಂ (?) || ೭೪ ||

ವ|| ಮತ್ತಂ ಸಮಸ್ತ ಕಳಾಕಳಾಪಾಡಂಬರಮಂ ಮೆಱೆದು

ಸದಳಂಕಾರೋಕ್ತಿಯುಂ ಸೂಕ್ತಿಯುಮೆಸೆಯಲುಪನ್ಯಾಸವಿನ್ಯಾಸ
ಮಂ ತೋ |
ರ್ಪುದುಮಿಂತಾರ್ ಬಲ್ಲರಿಂತಾರ್ ಪರಿಣತರೆನುತುಂ ತತ್ಸಭಾಮಧ್ಯದೊಳ್ ತ ||
ದ್ವಿದರೆಲ್ಲಂ ಕೀರ್ತಿಸುತ್ತಿರ್ಪುದುಮದನೆ ಮನಂಗೊಂಡು ಚಿತ್ತೋದಿತಾನಂ |
ದದಿನಿರ್ದಂ ಪ್ರೋನ್ನತಾಂಸಂ ಪರಮಜಿನಾಮತಾಂಭೋಜಿನೀರಾಜಹಂಸಂ || ೭೫ ||

ಇದು ಸಮಸ್ತವಿನಯಜನವಿನುತ ಶ್ರೀವರ್ಧಮಾನಮುನೀಂದ್ರ
ವಂದ್ಯ ಪರಮಜಿನೇಂದ್ರಪಾದಪದ್ಮವರಪ್ರಸಾದೋತ್ಪನ್ನ
ಸಹಜಕವೀಶ್ವರ ಶ್ರೀಶಾಂತಿನಾಥಪ್ರಣೀತಮಪ್ಪ
ಸುಕುಮಾರಚರಿತದೊಳಗ್ನಿಭೂತಿ ವಾ
ಯುಭೂತಿವಿದ್ಯಾಭ್ಯಾಸಕಥನಂ
ದ್ವಿತೀಯಾಶ್ವಾಸಂ

# ೩. ತೃತೀಯಾಶ್ವಾಸಂ

ಶ್ರೀಗಧಿಪತಿ ವಿಸ್ಮಯಮನ ।
ನಾಗಿ ಬೆರಲ್ಮಿಡಿದು ವಿಪ್ರತನಯರ ವಿದ್ಯೋ ॥
ದ್ಯೋಗಕ್ಕೆ ಮೆಚ್ಚಿ ತಲೆಯಂ ।
ತೂಗಿದನಾಗಳ್ ಸರಸ್ವತೀಮುಖಮುಕುರಂ ॥ ೧ ॥

ವ॥ತದನಂತರಮವರನುಚಿತಾದರದಿನಾದರಿಸಿ ನಿಜಾನ್ವಯಾಗತ ಪುರೋಹಿತಾಸ್ಪದಮಂತ್ರಿಪದಮಂ ದಯಂಗೆಯ್ದು

ತುರಗವ್ರಾತಂಗಳಂ ವೇಸರಿಗಳನುಚಿತಾನರ್ಘ್ಯರತ್ಯಂಗಳಂ ಕುಂ ।
ಜರ ಸಂಘಾತಂಗಳಂ ತಾನತಿಶಯಪರಮಾನಂದ ವಸ್ತ್ರಂಗಳಂ ಭಾ ॥
ಸುರನಾನಾರಾಜ್ಯಚಿಹ್ನಂಗಳನನುಪಮಮಾದಗ್ರಹಾರಂಗಳಂ ನೀ ।
ಡಿರದಾಗಳ್ ಕೊಟ್ಟನುತ್ಸಾಹದಿನತಿಬಳಭೂರಾಜನಾದಿತ್ಯತೇಜಂ ॥ ೨ ॥

ವ ॥ ಆಗಳವರ್ ಮಹಾಪ್ರಸಾದಮೆಂದು ಕೈಕೊಂಡು ಬೀಡಿಂಗೆ ವಂದು ಸಕಲಶಾಸ್ತ್ರಂಗಳಂ ಪಲರ್ಗಂ ವಕ್ಕಾಣಿಸುತ್ತುಂ ಭುವನದೊಳಂ ರಾಜಭವನದೊಳಂ ಮಾನ್ಯರುಂ ಧನ್ಯರುಮಾಗಿ ಸಕಲಸಂಸಾರಸುಖಸರ್ವಸ್ವಮಂ ವೃಥೆಯಾಗದಂತನುಭವಿಸುತ್ತುಮಿರ್ದರಿತ್ತಲಾ ಮಗಧದೇಶದ ರಾಜಗೃಹಾಧಿರಾಜಂ ಸುಬಳಮಹಾರಾಜನೊಂದು ದಿವಸಂ ಸೂರ್ಯಮಿತ್ರನುಂ ನಯಗುಪ್ತನುಂ ಇಷ್ಟಶರ್ಮನುಂ ಜಯಂತನುಮೆಂಬಾತ್ಮೀಯ ಪರಮವಿಶ್ವಾಸಭೂಮಿಗಳಪ್ಪ ನಾಲ್ವರ್ ಮಂತ್ರಿಗಳ್ವೆರಸು ಮಂತ್ರಮೇಳಾಪಕದೊಳಿರ್ದು ತತ್ಕಾರ್ಯಾಳೋಚನ ತಾತ್ಪರ್ಯಪರ್ಯವಸಾನದೊಳ್ ಮಜ್ಜನಂಬುಗುತ್ತುಂ

ಬೆಲೆಗೆಯ್ದವಾರವೀ ಜಗ ।
ದೊಳುಳ್ಳ ವಸ್ತುಗಳದರ್ಕೆ ನಿಶ್ಚಯಮೆಂಬು ॥
ಜ್ವಲವಿಲಸದರುಣರತ್ನಾಂ
ಗುಲೀಯಮಂ ಕಳೆದು ತನ್ನ ಬೆರಲಿಂದರಸಂ ॥ ೩ ॥

ವ || ಕೆಲದೊಳಿರ್ದ ಸೂರ್ಯಮಿತ್ರಮಂತ್ರಿಯ ಕಯ್ಯುಲ್ಕುಡುವುದುಮಾ ತನುಮುದಂ ತನ್ನ ಬೆರಲೊಳಿಟ್ಟುಕೊಂಡು ಮಱುದಿವಸಂ ಪ್ರಭಾತಸಮಯದೊಳ್ ಪುರಬಹಿರುಪವನೋದ್ದೇಶೋಚಿತಾಂಭೋರುಹವನಕ್ಕೆ ವಂದು ಸಂಧ್ಯಾವಂದನ ಕ್ರಿಯಾನಿಮಿತ್ತಸ್ನಾನಾನಂತರಂ

ಅರ್ಘ್ಯಮನೆತ್ತಿ ದಿನೇಶಂ |
ಗರ್ಘಿಸಿ ಪೊಡೆವಟ್ಟು ಸೂಸಿ ನೀರಂ ಮಂತ್ರಾಂ ||
ತರ್ಘಟನೆಯಿಂದೆ ಬಿದ್ದುದ |
ನರ್ಘ್ಯಾತಿಶಯಾಂಗುಲೀಯಮಂಗುಲಿಯಿಂದಂ || ೪ ||

ವ || ಆಗಳ್ ಸೂರ್ಯಮಿತ್ರಂ ನಿರ್ವರ್ತಿತಸಂಧ್ಯಾನಿಯಮಕ್ರಿಯಾಯೋಗ ನಾಗಿ ರತ್ನಾಂಗುಲೀಯಮಂಗುಳಿಯಿಂದುರ್ಚಿ ಬಿರ್ದುದನಱಿಯದೆ ಗಂಧಾಕ್ಷತ ಕುಸುಮತಾಂಬೂಲಸ್ರಗ್ವಿಳಾಸಾಲಂಕೃತನಾಗಿ

ಇಂ ಮನೆಗೆವೋಪೆನೆಂದಾ |
ತಂ ಮಹಿಮೋಪೇತನಾಗಿ ಮೆಲ್ಲನೆ ಬರುತಂ ||
ಕೆಮ್ಮನೆ ಬೆರಲಂ ನೋಡಿಯೆ |
ಭರ್ಮ್ಮೊಂದೆರ್ದೆದೆಱೆದು ಮಱುಗಿ ಬಾಯಂ ಬಿಟ್ಟಂ || ೫ ||

ವ || ಅಂತು ತನ್ನ ಬೆರಲೊಳುಂಗುರಮಂ ಕಾಣದೆ ತನ್ನ ಪರಿಜನಮುಂ ತಾನುಮಾಕುಲವ್ಯಾಕುಲಚಿತ್ತರಾಗಿ ಪೋದ ಬಂದ ನಿಂದೆಡೆಗಳೊಳೆಲ್ಲಮಱಸಿ ಕಾಣದೆ ಚಿಂತಾಕ್ರಾಂತರಾಗಿ ಸುಬಳಮಹಾರಾಜನೆನ್ನಂ ಪರಮ ವಿಶ್ವಾಸ ಭೂಮಿ ತನ್ನ ಬೆರಲೊಳಿರ್ದನರ್ಘ್ಯಮಪ್ಪ ರತ್ನಮುದ್ರಿಕೆಯಂ ಪಿಡಿದಿರಿಮೆಂದು ಕೊಟ್ಟ ನಿನ್ನೆನ್ನ ನಿರ್ವಾಹಮುಮರಸನದೆಸೆಯೊಳಾದ ಮೋಹಮುಮಱಿದುದೆಂದು ಮಲು ಮಲ ಮಱುಗುತ್ತುಂ ಮನೆಗೆವಂದು ತನ್ನಱಿವ ನಿಮಿತ್ತಂಗಳೊಳ್ ನೋಡಿಯುಂ ನಿಟ್ಟಿಸಲಾಱದೆ

ಸುಬಳಂ ನಚ್ಚುವನಾನುಮೊಂದೆರಡು ದೃಷ್ಟಂಗಂಡೆನಸ್ಮನ್ಮನೋ।
[1][ಸ][1]ಬಳಂ (?) ತೀರ್ವಡೆ ತೀರ್ಗುಂವಣಾ ಪರಮಹಂಸಸ್ವಾಮಿಯಿಂದೆಂದು ವಿ।
ಕ್ಲಬದಿಂ ತಾಂ ಬರವೇೞ್ವುದುಂ ಪರಮಹಂಸಂ ಬಂದು ಕುಳ್ಳಿರ್ದೊಡಿ।
ತ್ತು ಬಟಿಕ್ಕರ್ಘ್ಯಮನೆಯ್ದೆ ನೀಮೆಮಗೆ ಪೇೞಿಂ ಸ್ವೇಚ್ಛೆಯಿಂ ಪೃಚ್ಛೆಯಂ ॥ ೬ ॥

ವ॥ ಎಂಬುದುವಾ ಪಂಡಿತಂ ಕನ್ನಗಳ್ಳನಂತೆ ಬಳಪಮಂ ತೆಗೆದು ಕಬ್ಬಿಗನಂತೆ ಗೋಮೂತ್ರಕವೃತ್ತಾಳಂಕೃತನಾಗಿ ಭಂಡಾರಿಗನಂತಾಯಮಂ ಪಿಡಿದು ಜೂದುಗಾಱನಂತೆ ಕವಡಿಕೆಯಂ ತೆಗೆದು ತುರಗಾರೋಹಕನಂತಾರೂಢಕ್ರಮ ಮಱಿದು ವೈದ್ಯನಂತೆ ಪಂಚಾಂಗಶುದ್ಧಿಯಂ ನೋಡಿ ಮಂತ್ರವಾದಿಯಂತೆ ಗ್ರಹಗತಿಯಂ ಕಂಡು ತಥಾಗತಮತೋಪಾಸಕನಂತೆ ತಾರಾಪಥಕ್ಕೆಱಗಿ ಕೃಷಿನಿರತನಂತೆ ರಾಸಿಯಂ ನಿಲಿಸಿ ವಿಹಗದಂತೆ ಖೇಚಕ್ರಮಂ ವರ್ತಿಸಿ ಮತ್ತಮಕ್ಷರಕೇವಳಿ ದೂತಚೇಷ್ಟೆ ಮೊದಲಾಗಿರಲಾ ಬಿಚ್ಚುವಂ ವಿದ್ಯೆಗಳೊಳೆಲ್ಲಮೊಚ್ಚತಂ ನೋಡಿದೊಡೊಂದೊಂದರ್ಕೆ ಮಚ್ಚರಿಸಿದಂತೆ ಪಚ್ಚು ಪಸರಿಸಿ ನಿಚ್ಚಯ್ಸಲಾಱದುಮ್ಮಚ್ಚದೊಳಚ್ಚಿಗಂಗೊಂಡು ಮೂರ್ಛೆಯಿಂದೆಚ್ಚರ್ತ್ತಂತೆ ಬೆಚ್ಚನೆ ಸುಯ್ದು ತುಚ್ಛನಾಗಿರ್ದೀತಂ ತನ್ನಾಳ್ದನಲ್ಲಿ ನಿಚ್ಚಂ ಮೆಚ್ಚುವಡೆವುದುಂಟು ಪೇೞಲಱಿಯದೊಡೆನ್ನ ನಜ್ಞಾನಿಯೆಂದು ಮನ್ನಿಸಲಱಿಯನೆಂದು ತನ್ನೊಳವಧಾರಿಸಿ

ಇದು ಚಿಂತಾನಷ್ಟಮುಃಷ್ಟಿತ್ರಿತಯದೊಳಱಿದೆಂ ಚಿಂತೆ ತಚ್ಚಿಂತೆಯಾಗಿ।
ರ್ದುದು ಜೀವಾಜೀವಮೂಳತ್ರಯದೊಳನುಪಮಂ ಜೀವಮಾ ಜೀವಮುಂ ತ।
ಪ್ಪದೆ ನಾನಾಭೇದಸತ್ವವ್ರಜದೊಳಿದು ಚತುಷ್ಪಾದಿ ತದ್ಭೇದದೊಳ್ ತಾ।
ನಿದು ಶುಂಡಾಳಂ ನರೇಂದ್ರಂ ನಿಮಗೆ ಕುಡುವನಾಗಿರ್ದಪಂ ನೋಡೆ ದೃಷ್ಟಂ ॥ ೭ ॥

ವ॥ ಎಂಬುದುಂ ಸೂರ್ಯಮಿತ್ರನಾತನ ಪಸರಂಬಡೆದು ಕುಸುಮಿಸಿದ ಸಿಕತೆವೆತ್ತಿಸೆವ (?) ಪುಸಿಯ ಮಿಸುಪಂ ಕಂಡು ಕೆಟ್ಟದಱಿಂ ಕೆಟ್ಟು ಕೆಳೆಯಿಂಗಿಡಲಾಱದಿವರಱಿಯರೆಂದು ಪಱಿಯೆ ನುಡಿವುದು ಪುರುಷಾರ್ಥಮಲ್ಲೆಂದು ಪೊಗೞ್ದು ಪಿರಿದು

---

1 ಜ್ಞಾ

ನ್ಮಾಳಿಕೆಯಿಂ ಮನೆಯಂ ಪೊಱಮಟ್ಟು ಪೊಱವೊೞಲೊಳಱಸುತ್ತುಂ ಬರ್ಪನ್ನೆಗಂ ಗ್ರಾಮೇಕರಾತ್ರಂ ನಗರೇ ಪಂಚರಾತ್ರಂ ಅಟವ್ಯಾಂ ದಶರಾತ್ರಮೆಂಬೀ ನ್ಯಾಯದಿಂ ವಿಹಾರಿಸುತ್ತುಂ ಪರಮಜಿನಧರ್ಮಕೀರ್ತಿಯೆ ಮೂರ್ತಿಯಾದಂತುಗ್ರೋಗ್ರತಪಶ್ಚರಣ ನಿರತರಾಗಿಯುಮತ್ಯಂತ ಶಾಂತರಸಸ್ವರೂಪಮಂ ತಾಳ್ದಿ ಪಂಥಾತಿಚಾರ ನಿಯಮದಿಂ

ತನಗನತಿದೂರದೊಳ್ ನಂ।
ದನವನದೊಳ್ ಸ್ಫಟಿಕಮಯಶಿಲಾತಳದೊಳ್ ಯೋ
ಗನಿಯೋಗದಿಂದಮಿರ್ದರ್।
ಮುನೀಂದ್ರರೊರ್ವರ್ ಸುಧರ್ಮನಾಮಾಚಾರ್ಯರ್ ॥ ೮ ॥

ವ ॥ ಆಗಳಾ ದಿವ್ಯಾವಧಿಜ್ಞಾನಿಗಳಂ ನಿಧಾನಮಂ ಕಾಣ್ಬಂತೆ ಭೋಂಕನೆ ಕಂಡೀ ತಪೋಧನರೇನಾನುಂ ನಿಮಿತ್ತಂಗಳನಱಿವರಕ್ಕುಮುಂತುಂ ಪುತ್ತುಂ ಬತ್ತಲೆ ಯುಂ ಬಱಿದಿಲ್ಲೆಂಬ ನಾಣ್ನುಡಿಯುಂಟೆಂದವರನೆಯ್ದಿ ಬರ್ಪಾಗಳಾ ಪರಮಯೋ ಗಿಯುಂ ಪಂಥಾತಿಚಾರ ನಿಯಮನಿರ್ವರ್ತಿತ ಯೋಗನಿಯೋಗರಾಗಿ ತಮಗಿದಿರಂ ಬರ್ಪ ಸೂರ್ಯಮಿತ್ರನಂ ಕಂಡು ತದಾಕಾರೋಪಲಕ್ಷಿತದಿಂದತ್ಯಾಸನ್ನಭವ್ಯನೆಂದು ನಿಶ್ಚಯಿಸಿ ದಿವ್ಯಾವಧಿಯಂ ಪ್ರಯೋಗಿಸಿ ನೋಡಿ

ಧರಣೀ ಚಕ್ರಾಧಿನಾಥಂ ಸುಬಳನೃಪತಿ ವಿಶ್ವಾಸದಿಂ ತನ್ನ ಕಯ್ಯೊಳ್।
ಗುರುಮಂ ವಸ್ತ್ರೋತ್ಕರಾಳಂಕೃತಮನನುಪಮೋದಾತ್ತರತ್ನಪ್ರಭಾಭಾ।
ಸುರಮಂ ಭಾನೂಗ್ರತೇಜಂ ಕುಡೆ ಕಿಡಿಸಿ ತೊೞಲ್ದಾಕುಳವ್ಯಾಕುಲಾಂತಃ।
ಕರಣಂ ತಾನಾಗಿ ತಾತ್ಪರ್ಯದಿನೆಮಗಿದಿರಂ ಬಂದಪಂ ನಿರ್ವಿಕಲ್ಪಂ ॥ ೯ ॥

ಅಕ್ಷೂಣ ಪರಮಲಕ್ಷಣ।
ಲಕ್ಷಿತನೀ ಬರ್ಪ ಪಾರ್ವನೀ ಭವದೊಳೆ ಕ
ರ್ಮಕ್ಷಯ ಭಾಗಿಯೆನಿಕ್ಕುಂ
ಸಾಕ್ಷಾಜ್ಜಿನಶಾಸನಪ್ರದೀಪಕನಕ್ಕುಂ ॥ ೧೦ ॥

ಅಭಿಭವಿಸುವ ಶುಭಕರ್ಮ।
ಪ್ರಭಾವದಿಂದೀತನಿನ್ನೆಗಂ ಮಿಥ್ಯಾತ್ವಾ
ನುಭವಿಯೆನಿಸಿರ್ದನಾಸ।
ನ್ನಭವ್ಯನವ್ಯಾಕುಲಾತ್ಮಕಂ ನಿರ್ವ್ಯಾಜಂ ॥ ೧೧ ॥

ವ ॥ ಎಂಬನ್ನೆಗಂ ಸೂರ್ಯಮಿತ್ರಂ ಜಗನ್ಮಿತ್ರನನೆಯ್ದಿವಂದು ನಿಂದಿರ್ಪುದುಂ

ಸುಬಳಮಹೀನಾಥನ ಕೆ
ಯ್ಯ ಬೆರಲ ರತ್ನಾಂಗುಳೀಯಮಂ ಮಱವೆಯೊಳ।
ತ್ತ ಬಿಸುಟ್ಟು ನೀಮಿದೇಕೆ।
ತ್ತ ಬಂದಿರೆನೆ ಕೇಳ್ದು ವಿಸ್ಮಯಸ್ಮಿತಚಿತ್ತಂ ॥ ೧೨ ॥

ವ ॥ ಸಾಷ್ಟಾಂಗಪ್ರಣತನಾಗಿ

ವನಧಿಪ್ರಾವೃತಧಾರಿಣೀತಳದೊಳಿಂತೀಯಂದದಿಂ ಪೇಟ್ವನೊ।
ರ್ವನುಮಂ ಕಾಣೆನೆ ಬಂದು ನಿಂದನಿತಱೊಳ್ ನಾಮಗ್ರಹಂ ಮಾಡಿ ಮ।
ತ್ಸ್ವನಿತಾಂತರ್ಗತ (?) ಕಾರ್ಯಮಂ ನುಡಿದೆ ನಿನ್ನಿಂ ಬಿಟ್ಟು ದೈವಜ್ಞನಾ।
ವನುಮಿಲ್ಲಾಂ ಕೃತಕೃತ್ಯನಾದೆನದಱಿಂದೀಗಳ್ ಮುನೀಂದ್ರೋತ್ತಮಾ ॥ ೧೩ ॥

ವ ॥ ನಿಮ್ಮಡಿ ನಿಮ್ಮ ಬೆಸಸಿದುಂಗುರಮನಾನೆಲ್ಲಿ ಕಿಡಿಸಿದೆನಾರ ಕಯ್ಯೊಳಿರ್ದುದಾವತೆಱದೊಳಱಸಿ ಕಾಣಲಕ್ಕುಮದಂ ಸವಿಸ್ತರಂ ಬೆಸಸಿಮೆಂಬುದುಂ ಸರ್ವಾವಧಿಜ್ಞಾನಲೋಚನಂ ದಿವ್ಯಾವಧಿಯಂ ಪ್ರಯೋಗಿಸಿ ನೋಡಿ

ಸಕಲೋರ್ವೀಪತಿ ಮಜ್ಜನಂಬುಗುತುಮಿರ್ದಾವೇಷ್ಟಕಾಖ್ಯಂ ತದೀ।
ಯ ಕರಾಂಗುಲ್ಯದೊಳಿರ್ದು ಬಿರ್ದು ಸಲಿಲಾಂತರ್ಭಾಗದೊಳ್ ಪದ್ಮಿನೀ
ಮುಕುಲಾಲಂಕೃತಮಾಗಿ ಬಾಳರವಿರೋಚಿಸ್ಪರ್ಧಿಯಾಗಿರ್ಕುಮು।
ತ್ಪಿಕಕೇಕೀಶುಕಭೃಂಗನಿಸ್ವನವನೋದ್ದೇಶಾಬ್ಜಿನೀಷಂಡದೊಳ್ ॥ ೧೪ ॥

ವ॥ ಇಂದು ನೀಮಾ ಸರೋರುಹಾಕರದೊಳ್ ಮಿಂದಾದಿತ್ಯಂಗರ್ಘ್ಯಮನೆತ್ತು ವಾಗಳ್ ಬೆರಲಿಂ ಸಡಿಲ್ದು ಬಿಟ್ಟು ತತ್ಸರೋರುಹಾಕರದೊಳಗಣ ಸರೋಜಕುಟ್ಮಲ ದೊಳ್ ಸಿಲ್ಕಿರ್ದುದಾ ಮುಗುಳ್ ನಾಳೆ ನೇಸರ್ಮೂಡುವಾಗಳ್ ನೀರ ಮೇಲೆ ನಾಲ್ವೆ ರಲಂತರಂ ಮೇಲೆ ಬೆಳಗಿರ್ದಾಗಳುಂಗುರಮಂ ಕಾಣ್ಬಿರೆಂಬುದುಂ ಹರ್ಷೋತ್ಕರ್ಷಿ ತಾಂತರಂಗನಾಗಿ ನಮಸ್ಕಾರಂ ಗೆಯ್ದಂದಿನ ದಿನಮೆಲ್ಲಂ ನಂದನವನಕ್ಕಂ ಕಮಲ ವನಕ್ಕಂ ಕಾಪಂ ಪೇಟ್ದು ತಾನುಮಾ ರಾತ್ರಿಯೊಳಾ ಸರಸಿಯ ಸಮೀಪದೊಳ್ ಜಾನಮಿರ್ದು ಆದಿತ್ಯೋದಯದೊಳ್ ಕೊಳದ ತಡಿಯೊಳ್ ಬಂದು ನಿಂದಿರ್ಪುದುಂ

ಮಿಹಿರಪ್ರದ್ಯೋತಿಸಂಧ್ಯಾಭವನ ಸಮಯದೊಳ್ ಪದ್ಮಿನೀ ಷಂಡದೊಳ್ಪೊದ ।
ಳ್ದು ಹಬಿರ್ವೆದ್ದುಂಗುರಂ (?) ನೀರೊಳಗಣ ಮುಗುಳೊಳ್ ಸಿಲ್ಕಿ ನಿರ್ನಿಕ್ತ ಸತ್ಯಂ
ಸಹಕೃತ್ಯಂ ಸೂರ್ಯಮಿತ್ರಾಹ್ವಯದಿನೆನಗೆ ತಾನೆಂದು ಪೇಟ್ವಂತಿರಿರ್ದ
ತ್ತು ಹಟನ್ನೀರೇಜನಾಳಂನಿಮಿರ್ದುದನಿದಿರೊಳ್ ಪೊತ್ತು ತೋರ್ಪಂದದಿಂದಂ ॥೧೫॥

ವ॥ ಆಗಳಾ ರತ್ನಮುದ್ರಿಕೆಯನತ್ಯಂತ ಸಂತುಷ್ಟಾಂತರಂಗಸಂಗತನಾಗಿ ಕಂಡು ಕಳೆದುಕೊಂಡು ಸುಬಳಮಹಾರಾಜನ ಕೈಯೊಳ್ ಕೊಟ್ಟು ಬಟಿಕ್ಕೆ ತನ್ನ ಮನೆಗೆ ವಂದು ನಿಜಾಂಗನಾಮುಖವಿಲೋಕನಂಗೆಯ್ದು

ನೋಡಗೆ ನಿನ್ನೆ ಮುದ್ರಿಕೆಯ ಚಿಂತೆಯಿನೊಯ್ಯನೆ ಬೀದಿವೀದಿಯೊಳ್ ।
ನೋಡುತ ಪೋಗೆವೋಗೆ ಪುರಬಾಹಿರದೊಳ್ ಮುನಿನಾಥನೊರ್ವನ
ಳ್ಕಾಡದೆ ನಿಂದೊಡುಂಗುರದ ಕೇಡಿನೊಳಾದಟಿಲಟ್ವೆ ವಿದ್ಯೆಯುಂ ।
ನೋಡುವೆನೀತನೊಳ್ನುಡಿವೆನೆಂದಿರದಾದ ವಿಷಾದಚಿತ್ತದಿಂ ॥ ೧೬ ॥

ಪೋಗಿ ದಿಗಂಬರನಂ ಪರ ।
ಮಾಗಮ ಕೋವಿದನನಮಿತಗುಣವಾರಿಧಿಯುಂ
ರಾಗದ್ವೇಷಂಗಳ್ತನ ।
ಗಾಗದನಂ ಕಂಡು ನಿಲ್ವುದುಂ ತನ್ಮುನಿಪಂ ॥ ೧೭ ॥

ಮ ಮಾ॥ ಮುನ್ನ ಕಂಡಱಿವಂತೆ ಮೇಣ್ಕಱಿಯಂದೆ ತೊಟ್ಟೊಡನಾಡಿದಂ ।
ತೆನ್ನನಾಗಳೆ ಕಾಣುತುಂ ಪ್ರಿಯದಿಂದೆ ನೋಡುತುಮಿರ್ದೊಡಾಂ ॥
ತನ್ನನೆನ್ನಯ ಚಿಂತೆಯಂ ಬೆಸಗೊಳ್ವೆನೆಂಬಿನಮನ್ನೆಗಂ ।
ರನ್ನದುಂಗುರಮಿರ್ದ ತಾಣಮನಾಗಳಾ ಮುನಿ ತೋಱಿದಂ ॥ ೧೮ ॥

ಪಿರಿದುಂ ತಾತ್ಪರ್ಯದಿಂದಾ ಮುನಿಪನೆನಗೆ ಪೇೞ್ದಂದದಿಂ ತತ್ಸರೋಜಾ ।
ಕರಹೇಮಾಂಭೋಜಿನೀಕುಟ್ಮಲವಿಲಸದಳಂಕಾರಮಾಗಿರ್ದುದಂ ಭಾ ॥
ಸುರತೇಜೋರೂಪಮಾಗಿರ್ದುದನಹಿಮಕರಸ್ಪರ್ಧಿಯಾಗಿರ್ದುದಂ ನಿ ।
ರ್ಭರಚಿಂತಾಕ್ರಾಂತನೆಂ ಮುದ್ರಿಕೆಯನಕುಟಿಳಸ್ವಾಂತನೆಂ ನೋಡಿ ಕಂಡೆಂ ॥ ೧೯ ॥

ಪಾದಚ್ಛಾಯೆಯನಿಟ್ಟು ಜೋಯಿಸದಭಿಪ್ರಾಯಂಗಳಿಂ ಹೋರೆಯಿಂ ।
ದೋದಿಂ ಪೃಚ್ಛಕಲಗ್ನದಿಂ ಸರುತದಿಂದಾರೂಢದಿಂ ನೋಡಿದಾ ॥
ಬೋಧಂ ನಚ್ಚಿನ ನಮ್ಮ ಜೋಯಿಸಿಗನೇನಂ ಪೇೞ್ವನೇನೆಂಬೆನಾ ।
ಬೋಧಂ ಭೋಂಕನೆ ಪೇೞ್ವ ಜೋಯಿಸಮದಾರ್ಗಂ ಮರ್ತ್ಯರೊಳ್ ದುರ್ಲಭಂ॥೨೦॥

ಶಕುನಂ ಜೋಯಿಸಮಾದಿಯಾಗಿ ಪೆಱವುಂ ವಿಜ್ಞಾನವಿದ್ಯಾವಿಶೇ ।
ಷಕಳಾಳಾಪದೊಳಾಂ ಸಮಗ್ರನೆನಿದೊಂದಾಶ್ಚರ್ಯಮಂ ನೋಡ ಕೌ ॥
ತುಕಮಂ ಜ್ಞಾನವಿಶೇಷಮಂ ಸಕಳವಿದ್ಯಾರತ್ನಶುಂಭತ್ಕರಂ ।
ಡಕಮಂ ಕಂಡೆನಿದೊಂದಪೂರ್ವಮನಿಳಾಲೋಕೈಕಸಂಪೂಜ್ಯಮಂ ॥ ೨೧ ॥

ಆ ವಿಜ್ಞಾನವಿಶೇಷ ಕ ।
ಳಾವಳಿಗಳೊಳೆಲ್ಲ ಪರಮಹಂಸನ ದೊರೆಯಂ ॥
ದೈವಜ್ಞನಱಿಯನೆಂದೊಡೆ ।
ದೇವಂ ಪೆಱನಾವನಾತನಿರೆ ಭೂತಳದೊಳ್ ॥ ೨೨ ॥

ಆ ಮಹಾನುಭಾವಂ ಮುನ್ನಮೆನ್ನನಱಿಯದೆಯುಂ ತನ್ನಱಿತಮಂ ಪ್ರಭಾ
ವಿಸಿದನಾ ವಿಜ್ಞಾನಮನೇನದನವಶ್ಯಂ ಕುಡುಗುಮದು ಕಾರಣದಿನಾನಾ ಮುನೀಶ್ವರ

ನಲ್ಲಿಗೆವೋಗಿ ಪೋದ ಮುಹೂರ್ತಮಾತ್ರದೊಳ್ ಕಲ್ತು ಬರ್ಪೆನೆನ್ನ ಱಿಯದ ನಿಮಿತ್ತ ಮಾವುದುಮಿಲ್ಲಿಲ್ಲಿ ಯೇನಾನುಮುಪಾಧ್ಯಾಯ ರಹಸ್ಯ[1]ಮುಕ್ಕುಮದುವುಂ ಸೂಚನಾ ಮಾತ್ರದೊಳೆ ವಿದಿತಮುಕ್ಕುಮದಲ್ಲದೆಯುಂ

ಉಪದೇಶಂ ದೊರೆಕೊಂಡುದಪ್ಪೊಡೆನಗೀ ತ್ರೈಲೋಕ್ಯ ಸಾಮ್ರಾಜ್ಯರಾ ।
ಜ್ಯಪದಂ ಸಾರ್ದನಿತುಂ ಮಹಾಮಹಿಮೆ ಸಾಗ್ರ್ಯಂ ವಿದ್ಯೆಯಂ ಕೊಂಡು ಬಂ ।
ದಪೆನಾನೀಗಳೆ ಬರ್ಪಿನಂ ಮನೆಗೆ ನೀನಿಂ ಪಯ್ತುಮಾಗೆಂದು ಪೇ ।
ೞ್ದು ಪುರಾಭ್ಯಂತರದಿಂದಮಂದು ಪೊಱಮಟ್ಟಂ ಸೂರ್ಯಮಿತ್ರದ್ವಿಜಂ ॥ ೨೩ ॥

ವ॥ ಅಂತು ತನ್ನ ಪರಿಜನಕ್ಕಂ ಸ್ವಜನವರ್ಗಕ್ಕಮಱಿಪದೆ ತನ್ನ ರೂಪನಱಿಪದೆ ರೂಪುಗರೆದು ತಾನೊರ್ವನೆ ನಟ್ಟನಡುವಿರುಳಪ್ಪಾಗಳ್ ರಾಜಗೃಹಾಧಿಸ್ಥಾನದಿಂ ಪೊಱಮಟ್ಟು ಬಂದು ಸುಧರ್ಮಾಚಾರ್ಯರನಾ ವನೋದ್ದೇಶದೊಳ್ ಕಾಣದೆ ವನಪಾಲಕರ್ಕಳನುಚರರಿಂ ನಿವೇದಿತಮಪ್ಪ ದಿಶಾಮಾರ್ಗದಿಂ ತಗುಳ್ದು ಪೋಗಿ ಪೆಱತೊಂದೂರ ಪೊ ವೊಬಿಲೊಳೆಱಗಿ ತುಱುಗಿ ನೆಱೆ³ ಸೊಗಯಿಸುವುದ್ಯಾನಮಧ್ಯ ಪ್ರದೇಶದ ಶಾಲದ್ರುಮಾಧಃಸ್ಥಳನಿವಾಸಿಗಳಾಗಿರ್ದ ಸುಧರ್ಮಮುನಿಮುಖ್ಯರಂ ಕಂಡು ಮೂಱುಸೂೞ್ ಬಲಗೊಂಡು ಭಕ್ತಿಭರವಿನಮಿತಮಸ್ತಕನ್ಯಸ್ತಹಸ್ತಪುಟನಾಗಿ ಯೋಗೀಂದ್ರವೃಂದವಂದ್ಯಪಾದಾರವಿಂದದ್ವಂದ್ವನ ಮುಖಾರವಿಂದಮಂ ನೋಡಿ

ಯಮಿವೃಷಭ ನಿಮ್ಮ ಬೆಸಸಿದ ।
ಕಮಲಾಕರದೊಳ್ ಸರೋಜಕುಟ್ಮಲದೊಳ್ ಸಂ ॥
ಕ್ರಮಿಸಿ ವಿರಾಜಿಸಿ ಬೆಳಗು ।
ತ್ತುಮಿರ್ದುದಂ ನೋಡಿ ಕಂಡೆನಾನುಂಗುರಮಂ ॥ ೨೪ ॥

ವೃ॥ ಎನಗತಿಶಯಮಾಯ್ತು ಪುಂಡರೀಕೋ ।
ದ್ಯಾನದೊಳಿರ್ದಪುದೆಂದು ಪೇೞ್ದ ದಿವ್ಯ ॥
ಜ್ಞಾನಮಹಿಮಾಪ್ರಭಾವವೀರ್ಯಾ ।
ನೂನಗುಣಾ ಧಾರಣೀಸ್ತುತಂ ಮುನೀಂದ್ರಾ (?) ॥ ೨೫ ॥

---

1 + ವಾ (ಗ)

ಉಮ್ಮಚ್ಚಂದೊಳಱಿವೆನ್ನೆಂ ।
ದೊಮ್ಮನದೊಳ್ ಬಗೆದ ಕಾರ್ಯಮಂ ಕ್ಷಣದಿಂದಂ ॥
ನಿಮ್ಮಡಿ ನೀಮೆನಗಱಿಪಿದ ।
ಸಮ್ಮತಮಂ ಬೆಸಸಿಮಖಿಳಧಾತ್ರೀಹಿತಮಂ ॥ ೨೬ ॥

ಎನಗೆ ಕಳತ್ರಮಿತ್ರಬಹುಪುತ್ರ ಕುಟುಂಬಮುಳುಂಬಮೆನ್ನ ಮಾ ।
ತಿನಿತೆ ಮುನೀಂದ್ರ ನಿಮ್ಮಱಿವ ಜೋಯಿಸಮಂ ದಯೆಗೆಯ್ದಿರಪ್ಪೊ ॥
ಡೆನ್ನನಿತು ಕೃತಾರ್ಥರುಂ ಸುಚರಿತಾರ್ಥರುಮೆಯ್ದೆ ಸಮರ್ಥರುಂ ಮಹಾ ।
ವನಿಯೊಳಗಿಲ್ಲ ನೀವೆ ಶರಣೆಂ ಶರಣಾಗತಕಲ್ಪಭೂರುಹಾ ॥ ೨೭ ॥

ವ॥ ಎಂದು ನಾನಾಪ್ರಕಾರದ ಮಿಥ್ಯಾವಿನಯಂಗಳಿಂ ಸೂರ್ಯಮಿತ್ರಂ ಸುಧರ್ಮಾಚಾರ್ಯರ ಕಾಲಮೇಲೆ ಕವಿದು ಪಡುವುದುಂ

ಉತ್ತಮ ಮುನೀಶ್ವರಂ ವಿ ।
ಪ್ರೋತ್ತಮನಂ ಪ್ರೀತಿಯಿಂದೆ ನುಡಿದಂ ನಾನಾ ॥
ಭಿತ್ತಿಗಳಿಂದೆತ್ತಂ ದಿ ।
ಗ್ಭಿತ್ತಿಗಳಂ ದಂತಕಾಂತಿ ಧವಳಿಸುವಿನೆಗಂ ॥ ೨೮ ॥

ವ॥ ಅಮ್ಮ ನಿಮ್ಮ ಮನದೊಳಱಿವಂ ನೆಱೆಯಱಿವ ಬಗೆಯುಳ್ಳೊಡೆ ಪೇೞ್ವೆಮಾ ಜ್ಯೋತಿರ್ಜ್ಞಾನಮಪ್ಪೊಡೆಮ್ಮನ್ನರಪ್ಪ ಋಷಿರೂಪಕರ್ಗಲ್ಲದೆ ಕಲಲುಂ ಕಲಿಸಲುಂ ಬಾರದೆಂಬುದುಂ ಭಟ್ಟಂ ಬೆಕ್ಕಸಂಬಟ್ಟು ತನ್ನಂತರ್ಗತದೊಳ್

ತಲೆವಱಿದುಟ್ಟುದಂ ಬಿಸುಟು ಮಾಯದೆ ಮೇಕದೆ ದಂತಪಂತಿಯಂ ।
ಸುಲಿಯದೆ ಸಂಯಮೋಪಕರಣಂಗಳನಿಂಬಿನೆ ತಾಳ್ದಿ ದೇಹದೊಳ್ ॥
ಮಲಮನನಾರತಂ ತಳೆದು ಪಾಸಕವಾಸದೊಳೇಕಭುಕ್ತಮಂ ।
ಸಲಿಸುವ ಘೋರವೀರತಪಮಾ ತಪಮಾತಪದಿಂದಮುಗ್ಗಳಂ ॥ ೨೯ ॥

ದ್ವಿಜಕುಲನೆನಿಸುವನೀ ಪ್ರ।
ವ್ರಜಿತದೊಳೆಸಗಿದೊಡೆ ದೋಷಮುಂಟೆಂದು ಮನು ॥
ವ್ರಜವಾಕ್ಯಮುಂಟು ಲ।
ಜ್ಜಿಸದೆ ಲಜ್ಜೆಗೆಟ್ಟೆಂತು ಮೆಯ್ಯನೊಡ್ಡುವೆನಿದಱೊಳ್ ॥ ೩೦ ॥

ವ॥ ಎಂದು ವಿವಕ್ಷೆಗೆಯ್ದು ಮತ್ತಂ

ಮತಿಗೆಟ್ಟಿದುವೆ ಪರತ್ರೆಗೆ।
ಹಿತಮೆಂದೀ ಸಮಯದತ್ತಲೆಱಗಿದೊಡೆ ಕುಲ ॥
ಕ್ಷತಿಯುಕ್ಕುಂ ಜೋಯಿಸಮಱಿ।
ವ ತಕ್ಕಿನೊಳ್ ತಪಸಿಯಾದೊಡಾವುದು ದೋಷಂ ॥ ೩೧ ॥

ವೃ॥ ಆನೀಗಳೀವಿದ್ಯೆಯನಾಜ್ಞೆಯಿಂದಂ।
ಏನಾಗಿಯುಂ ಸಾಧಿಸಿಕೊಳ್ವೆನುಂತುಂ।
ಕೇನಾಪ್ಯುಪಾಯೇನ ಫಳಂಹಿಸಾಧ್ಯಂ ॥
ತಾನೆಂಬುದುಂಟಲ್ತೆ ಪುರಾಣವಾಕ್ಯಂ ॥ ೩೨ ॥

ಮೇಲ್ಮೆಲೆಗೆಯ್ಯದೆ ಸವಣನ।
ಬಲ್ಮೆಯನಱಿಯಲ್ಕೆ ದೀಕ್ಷೆಯಂ ಕೊಂಡಪೆನ ॥
ತ್ತಲ್ಮತ್ತಮೆನ್ನ ತಲೆಯೊಳ್।
ಪುಲ್ಮೊಳೆತಪ್ಪುದೆ ಮುನೀಂದ್ರನೆಂಬುದನೆಂಬೆಂ ॥ ೩೩ ॥

ಪೆಱತೇನೊ ಪರಿಜ್ಞಾನಮ।
ನಱಿವಿನಮಿವರೇನನೆಂದರೆಂದಂದದೊಳಾಂ।
ಪೆಱಪಿಂಗದೆ ಪೆಱತೊಂದ।
ಕೈಱಗದೆ ಕೈಕೊಂಡು ವಿನಯಮಂ ಪ್ರಕಟಿಸುವೆಂ ॥ ೩೪ ॥

ವೃ॥ ಎಂದು ಮಾಯಾವಿಕೃತಿಯಿಂ ದೀಕ್ಷಾಪ್ರಸಾದಮೆಂದು

ದ್ರವ್ಯತಪದಿಂದಮಲ್ಲದೆ ।
ನಿರ್ವ್ಯಾಕುಳಭಾವತಪಮುಮಂ ತಳೆಯಂ ತಾಂ ॥
ನಿರ್ವ್ಯಾಜಮಿಾತನೆಂದಾ ।
ದಿವ್ಯಾವಧಿಬೋಧರಱಿದು ತಪಮಂ ಕೊಟ್ಟರ್ ॥ ೩೫ ॥

ವ॥ ಅಂತು ಪರಮದೀಕ್ಷಾಮಾರ್ಗದೊಳ್ ದೀಕ್ಷೆಯಂ ದಯೆಗೆಯ್ದು ಪ್ರತಿಕ್ರಮಣಮಂ ಪೇೞ್ದುದುಂ ಮಾಯಾತಪಸ್ವಿ ಜೋಯಿಸಮಂ ವಕ್ಖಾಣಿಸಿಮೆಂದು ಕಯ್ಗಳಂ ಮುಗಿದು ಮುಂದೆ ಕುಳ್ಳಿರ್ಪುದುಂ ಕ್ರಿಯಾಪೂರ್ವಕನಮಸ್ಕಾರಂಗಳುಮಂ ನಿಯಮಾಳೋಚನಕ್ರಿಯೆಗಳನಱಿದೊಡಲ್ಲದೆ ನಿಮಿತ್ತಮನಱಿಯಲ್ಬಾರದೆಂಬುದುಂ ತನಗಾವಶಾಸ್ತ್ರಂಗಳಾದೊಡಮೇಕಸಂಧಿಯೊಳೆಬರ್ಪ್ಪವಪ್ಪುದಱಿಂ ಕೆಲವು ದಿವಸದೊಳಮೆಲ್ಲಮನೋದಿ ನಿಮ್ಮಡಿ ನಿಮ್ಮ ಬೆಸಸಿದೋದುಗಳನೆಲ್ಲಮನೋದಿದೆಂ ಜೋಯಿಸಮಂ ಕಲಿಸಿಮೆಂಬುದುಂ ಪ್ರಥಮಕರಣಚರಣಾನುಯೋಗಂಗಳಂ ನಿರವಶೇಷಂ ಕಲ್ತೊಡಲ್ಲದೆ ಜೋಯಿಸಮಂ ಕಲಲ್ಬಾರದೆಂಬುದುಂ

ಸಾರ್ಥಂ ಕ್ಕೆಸಾರ್ಗಮಿಂತೀಸಮಯದ ತೆಱನಂ ವ್ಯಕ್ತಮಾಗಿರ್ಕಮಾಜ್ಞಾ ।
ನಾರ್ಥಂ ಮುನ್ನೋದಿದೋದಿಂದೆನಗಿದು ಪಿರಿದಲ್ತೆಂದು ಪೂರ್ಣೋದಿದಂ ಗ್ರಂ ॥
ಥಾರ್ಥಂ ನಿರ್ನಿಕ್ತಮಾಗಲ್ ಚರಣಕರಣ ರತ್ನತ್ರಯಾರಾಧನಾ ತ ।
ತ್ವಾರ್ಥಾಚಾರಾನುಯೋಗಪ್ರಭೃತಿ ಸಕಲಶಾಸ್ತ್ರಂಗಳಂ ಸೂರ್ಯಮಿತ್ರಂ ॥ ೩೬ ॥

ಅನಿತುಮನಱಿದಱಿಪುವು ।
ದೆನಗೆ ನಿಮ್ಮಡಿ ನಿಮ್ಮ ವಿದ್ಯೆಯಂ ದಯೆಯಿಂದೆಂ ॥
ದೊನನವಧಿಜ್ಞಾನವಿಲೋ ।
ಚನವಿಭವಂ ವಿಶ್ರುತಶ್ರುತಂ ಮುನಿ ನುಡಿಗುಂ ॥ ೩೭ ॥

ವ॥ ನೀನೀಗಳ್ ಸಮಸ್ತಾಗಮಪದಾರ್ಥತತ್ತ್ವಂಗಳಂ ಸವಿಸ್ತರಮೋದಿದಯ್ ಕೆೞಿದುಮೊಂದಧಿಕಾರದಿಂ ದ್ರವ್ಯಾನುಯೋಗಮೆಂಬುದುಂಟದು ನಿಮ್ಮನ್ನರಪ್ಪ ನಿಶಿತ

ಮತಿಗಳ್ಗೆ ಪಂಚರಾತ್ರಿಯೊಳೆ ಪ್ರತೀತಿಯಕ್ಕುಮದಲ್ಲದೊಡಂ ಜಿನಶಾಸನಮೆಂಬ ಚೈತ್ಯನಿಕೇತನಕ್ಕೆ ಸಿದ್ಧಾಂತಮೆಂಬಧಿಕಾರಂ ಸಾರರತ್ನಮಯಕಳಶವಿಸ್ಫುರ್ಂತಿದುರ್ದದಮುಕಾರಣದಿಂದಾ ಕಳಶದಿಂ ಮೇಲೆ

ಒಂದುಂ ಬೆಸನಿಲ್ಲದನಱಿ ।
ದಂದೆಮ್ಮಱಿವಱಿತಮುಱಿಯಲಕ್ಕುಂ ನಿಮಗಿ ॥
ನ್ನೆಂದಾಗಳ್ ಸಂತೊಸದಿಂ ।
ದಂದೀ ತ್ರಿಜಗಮುಮನಾಗಳಾಳ್ವಂತಾದಂ ॥ ೩೮ ॥

ವ॥ ಅಂತತ್ಯಂತಸಂತುಷ್ಟಸ್ವಾಂತನಾಗಿ ಗುರುಚರಣಕಮಲಕ್ಕೆಱಿಗಿ ಪೊಡೆವಟ್ಟು

ದಯೆಯಿಂ ಬೆಸಸಿಂ ದ್ರವ್ಯಾ ।
ನುಯೋಗಮುಂ ಕೇಳ್ವೆನೆಂದು ಮಾಯಾಖುಷಿ ತಾಂ ॥
ಪ್ರಿಯದಿಂದಂ ಬೆಸಗೊಳೆ ದಿ ।
ವ್ಯಯೋಗ ಶುಭದಿನ ಮುಹೂರ್ತ ಲಗ್ನೋದಯದೊಳ್ ॥ ೩೯ ॥

ವ॥ ಸಿದ್ಧಾಂತಮಂ ಮೊದಲ್ಗೊಳಿಸುವುದುಮಲ್ಲಿನಿರ್ದೇಶ ಸ್ವಾಮಿತ್ವಸಾಧನಾಧಿಕರಣಸ್ಥಿತಿವಿಧಾನದಿಂ ಸತ್ಸಂಖ್ಯಾಕ್ಷೇತ್ರಸ್ಪರ್ಶನ ಕಾಲಾಂತರ ಭಾವಾಲ್ಪ ಬಹುತ್ವಸ್ಥಿತಿಯಿಂ ಸಾಮಾನ್ಯ ವಿಶೇಷವ್ಯಾವೃತ್ತಿ ವಿರುದ್ಧಾವಿರುದ್ಧಧರ್ಮಕ್ರಮದಿಂ ಸ್ಯಾದಸ್ತಿ ಸ್ಯಾನ್ನಾಸ್ತಿ ಸ್ಯಾದಸ್ತಿನಾಸ್ತಿ ಸ್ಯಾದವಕ್ತವ್ಯಂ ಸ್ಯಾದಸ್ತ್ಯವಕ್ತವ್ಯಂ ಸ್ಯಾನ್ನಾಸ್ತ್ಯವಕ್ತವ್ಯಂ ಸ್ಯಾದಸ್ತಿನಾಸ್ತ್ಯವಕ್ತವ್ಯಂ ಎಂಬ ಸಪ್ತಭಂಗಿಯಿಂ ನೈಗಮಸಂಗ್ರಹ ವ್ಯವಹಾರ ಋಜುಸೂತ್ರ ಶಬ್ದಸಮಭಿರೂಢೈವಂಭೂತಾದಿ ನಯವಿಭೇದದಿಂ ನಾಮಸ್ಥಾಪನಾದ್ರವ್ಯಭಾವದಿಂ ಜೀವತತ್ತ್ವಮಜೀವತತ್ತ್ವಮಾಸ್ರವತತ್ತ್ವಂ ಬಂಧತತ್ತ್ವಂ ಸಂವರಾತತ್ತ್ವಂ ನಿರ್ಜರಾತತ್ತ್ವಂ ಮೋಕ್ಷತತ್ತ್ವಮೆಂಬ ಸಪ್ತತತ್ತ್ವರೂಪಮುಮಂ ಜೀವಪದಾರ್ಥಮಜೀವಪದಾರ್ಥಂ ಮೋಕ್ಷಪದಾರ್ಥಂ ಆಸ್ರವಪದಾರ್ಥಂ ಸಂವರಪದಾರ್ಥಂ ನಿರ್ಜರಪದಾರ್ಥಂ ಬಂಧಪದಾರ್ಥಂ ಮೋಕ್ಷಪದಾರ್ಥಂ ಪುಣ್ಯಪದಾರ್ಥಂ ಪಾಪಪದಾರ್ಥಮೆಂಬ ನವಪದಾರ್ಥಮುಮಂ ಜೀವದ್ರವ್ಯ ಪುದ್ಗಲದ್ರವ್ಯ ಧರ್ಮದ್ರವ್ಯ ಅಧರ್ಮದ್ರವ್ಯ ಆಕಾಶದ್ರವ್ಯ ಕಾಲದ್ರವ್ಯಮೆಂಬ ಷಡ್ದ್ರವ್ಯಂಗಳ

ಗುಣಪರ್ಯಾಯಮುಮಂ ಜೀವಾಸ್ತಿಕಾಯಂ ಪುದ್ಗಲಾಸ್ತಿಕಾಯಂ ಧರ್ಮಾಸ್ತಿಕಾಯಂ ಅಧರ್ಮಾಸ್ತಿಕಾಯಂ ಆಕಾಶಾಸ್ತಿಕಾಯಮೆಂಬ ಪಂಚಾಸ್ತಿಕಾಯ ನಿಕಾಯಮುಮಂ ಮತಿಜ್ಞಾನಾವರಣೀಯಂ ಶ್ರುತಜ್ಞಾನಾವರಣೀಯಂ ಅವಧಿಜ್ಞಾನಾವರಣೀಯಂ ಮನಃಪರ್ಯಯಜ್ಞಾನಾವರಣೀಯಂ ಕೇವಲಜ್ಞಾನಾವರಣೀಯಮೆಂಬೀ ಪ್ರಕಾರದೆ ಪಂಚಪ್ರಕಾರಜ್ಞಾನಾವರಣೀಯಮಂ ಚಕ್ಷುರ್ದರ್ಶನಾವರಣೀಯಮಚಕ್ಷುರ್ದರ್ಶನಾವರಣೀಯಮವಧಿದರ್ಶನಾವರಣೀಯ ಕೇವಲದರ್ಶನಾವರಣೀಯಂ ನಿದ್ರಾ ನಿದ್ರಾನಿದ್ರಾ ಪ್ರಚಲಾ ಪ್ರಚಲಾಪ್ರಚಲಾ ಸ್ತ್ಯಾನಗೃದ್ಧಿಭೇದದಿಂ ನವವಿಧಭೇದಮಪ್ಪ ದರ್ಶನಾವರಣೀಯಮುಮಂ ಸಾತಾಸಾತಸಂವಿಭಾಗದಿನಿರ್ತೆಱನಪ್ಪ ವೇದನೀಯಮುಮಂ ದರ್ಶನಮೋಹದೊಳಂ ಚಾರಿತ್ರಮೋಹದೊಳಂ ಯಥಾಕ್ರಮದಿಂ ಸಮ್ಯಕ್ತ್ವ ಮಿಥ್ಯಾತ್ವ ಸಮ್ಯಕ್‌ಮಿಥ್ಯಾತ್ವ ಹಾಸ್ಯ ರತ್ಯರತಿ ಶೋಕ ಭಯ ಜುಗುಪ್ಸಾ ಸ್ತ್ರೀಪುನ್ನಪುಂಸ ವೇದಮೆನಿಸಿಯುಮನಂತಾನುಬಂಧಿ ಅಪ್ರತ್ಯಾಖ್ಯಾನ ಪ್ರತ್ಯಾಖ್ಯಾನ ಸಂಜ್ವಲನ ಕ್ರೋಧಮಾನಮಾಯಾ ಲೋಭಕಷಾಯವೇದನೀಯಮೆನಿಸಿಯುಮಿಪ್ಪತ್ತೆಂಟು ತೆಱನಪ್ಪ ಮೋಹನೀಯಮುಮಂ ನರಕತಿರ್ಯಗ್ಮನುಷ್ಯದೇವಾಯುಷ್ಯಚತುಷ್ಕಮಪ್ಪಾಯುಷ್ಯಮುಮಂ ಗತಿಜಾತಿಶರೀರಾಂಗೋಪಾಂಗ ನಿರ್ಮಾಣಬಂಧನಸಂಘಾತಸಂಸ್ಥಾನ ಸಂಹನನ ಸ್ಪರ್ಶರಸಗಂಧವರ್ಣಾನುಪೂರ್ವ್ಯ ಗುರುಲಘೂಪಘಾತಪರಘಾತ ತಪೋದ್ಯೋತೋಚ್ಛ್ವಾಸವಿಹಾಯೋಗತಿ ತ್ರಸಸ್ಥಾವರ ಬಾದರಸೂಕ್ಷ್ಮಪರ್ಯಾಪ್ತಕಾಪರ್ಯಾಪ್ತಕ ಪ್ರತ್ಯೇಕಶರೀರ ಸಾಧಾರಣಶರೀರ ಸ್ಥಿರಾಸ್ಥಿರ ಶುಭಾಶುಭ ಸುಭಗದುರ್ಭಗ ಸುಸ್ವರದುಸ್ವರಾದೇಯಾನಾದೇಯ ಯಶಃಕೀರ್ತಿ ಆಯಶಃ ಕೀರ್ತಿನಿರ್ಮಾಣ ತೀರ್ಥಕರತ್ವಮೆಂದಿಂತು ನಾಲ್ವತ್ತೆರಡು ಭೇದಮನುಳ್ಳ ನಾಮಮುಮಂ ಉಚ್ಚೈರ್ಗೋತ್ರ ನೀಚೈರ್ಗೋತ್ರಭೇದದಿಂ ದ್ವಿವಿಧಮಪ್ಪ ಗೋತ್ರಮುಮಂ ದಾನಲಾಭಭೋಗೋಪಭೋಗವೀರ್ಯಾಂತರಾಯಭೇದದಿನಯ್ದು ವಿಕಲ್ಪಮಪ್ಪಂತರಾಯಪ್ರಕೃತಿಯುಮಂ ಪ್ರಕೃತಿಸ್ಥಿತ್ಯನುಭಾಗಪ್ರದೇಶಮೆಂದು ಬಂಧಂ ಮಿಥ್ಯಾತ್ವಾಸಂಯಮ [ಪ್ರಮಾದ] ಕಷಾಯಯೋಗಮೆಂದು ಬಂಧಕಾರಣಮನಂತಜ್ಞಾನಮನಂತದರ್ಶನಮನಂತವೀರ್ಯಮನಂತಸುಖಮೆಂದು ಮೋಕ್ಷಂ ಸಮ್ಯಗ್ದರ್ಶನಜ್ಞಾನಚಾರಿತ್ರತಪಮೆಂದು ಮೋಕ್ಷಕಾರಣಮಿಂತು ಬಂಧಂ ಬಂಧಕಾರಣಂ

ಮೋಕ್ಷಂ ಮೋಕ್ಷಕಾರಣಮೆಂಬ ಪರಮಚತುಷ್ಟಯಮುಮಂ ಆರ್ತ ರೌದ್ರ ಧರ್ಮ ಶುಕ್ಲಾಭಿಧಾನಧ್ಯಾನಚತುಷ್ಟಯಮುಮಂ ಕಾಲಲಬ್ಧಿ ಕರಣಲಬ್ಧಿ ಉಪಶಮಲಬ್ಧಿ ಕ್ಷಯೋಪಶಮಲಬ್ಧಿ ಪ್ರಾಯೋಗ್ಯತಾಲಬ್ಧಿಯೆಂಬ ಲಬ್ಧಿಪಂಚಕಮುಮಂ ಸಮುಚ್ಛ ಯಾಕ್ಷೇಪವಚನದಿಂ ದ್ರವ್ಯೋತ್ಪತ್ತಿವ್ಯಯಾತ್ಮಕ ಸ್ವರೂಪದಿಂ ಸಂಶಯಾದಿ ನಿವೃತ್ತಿ ರತ್ರಾಹ ಸ್ವದ್ರವ್ಯಾದಿರೂಪೇಣಾಸ್ತಿ ಪರದ್ರವ್ಯಾದಿವಿರೂಪೇಣನಾಸ್ತಿ ಸ್ವಪರದ್ರವ್ಯಾದಿ ರೂಪೇಣಾಸ್ತಿನಾಸ್ತಿ ಸಹಾನುಕ್ತೇರವಾಚ್ಯಂ ಸ್ವದ್ರವ್ಯಾದಿ ಸಹಾನುಕ್ತೇರಸ್ಯವಾಚ್ಯಂ ಪರದ್ರವ್ಯಾದಿ ಸಹಾನುಕ್ತಿರ್ನಾಸ್ತ್ಯಪ್ರಮೇಯತ್ವಾಪ್ರಮೇಯತ್ವಾದಿ ಬಹುಭೇದವಿಭಿ ನ್ನದಿನೇಕಜೀವಾಪೇಕ್ಷೆ ನಾನಾಜೀವಾಪೇಕ್ಷೆಯಿಂ ಯೋಜಿಸಿ ನಾನಾಪ್ರಕಾರಹೇತು ದೃಷ್ಟಾಂತಂಗಳಿಂ ದ್ವಾದಶಾಂಗಚತುರ್ದಶಪೂರ್ವೋಕ್ತಕ್ರಮಮಂ ಪೂರ್ವೋಕ್ತಕ್ರಮ ದಿಂದಾ ಸುಧರ್ಮಾಚಾರ್ಯರಾ ಸೂರ್ಯಮಿತ್ರಮುನಿಗತಿವ್ಯಕ್ತಮುಮನತಿರಿಕ್ತ ಮುಮತಿಸ್ಫುಟಮುಮವ್ಯಾಕುಲಮುಮಪ್ಪಂತತಿಮೃದುಮಧುರಗಂಭೀರೋದಾರಸಾರ ತರವಚನರಚನೆಗಳಿಂ ವ್ಯಾಖ್ಯಾನಂಗೆಯ್ಯಲೆನಿತೆನಿತಂ ಕೇಳ್ಗುಮನಿತನಿತೆ ವಿಶುದ್ಧ ಪರಿಣಾಮಮನನಾಗಿ ಜಗತ್ಕಾಯಸ್ವಭಾವಂಗಳೊಳಾಸಂವೇಗವೈರಾಗ್ಯಪರಾಯಣ ನಾಗುತ್ತುಮನಿತ್ಯಾಶರಣಸಂಸಾರೈಕತ್ವಾನ್ಯತ್ವಾಶುಚಿತ್ವಾಸ್ರವಸಂವರನಿರ್ಜರಲೋಕ ಬೋಧಿದುರ್ಲಭಧರ್ಮಮೆಂಬೀ ದ್ವಾದಶಾನುಪ್ರೇಕ್ಷೆಗೆಯ್ಯುತ್ತುಂ ಭಗವದರ್ಹತ್ಪರ ಮೇಶ್ವರಸ್ವರೂಪಮುಮಂ ಗುಣಂಗಳುಮನಱಿದು ಮೂಱುಮೂಢದಿನಾಱಿನಾಯ ತನಸೇವೆಯಿನೆಂಟುಮದದಿನೆಂಟು ಮಳದಿನಿರ್ಪತ್ತಯ್ದು ಮಳದಿಂ ಪಿಂಗಿದ ನಿರ್ಮಳ ಮಪ್ಪ ಸಮ್ಯಕ್ತ್ವರತ್ನಮಂ ಕೈಕೊಂಡು



ಇದು ಜೀವಾಜೀವಭೇದಕ್ರಮಮಿದು ಸಕಷಾಯಾಕಷಾಯೋದಯಂ ತಾ।
ನಿದು ಧರ್ಮಾಧರ್ಮತತ್ತ್ವಾಗಮಮಿದು ನಿಖಿಲಧ್ಯಾನ ಸಜ್ಞಾನಮಿಂತೆಂ।
ಬುದನಾಗಳ್ ಸೂರ್ಯಮಿತ್ರಂ ಬಗೆದು ಬಗೆದಿದೇಂ ಕರ್ಮಮೋ ಘೋರಸಂಸಾ।
ರದುರಂತಾಭೀಳದಾವಾನಲನಳುರ್ವಿನಮಾನಿನ್ನೆಗಂ ಬರ್ದುತಿರ್ದೆಂ ॥ ೪೦ ॥

ಖಳಕರ್ಮೋದಯದಿಂದಮಿನ್ನೆವರೆಗಂ ಜನ್ಮಾಬ್ಧಿಯೊಳ್ಮುಳುಗುತುಂ।
ಮುೞುಗುತ್ತುಂ ನವೆಯುತ್ತುಮಿರ್ದ್ದ ಪಲಕಾಲಂ ಪೋದುದತ್ಯಂತ ನಿ।
ರ್ಮಳಸನ್ಮಾರ್ಗ ಬಹಿತ್ರಮಿಲ್ಲಿ ದೊರೆಕೊಂಡತ್ತೀಗಳೆನ್ನಂತು ಕೇ।
ವಲಪುಣ್ಯಾನ್ವಿತರಾರುಮಿಲ್ಲ ಮನುಜರ್ ವಿಶ್ವಾವನೀಭಾಗದೊಳ್ ॥ ೪೧ ॥

ಆನೆತ್ತಾ ಕೊಳನೆತ್ತಲುಂಗುರದ ಕೇಡೆತ್ತೀ ಮುನೀಂದ್ರೋತ್ತಮಂ ।
ತಾನೆತ್ತಿರ್ದೆಡೆವೇಟ್ಪುದೆತ್ತೆನಗೆ ವಿದ್ಯಾಕಾಂಕ್ಷೆಯೆತ್ತೊಂದಿದ ॥
ಜ್ಞಾನಪ್ರಾವೃತಮಾಯೆಯಿಂದೆ ತಪಮಂ ಕೈಕೊಳ್ವುದೆತ್ತೀಗಳ ।
ಜ್ಞಾನಂ ಪಿಂಗಿ ಸುತತ್ತ್ವಮಂ ತಿಳಿವುದೆತ್ತಾರಯ್ವೊಡೇಂ ಚಿತ್ರಮೋ ॥ ೪೨ ॥

ವೇದಾಂಗಂ ಸ್ಮೃತಿವೇದಮೆಂದಿನಿತುಮಂ ಪೂಣ್ದೋದಿದೆಂ ಸತ್ಕಲಾ ।
ಭೇದಂಗಳ್ ಪದಿನೆಂಟುಮಂ ತಿಳಿದೆನಾಪ್ತೋದ್ದೇಶದಿಂ ತರ್ಕದೊಳ್ ॥
ಬಾದುಂ ಬರ್ಕುಡಿಗುಟ್ಟೆ ಪೊಟ್ಟುವಡೆದೆಂ ದುರ್ವಾದದಿಂದಿನ್ನೆಗಂ ।
ಭೇದಂಬಟ್ಟಿರ್ದೆಗೆಟ್ಟು ಕೆಟ್ಟೆನಿನಿತುಂ ಕಾಲಂಗಳೇಂ ಕರ್ಮವೋ ॥ ೪೩ ॥

ನೆಗಟ್ದಿ ಜಿನತತ್ತ್ವಮಿರೆ ಬಗೆ ।
ಮಿಗುವಿನೆಗಂ ಪುಣ್ಣನೊಡಲೊಳುಳ್ಳಿನೆಗಂ ನಾ ॥
ಲಗೆಯುಂ ಪಲ್ಲುಂ ತ್ರುಟವ ।
ನ್ನೆಗಮೋದಿದೊಡಂ ಕುತತ್ತ್ವದೊಳ್ ಪುರುಳುಂಟೆ ॥ ೪೪ ॥

ವ॥ ಎಂದು ಮಿಥ್ಯಾಮತಮಪ್ಪ ಕುತತ್ತ್ವಮಂ ನಿರಾಕರಿಸಿ ವಿದ್ಯಾಮೋಹದಿಂದಂ ಸಂಧಿಸಿ ನಿಂದ ಮಾಯಾತಪಮಂ ಪತ್ತುವಿಟ್ಟುತ್ತಮಕ್ಷಮಾ ಮಾರ್ದವಾರ್ಜವ ಶೌಚ ಸತ್ಯ ಸಂಯಮ ತಪಸ್ತ್ಯಾಗಾಕಿಂಚನ್ಯ ಬ್ರಹ್ಮಚರ್ಯಾಭಿಧಾನ ದಶಕುಲಧರ್ಮನಿರ್ಮಳರೆನಿಸಿದ ಸುಧರ್ಮಾಚಾರ್ಯರ ಪಾದಪದ್ಮಮಂ ನಿಜೋತ್ತಂಸಂಗಳಂ ಮಾಡಿ ತದೀಯ ಪಾದಪದ್ಮಂಗಳಂ ಕರಪಲ್ಲವಂಗಳಿನೊತ್ತುತ್ತುಂ ಅಪಗತಮತಿಯಿಂ

ಕಪಟಪ್ರಾಪಂಚಜಾಳಾವೃತನೆನಧಿಕ ಮೋಹಾಂಧನೆಂ ಮಾಯ್ದಮಾಯಾ
ತಪದೊಳ್ ಮಿಥ್ಯಾಪ್ರಪಂಚಪ್ರಬಳನೆನಿಸಿ ಸಂದಿರ್ದೆನಾನಿನ್ನೆಗಂ ನಿ ।
ಸ್ತ್ರಪನೆಂದುಂ ಮಾರ್ಗಮಂ ಪೊರ್ದಿದೆನೆನಗೆ ಶರಣ್ ಧರ್ಮದಿಂದತ್ತ ಮತ್ತಿ ।
ಲ್ಲ ಪುನರ್ದೀಕ್ಷಾಪ್ರಸಾದಂ ಸದಮಳನಿಖಿಳಾನೂನ ಸಜ್ಞಾನಚಕ್ಷೂ ॥ ೪೫ ॥

ವ || ಎಂದುಂ ತನ್ನಂ ತಾನೇ ನಿಂದಿಸಿ ಗುರುಗಳಂ ಗುರುಭಕ್ತಿಪೂರ್ವಕಂ ಬಂದಿಸಿ ಪರಮದೀಕ್ಷೆಯಂ ಕೈಕೊಂಡು ಪರಮಾರ್ಥನಿಷ್ಠಿತಾರ್ಥ ತಪೋರೂಪಮಂ ತಾಳ್ದಿ

ನಿಯತಂ ಪಂಚಮಹಾಬ್ರತಂ ಸಮಿತಿಯೆಂಬಯ್ದುಂ ಷಡಾವಶ್ಯಕ।
ಕ್ರಿಯೆ ಪಂಚೇಂದ್ರಿಯನಿಗ್ರಹಕ್ರಿಯೆ ಸಮಂತೊಳ್ಪೊತ್ತು ನಿಂದುಣ್ಬುದಾ।
ರಯಮಸ್ನಾನಮಚೇಳಸಂಯಮಮದಂತೋನ್ಮಾರ್ಜನಂ ಧಾರಿಣೀ।
ಶಯನಂ ರೋಜೆನಿಸಿರ್ದ ಮೂಲಗುಣಮಿಪ್ಪತ್ತೆಂಟುಮಂ ತಾಳ್ದಿದಂ || ೪೬ ||

ವ || ಮತ್ತಂ ತ್ರಿದಂಡ ತ್ರಿಶಲ್ಯ ತ್ರಿಗಾರವಂಗಳಂ ಕ್ರಮಕ್ರಮದಿಂ ಕಲಿಲ್ಚಿ ಕಳೆಯುತ್ತುಂ ಕ್ಷುತ್ಪಿಪಾಸಾಶೀತೋಷ್ಣದಂಶಮಶಕನಾಗ್ನ್ಯರತಿ ಸ್ತ್ರೀಚರ್ಯಾನಿಷದ್ಯಾ ಶಯ್ಯಾಕ್ರೋಶವಧಯಾಚನಾಲಾಭರೋಗ ತೃಣಸ್ಪರ್ಶಮಳಸತ್ಕಾರಪುರಸ್ಕಾರ ಪ್ರಜ್ಞಾ ಜ್ಞಾನಾದರ್ಶನಮೆಂಬ ದ್ವಾವಿಂಶತಿ ಪರೀಷಹಮುಮಂ ತನ್ನಂ ಮಿಗಲೀಯದೆ ತಳೆದು ದೇವರೊಳಂ ಗುರುಗಳೊಳಮಾಗಮದೊಳಂ ನಂಬುಗೆಯುಂ ನಲ್ಮೆಯುಂ ಭಕ್ತಿಯು ಮನೂನಮಾಗೆ ಘೋರವೀರತಪೋನಿಯಮ ನಿಷ್ಠಿತನಾಗಿ ಗುರುಗಳನಗಲದೆ ಕೆಲವು ದಿವ [ಸ] ಮಿರೆಯಿರೆ

ಮಾನಿತ ತತ್ವಾರ್ಥಶ್ರ।
ದ್ಧಾನದಿನಾ ಸೂರ್ಯಮಿತ್ರಮುನಿಪತಿಗವಧಿ ||
ಜ್ಞಾನಂ ತೊಟ್ಟನೆ ಪುಟ್ಟಿದು।
ದೇನಂ ಪುಟ್ಟಿಸದು ತತ್ವರುಚಿ ಪುಟ್ಟಲೊಡಂ || ೪೭ ||

ವ || ಆ ಪ್ರಸ್ತಾವದೊಳ್

ಬುಧಸಂಘಾತಾರ್ಚಿತಾಂಘ್ರಿದ್ವಯ ಸರಸಿರುಹಂಗಪ್ರಮತ್ತಂಗೆ ಬೋಧಾಂ।
ಬುಧಿಗಂತಾ ಸೂರ್ಯಮಿತ್ರಬ್ರತಿಪತಿಗವಧಿಜ್ಞಾನಮೊಪ್ಪಿರ್ದುದಂ ಕಂ

ಡು ಧರಿತ್ರೀಸ್ತುತ್ಯನತ್ಯುಜ್ವಲನಿರುಪಮದೇಹಪ್ರಭಾದಿವ್ಯಸರ್ವಾ ।
ವಧಿಬೋಧಂ ತುಷ್ಟನಾದಂ ಪರಮಜಿನಮತಾಂಭೋಜಿನೀರಾಜಹಂಸಂ ॥ ೪೮ ॥

ಇದು ಸಮಸ್ತ ವಿನಯಜನವಿನಮಿತ ಶ್ರೀವರ್ಧಮಾನಮುನೀಂದ್ರ
ವಂದ್ಯಪರಮಜಿನೇಂದ್ರ ಶ್ರೀಪಾದಪದ್ಮವರಪ್ರಸಾದೋತ್ಪನ್ನ
ಸಹಜಕವೀಶ್ವರ ಶ್ರೀಶಾಂತಿನಾಥಪ್ರಣೀತಮಪ್ಪ
ಸುಕುಮಾರ ಚರಿತ್ರದೊಳ್ ಸೂರ್ಯಮಿತ್ರಾ
ಚಾರ್ಯಾವಧಿಜ್ಞಾನವರ್ಣ್ಣನಂ
ತೃತೀಯಾಶ್ವಾಸಂ

---

## ೪. ಚತುರ್ಥಾಶ್ವಾಸಂ ||

ಶ್ರೀಮತ್ಸುಧರ್ಮಮುನಿಪ |
ಸ್ವಾಮಿ ಮಹಾಗಾಧಬೋಧಬೋಧಿತಭವ್ಯ ||
ಸ್ತೋಮಂ ದರಹಸಿತದಿನಂ |
ದಾ ಮುನಿಗೆಂದಂ ಸರಸ್ವತೀಮುಖಮುಕುರಂ ||೧||

ಇದು ಮುನ್ನಂ ನಿನ್ನ ಕೆಟ್ಟುಂಗುರದೆಡೆಯನದಂ ಪೇಳ್ದ ಸದ್ವಿದ್ಯೆ ತಾನಿಂ |
ತಿದು ಮುನ್ನಂ ನಿನ್ನನೆನ್ನಲ್ಲಿಗೆ ಬರಿಸಿದ ದಿವ್ಯೋಪದೇಶಂ ಸಮಂ |
ತಿದು ಮುನ್ನಂ ನಿನ್ನ ತತ್ತ್ವಕ್ಕೆಳಸಿದ ಹಿತಮಂ ಮಾಡಿದಾ ಜೋಯಿಸಂ ಬಂ |
ದುದು ಕೈಕೊಳ್ ನಿನ್ನ ಚಿತ್ತಂ ಬಯಸುವ ವಿಲಸನ್ಮೂತ್ನಸಜ್ಞಾನರತ್ನಂ ||೨||

ವ || ಎಂಬುದುಮಿಾ ದಯೆಗೆ ಮಹಾಪ್ರಸಾದಮೆಂದು ಅಭಿವಂದನಂ ಗೆಯ್ದು ತದೀಯ ಗುರುಪಾದಪದ್ಮಪಾದಚ್ಛಾಯಾಸನ್ನವರ್ತಿಗಳಾಗಿರ್ದು ಬೀೞ್ಕೊಂಡು ನಾನಾಜನಪದಂಗಳಂ ಯಥಾಕ್ರಮೋಕ್ತಕ್ರಮದಿಂ ವಿಹಾರಿಸುತ್ತಂ ಕತಿಪಯ ಸಂವತ್ಸರಂಗಳಂ ಕಳೆವುದುಮೊಂದು ದಿವಸಂ ಸುಧರ್ಮಾಚಾರ್ಯರುಜ್ಜಯಂತಪರ್ವತದೊಳ ಧ್ಯಾತೃಧ್ಯಾನಾಧೀನಮಾನಸರಾಗಿ ಘಾತಿ ಕರ್ಮಂಗಳಂ ಘಾತಿಸಿ ಕೇವಲವಿಭೂತಿಯಂ ಪಡೆದು

ಕುಪಿತಬಹುಬಂಧಮಂ ಪಱಿ |
ದು ಪಾಯ್ದು ಮುನಿಕುಂಜರಂ ತದೇಕಾಂತದಿನಿಂ ||
ತಪವರ್ಗ ಮಾರ್ಗದೊಳ್ ನಡೆ |
ದು ಪರಮಸುಖಮೆಂಬ ವನಮನೆಯ್ದಿದನಾಗಳ್ ||೩||

ವ || ಇತ್ತಲಾ ಮುನೀಂದ್ರನೇಕ ವಿಹಾರತ್ವದಿನನಶನಾದಿ ದ್ವಾದಶವಿಧ ತಪೋ
ನುಷ್ಠಾನನಿಷ್ಠಿತನಾಗಿ

ಉಪವಾಸಪ್ರಚುರತೆಯಿಂ ।
ವಪು ಗಿಡಿಗಿಡಿಜಂತ್ರಮಾದುದೆಂಬನ್ನೆವರಂ ||
ಕ್ಷಪಿಯಿಸಿ ಮುನೀಂದ್ರನನಶನ ।
ತಪದೊಳ್ ತಱಿಸಂದ ಸಲವದೊಂದಾಶ್ಚರ್ಯಂ || ೪ ||

ಪಾರಣೆಯ ದಿನಂಗಳೊಳವ ।
ಧಾರಿಸಿ ಜಠರಾಗ್ನಿನಂದದಂದದಿನರ್ಧಾ ||
ಹಾರಮನಾರೋಗಿಸುವಾ ।
ಚಾರದಿನಳವಟ್ಟುದವರೊಳವಮೋದರ್ಯಂ || ೫ ||

ಆನಿನಿತು ಭೋಜ್ಯದಿಂ ಪೆಱ ।
ತೇನುಮನುಣವೊಲ್ಲೆನೆಂದೆನೆಂದುಣ್ಬೆಡೆಯೊಳ್ ||
ತಾನಱಿದು ವೃತ್ತಿಪರಿಸಂ ।
ಖ್ಯಾನತಪೋಯುಕ್ತನಾಗಿ ಸಂಯಮಿ ನೆಗೞ್ದಂ || ೬ ||

ಪರಿಹರಿಸಿದೆ ನಾಂ ವೃಷ್ಯೇ ।
ಷ್ಟರಸಂಗಳನೆಂದು ನಿರ್ಮಳಾಚಾರಪುರ ||
ಸ್ಸರಮಾ ಮುನೀಂದ್ರನಾರ್ತೆಸ ।
ಗಿ ರಸಪರಿತ್ಯಾಗಮೆಂಬ ತಪಮಂ ತಳೆದಂ || ೭ ||

ವನಿತಾ ಪಶು ಪಂಡಕವ ।
ರ್ಜ್ಯನಿವಾಸೋದ್ದೇಶದೆಡೆಗಳೊಳ್ ಚರಿಯಿಸುತುಂ ||
ಮುನಿಪತಿ ವಿವಿಕ್ತಶಯ್ಯಾ ।
ಸನಮೆಂಬಯ್ದನೆಯ ತಪದೊಳುಪಗತನಾದೊಂ || ೮ ||

ವ ॥ ತದನಂತರಂ ಕಾಯಕ್ಲೇಶಮೆಂಬಾಱನೆಯ ತಪಮನೆತ್ತಿಕೊಂಡು

ಮುೞಿ ಭೋರ್ಭೋರ್ರೆಂದಹೋರಾತ್ರಮುಮುಡುಗದೆ ಕೊಳ್ವಲ್ಲಿ ಪೋಟಿಲ್ಗಳಿಂದ
ವ್ವಳಿಸುತ್ತುಂ ಬಂದು ಪೆರ್ವಾವುಗಳುಗಿಬಗಿಮಾೞ್ಪಲ್ಲಿ ಮೆಯ್ಯಂ ಜಳೂಕಾ ।
ವಳಿಗಳ್ ಪೀರ್ವಲ್ಲಿ ಮರ್ವುರ್ವಿಸೆ ಸಿಡಿದು ಸಿಡಿಲ್ ಬಂದು ಪೊಯ್ವಲ್ಲಿ ಹೈಮಾ ।
ಚಳಮಿರ್ಪ್ಪಂತಾಗಳಿರ್ದ [ಂ] ಮರಮೊದಲೊಳಭೀತಾತ್ಮಕಂ ಯೋಗಿನಾಥಂ ॥ ೯॥

ಅಳ್ಕದೆ ಬೆಚ್ಚದೆ ಬೆದಱದೆ ।
ಬೆಳ್ಕುತ್ತಡಹಡಿಸಿ ಕುಸಿದು ಕುಂದಿರದೆ ಕೊರ ॥
ಲ್ಮುೞಿಕ್ಕಿ ಪರಿವುದಕದೊಳ್ಮನ ।
ಮುಟ್ಕಿದೆಯೆರ್ಜಂಬರಂ (?) ದಿಗಂಬರನಿರ್ದಂ ॥ ೧೦ ॥

ಇನನಿಂದುಜ್ಯೋತ್ಸ್ನೆಯಂ ತಾಳ್ದಿದನನಲನನವಷ್ಟಂಭನೋಡಿತ್ತು ಮರ್ತ್ಯಾಂಗ
ನಿಕಾಯಂ ಬಿಬ್ಬಿನಂ ಬೆಕ್ಕನೆ ಬಿರಿದಪುದೇಗೆಯ್ವಮಿಾ ಲೋಕಮುಂ ಹೈ ।
ಮನಗಂ ಕೈಕೊಂಡುದೆಂಬನ್ನೆಗಮೊದವಿದವಶ್ಯಾಯದೊಳ್ ನಿಂದನೇಕಾಂ ।
ತನಿವಾಸಂ ಬೆಳ್ಳವಾಸಂ ನಿಶೆಯೊಳೆಸೆಯೆ ನಿರ್ವಾಣದೊಳ್ ಯೋಗಿನಾಥಂ. ॥ ೧೧ ॥

ಕೈಕಾಲ್ ಸುರುಳ್ದು ನಡುಗದೆ ।
ಸೈಕಾಗ್ರಮನಸ್ಕನಾಗಿ ಭರವಸದಿಂ ಬ॥
ಪ್ಪಯ್ಸಿಲ್ಗಳ್ಕದೆ ಪಲ್ಯಂ ।
ಕೈಕಾಸನದಿರ್ಪ್ಪ ಸಾಹಸಂ ಪೆಱರ್ಗುಂಟೇ ॥ ೧೨ ॥

ನದ[ನ]ದ್ಯುದ್ಭೂತವಾರಿಪ್ರಸರಮೆಸ[ರ]ನೀರಂದದಿಂ ಕಾಯ್ದುದಾಕಾ ।
ಶದಿಶೌಘಂ ತೀವ್ರದಾವಾಗ್ನಿವೊಲುರಿದಪುದುರ್ಬೀತಳಂ ಕಾಯ್ದಲೋಹ ।
ಕ್ಕಿದು ಮೇಲೆಂಬಂದಮಾದತ್ತಹಿಮಕಿರಣಸಂತಾಪದಿಂದೆಂಬ ವೈಶಾ ।
ಖದೊಳಾ ಯೋಗೀಶ್ವರಂ ಕಲ್ಮೆಲೆ ನೆಲಸಿ ಹಿಮಾದ್ರೀಂದ್ರಮಿರ್ಪಂತಿರಿರ್ದಂ ॥೧೩॥

ಶಿರಮುನಿನರಶ್ಮಿ ಪದತಳ।
ಸರೋಜಮಂ ತಪನತಪ್ತ ಶಿಖರಾಗ್ನಿ ತನೂ॥
ದರಮಂ ಕ್ಷುಧಾನಳಂ ಸುಡೆ।
ಕರಿಂ[ಕು]ವರಿದಗಮುನಘವಿಘಾತಂ ಪೋಲ್ತಂ ॥ ೧೪ ॥

ವ॥ ಅಂತು ಬಾಹ್ಯತಪದೊಳಸಹ್ಯಮಾನ ಸಾಹಸನಾಗಿ ಮತ್ತಮುತ್ತರ ತಪದೊಳುತ್ತರೋತ್ತರಂ ನೆಗಱ್ದು

ಪರಮಾಳೋಚನದೊಳ್ ಪ್ರತಿಕ್ರಮಣದೊಳ್ ತದ್ದ್ವಿವಿನೇಕತ್ವದೊಳ್।
ಪರಿಹಾರಕ್ರಿಯೆಯೊಳ್ ವಿನಿರ್ಮಳತಪಸ್ಯೋಪಸ್ಥಾಪನದ್ವಂದ್ವದೊಳ್।
ನಿರುತಂ ಛೇದವಿಕಲ್ಪದೊಳ್ ನಿಬಿಡ ಕಾಯೋತ್ಸರ್ಗದೊಳ್ ಶುದ್ಧಿ ತ।
ಳ್ತಿರೆ ದೋಷಪ್ರತಿಕಾರ ಸಾರತಪಮಂ ತತ್ತಾಪಸಂ ತಾಳ್ದಿದಂ ॥ ೧೫ ॥

ಸುಚರಿತದರ್ಶನಬೋಧೋ।
ಪಚಾರಮೆಂಬಿವಱೊಳುಚಿತವಿನಯದಿನಾದಂ॥
ರಚಿಯಿಸಿ ವಿನಯಸಮನ್ವಿತ।
ನಚಾಲ್ಯಮನನಖಿಳವಿನಯಮಂ ಪ್ರಕಟಿಸಿದಂ ॥ ೧೬ ॥

ಗುರುಶೈಕ್ಷ್ಯಗ್ಲಾನ ಸಂಘಪ್ರವಣಗಣತಪೋನಿಷ್ಠಿತಾನೀತಸಾಧೂ।
ತ್ಕರದೊಳ್ ಮತ್ತಂ ಮನೋಜ್ಞಪ್ರತತಿಕುಳದೊಳಾದೊಂದವಸ್ಥಾವಿಚಿಂತಾಂ।
ತರದೊಳ್ ಕೈಕೊಂಡು ಪರ್ಯುಷ್ಟಿಯನನವರತಂ ಮಾಳ್ಪ ಶೀಳೋತ್ಕರಂ ಕೂ।
ಡಿರೆ ವೈಯ್ಯಾಪೃತ್ಯಮೆಂಬೀ ತಪದೊಳೆಸಗಿದಂ ಸೂರ್ಯಮಿತ್ರಬ್ರತೀಂದ್ರಂ ॥ ೧೭ ॥

ಮುನಿಪತಿ ವಾಚನೆಯಿಂ ಪೃ।
ಚ್ಛನೆಯಿನನುಪ್ರೇಕ್ಷೆಯಿಂ ತದಾಮ್ನಾಯದಿನೊ॥
ಯ್ಯನೆ ಧರ್ಮಕಥನದಿಂದಂ।
ವಿನುತಸ್ವಾಧ್ಯಾಯಮೆಂಬ ತಪಮಂ ತಳೆದಂ ॥ ೧೮ ॥

ದೊರೆಯಲ್ಲದ ಬಾಹ್ಯಾಭ್ಯಂ ।
ತರೋಪಧಿಯನುೞಿದನಾರತಂ ವ್ಯುತ್ಸರ್ಗೋ ॥
ತ್ತರತಪದೊಳತಿವಿಶುದ್ಧಾಂ ।
ತರಂಗನೆನಿಸಿದನಮಾನುಷಂ ಮುನಿತಿಲಕಂ ॥ ೧೯ ॥

ಖಳರೌದ್ರಾರ್ತಧ್ಯಾನಂ ।
ಗಳೆಂಬೆರಡುಮಂ ಬಿಸುಟು ಧರ್ಮಶುಕ್ಲಧ್ಯಾನಂ ॥
ಗಳೊಳಾಜ್ಞಾಪಾಯವಿಪಾ ।
ಕಲೋಕ ವಿಚಯಮನನಾಕುಲಂ ಮುನಿ ತಳೆದಂ ॥ ೨೦ ॥

ವ॥ ಇಂತಭ್ಯಂತರತಪದೊಳಂತರಂಗಸಂಶುದ್ಧನಾಗಿ ಸಮಾಚರಿಸಿ ಜಿನಕಲ್ಪಿತಾಚರಣಮಾರ್ಗದಿಂ ಗ್ರಾಮನಗರಖೇಡಖರ್ವಡಮಡಂಬಪಟ್ಟಣದ್ರೋಣಾಮುಖಸಂವಾಹಗಳೊಳ್ ವಿಹಾರಿಸುತ್ತುಂ ವಿಹರಣಕ್ರಮದಿಂ ವತ್ಸವಿಷಯದ ಕೌಶಂಬೀನಗರಕ್ಕೆ ವಂದದಱ ಪೂರ್ವೋತ್ತರದ ದಿಶಾಭಿರಾಮಮಪ್ಪುದಯವಾತಪರ್ವತದ ಸಿದ್ಧಕ್ಷೇತ್ರಂಗಳುಮಂ ಚೈತ್ಯನಿಕೇತನಂಗಳುಮಂ ತ್ರಿಃಪ್ರದಕ್ಷಿಣಂಗೆಯ್ದು

ಪರಮಮುನೀಶ್ವರನರ್ಹ ।
ತ್ಪರಮೇಶ್ವರಚರಣಕಮಲಯುಗಳಕ್ಕತಿ ನಿ ॥
ರ್ಭರ ಭಕ್ತಿಭರದಿನತ್ಯಾ ।
ದರದಿಂ ಪರಿಣಾಮಶುದ್ಧಿಯಿಂ ವಂದಿಸಿದಂ ॥ ೨೧ ॥

ವ ॥ ಅಂತಲ್ಲಿಯ ಚೈತ್ಯಾಲಯಂಗಳಂ ವಂದಿಸಿ ತದ್ವಾಸರದೊಳ್ ತೀರ್ಥೋಪವಾಸಂಗೆಯ್ದು ಪಾರಣಾದಿನದೊಳ್ ಚರ್ಯಾಮಾರ್ಗದಿಂ ಕೌಶಂಬೀನಗರಾಭಿಮುಖಂ ಸತ್ವಗುಣಾಧಿಕಕ್ಲಿಶ್ಯಮಾನಾವಿನಯರೊಳ್ ಮೈತ್ರೀಪ್ರಮೋದಕಾರುಣ್ಯಮಾಧ್ಯಸ್ಥವೃತ್ತಿಯುಂ ಭಾವಿಸುತ್ತುಮತಿವಿಳಂಬಿತಗತಿವ್ಯಪೇತನುಂ ಯುಗಪ್ರಮಾಣಮೇದಿನೀತಳ ನಿರೀಕ್ಷಣನುಮಾಗಿ ಪುಗುಲ್ತಕ್ಕ ಮನೆಗಳೊಳ್ ಚಂದ್ರಗತಿಯಿಂ ಚರಿಗೆವುಗುತ್ತುಂ ಕಾಶ್ಯಪಿತನೂಜನಪ್ಪಗ್ನಿಭೂತಿಯ ಮನೆಯಂ ಭೂಮಿದೇವಾವಾ

ವಾಸಮುಪ್ಪುದಱಿಂ ಪುಗುವುದುಮಾಗಳವರ ಬರವನಾ ವಿಪ್ರವರಂ ಕಂಡು ಸೂರ್ಯಮಿತ್ರೋಪಾಧ್ಯಾಯರಪ್ಪರೇನುಂ ತಪ್ಪಿಲ್ಲೆಂದು ಪಿರಿದುಮನುರಾಗದಿಂ ರಾಗಿಸಿ ಪರಿತಂದು

ಇದಿರ್ಗೊಂಡುದ್ದದೊಳೇಱಲಿಕ್ಕಿ ಚರಣಪ್ರಕ್ಷಾಳನಂಗೆಯ್ದು ಸ।
ನ್ಮುದದಿಂದರ್ಚಿಸಿ ಭಕ್ತಿಯಿಂದೆ ಪೊಡೆವಟ್ಟಾಗಳ್ ಮನಶ್ಶುದ್ಧಿಯಿಂ।
ಮೃದುವಾಕ್ ಶುದ್ಧಿಯಿನನ್ನ ಶುದ್ಧಿಯಿನೊಱಿಲ್ದಾಹಾರಮಂ ಶುದ್ಧಮು।
ಪ್ಪುದನಾತಂ ನವಪುಣ್ಯಮೊಂದಿರೆ ಮಹಾಪುಣ್ಯಾಸ್ಪದಂಗಿಕ್ಕಿದಂ ॥ ೨೨ ॥

ಪುದಿದ[1][ಲ್ತಿ][1]ಭಕ್ತಿದಯೆಯಿಂ।
ದುದಾತ್ತಶೀಲಂ ಕ್ಷಮಾಗುಣಂ ಶೌಚಮೆನಿ॥
ಪ್ಪುದಿತೋದಿತಮೇೞಱೊ।
ಳುದಾತ್ತಮತಿ ಕೂಡಿ ಮುನಿಗೆ ದಾನಮನಿತ್ತಂ ॥ ೨೩ ॥

ವ ॥ ಅಗಳಾ ಪರಮಮುನೀಶ್ವರಂ ಕಾಯಸ್ಥಿತಿಯಂ ನಿರ್ವರ್ತಿಸಿ ಪೋಪಾಗಳಗ್ನಿಭೂತಿ ಮನದೆಱಕದಿನೆಱಗಿ ಪೊಡೆವಟ್ಟು ನಿಮ್ಮ ಪ್ರಸಾದದಿನೆಮಗಿನಿತು ಮಹಾವಿಭೂತಿಯುಂ ಖ್ಯಾತಿಯುಮಾಯ್ತು ನಿಮ್ಮ ಕಿಱಿಯ ಗುಡ್ಡಂ ವಾಯುಭೂತಿಯಾಯಿರ್ದನೆ ಪರಸಿ ಪೋಪಿರ್ ಬಿಜಯಂಗೆಯ್ಯಿಮೆಂದು ನಿಜಾನುಜನ ಮನೆಗೊಡಗೊಂಡು ಬರ್ಪುದುಮಾತನುಮವರಂ ಕಾಣಲೊಡನಱಿದುಮವಿನಯ ಸ್ವಭಾವದಿನುಱದೆ ನಿಜಸಭಾಭ್ಯಂತರಲೋಹಾಸನಾರೂಢಂ ಗರ್ವಪರ್ವತಾರೂಢನಾಗಿ

ಅಸಹಿಷ್ಣು ದೆಸೆಗೆ ಬೆಬ್ಬೆಸೆ।
ವೆಸೆ [2][ದಿ][2]ರ್ದೆಡೆಯಿಂದಮೇೞಲೆಸಗದವಷ್ಟಂ।
ಭಿಸಿ ವಿಪ್ರಸಭೆಗೆ ವಕ್ಕಾ!
ಣಿಸುತ್ತುಮುದ್ಗ್ರೀವನವರನವಮಾನಿಸಿದಂ ॥ ೨೪ ॥

---

1 ಥಿ (ಕ) 2 ಯಿ

ವ ॥ ನಿಜಾಗ್ರಜಂಗೆ ಮೊದಲಾಗಿಯುಮೇಱಲಿಕ್ಕದೆಯುಮಾದರಿಸದೆಯುಂ ಮೊಗಂ ಮೇಲೆತ್ತಿಕೊಂಡಿರ್ಪುದುಮಗ್ನಿಭೂತಿ ತನ್ನ ತಮ್ಮನುಱಿದಿರ್ದುದನಱಿದು ಕರಮೆ ಸಿಗ್ಗಾಗಿ ಮುಂದೆ ನಿಂದಿರ್ದು

ಜನನಿಯೊಡವುಟ್ಟಿದಂ ಮಾ ।
ವನುಪಾಧ್ಯಾಯಂ ಮುನೀಶ್ವರಂ ದಯೆಯಿಂ ನಿ ।
ನ್ನನೆ ಪರಸಲ್ಬಿಜಯಂಗೆಯೆ ।
ನೀನುದಾಸೀನನಾಗಿ ಕಡೆಗಣಿಸುವುದೇ ॥ ೨೫ ॥

ವ॥ ಎಂಬುದುಂ ವಾಯುಭೂತಿ ಸೂರ್ಯಮಿತ್ರ ಭಟ್ಟಾರಕರ ಮೊಗಮಂ ನೋಡಿ

ಮನೆಯೊ [1]ಳ್ಮ[1]ಯ್ಮಗೆ[2] ಬಾತುಕೊಂಡು ಸಿರಿಯೊಳ್ಕಣ್ಗಾದೊ [2]ಡ್ಡ[2]ಯ್ಸುವಂ ।
ದಿನ ನೀಮಾರ್ಗೆಲೆ ನಿಮ್ಮನಾವಱಿಯೆಮೆಂದೆಮ್ಮಂ ತೊಡಂಕಿಕ್ಕುವಂ ।
ದಿನ ಭಿಕ್ಷಾನ್ನಮನಿಕ್ಕುವಲ್ಲಿ ಸತಿಯುಂ ಬೇಡೆಂದು ಕಣ್ಣೈತ್ತುವಂ ।
ದಿನ ಸೊರ್ಕ್ಕಕ್ಕಟ ಮುಕ್ಕುವೋಗಿ ಕಡೆಯೊಳ್ ಭೈಕ್ಷಕ್ಕೆ ಪಕ್ಕಾದಿರೇ ॥ ೨೬ ॥

ಎಮಗಾವುದು ತೀರದ ವ
ಸ್ತು ಮಾವನಿಂದೆಂದು ನಚ್ಚಿ ಬಂದೊಡೆ ನೀನ ।
ಶ್ರಮುದೊ[3][ಡ್ಡಿ][3]ದ ಗೊಡ್ಡಮ ।
ನೆಮ್ಮಲಿ [4]ನಲಿದಾಡಿ[4] ಕಾಡಿದುದನದನಱಿವೋ ॥ ೨೭ ॥

ವ ॥ ಅಂತುಮಲ್ಲದೆಯುಂ

ನೀಂ ಬೇವಾದೊಡೆ ನಿನ್ನ ಕು ।
ಟುಂಬಿನಿಯುಂ ಕಯ್ಪು ಸೊರೆಯು ಕುಡಿಯೇಂ ಮಿಡಿಯೇ ।
ನೆಂಬಂತೆ [5]ದರಸಿ[5] ಯಾದಳಿ ।
ದೇಂ ಬಳ್ವಳಬಳೆದ ಬಂಧುತನಮಿನಿ[6]ದಾ[6]ಯ್ತೋ ॥ ೨೮ ॥

1 ಳ್ಕ (ಗ) 2 ಟ್ಟ (ಗ) 3 ಡ (ಕ) 4 ಲೀಹಾಡಿ (ಗ) 5 ಧರಿಸೀ (ಗ) 6 ತಾ (ಗ)

ವ || ಎಂದು ಬಾಯ್ಗೆವಂದಂದದೊಳಾ ದುರಾತ್ಮನಾ ಮಹಾತ್ಮನನಪ್ರ
ತ್ಯಾಖ್ಯಾನಕ್ರೋಧಕಷಾಯೋದಯಮಾನಗರ್ವದಿನವಮಾನಿಸಿ ತಿರಸ್ಕರಿಸಿಯುಮಗ್ನಿ
ಭೂತಿಯನುಭೂತಂ ಮಾಡಿ

ನಮಗೀ ಸಂಯಮಿ ಮಾವನೋದಿಸಿದುಪಾಧ್ಯಾಯಂ ಗುಣಾಧೀಯನು
ತ್ತಮನುರ್ಬೀಸುತನೆಂದು ಬಣ್ಣಿಸಿ ಕರಂ ಕಯ್ಕೊಂಡು ನೀಂ ಪೇೞವೇ |
ಬ್ಬಿಮೆ ನಾಮಿಾತನ ಕೈಯ್ಯೊಳಂದು ಪರಿಭಂಬಟ್ಟಂದು ಮುಂ ಭಿಕ್ಷುಕ |
ಕ್ರಮದಿಂದೇಳಿದರಾಗಿ ಬಾರದ ಭವಂ ಬಂದಂದವೇಂ ಪೇೞದೇ || ೨೯ ||

ತಿರಿದುಂಡು ಕಚ್ಚುಟಮನು |
ಟ್ಟು ರಜ್ಜೆಯೊಳ್ಪಟ್ಟುಮುಟ್ಟುಗೆಟ್ಟುಬ್ಬೆಗಮು ||
ಬ್ಬರಿಸಿ ನಮೆದುದನದಂ ಮಱೆ |
ದಿರೆ ಮಾವಂ ದೇವನಾದೊನೇ ನಮಗೀಗಳ್ || ೩೦ ||

ನೀರುಂ ನೇಣುಮನಾವಗಂ ತೊಱೆದುದಂ ಮೇಣ್ಕಾಣೆಯೋ ಬ್ರಾಹ್ಮಣಾ |
ಚಾರಪ್ರಕ್ರಿಯೆಯಿಲ್ಲದಿರ್ದಿರವನೇನಾರಯ್ಯೆಯೋ ಕೆಂಡುಗಂ
ಡಾರುಂ ನಾಣ್ಚುವ ಮಾರ್ಗದೊಳ್ ನಡೆಯುತುಂ ನಾಣ್ಗೆಟ್ಟದಂ ನೋಡೆಯೋ |
ಪಾರಿಬ್ರಾಜಕಮೆಂದಭಿಷ್ಟುತಿ ಗೆಯಲ್ ನಿನ್ನೋಲ್ಗುಣಂ ಮಾಸದೇ || ೩೧ ||

ಪಡೆಯಲ್ ಬಾರದ ಕುಲಮಂ |
ಪಡೆದು ಬೞಿಕ್ಕದನೆ ನೀರೊಳರ್ದಿದೆ ನೀನುಂ ||
ಪಡೆವೈ ಪ್ರಾಯಶ್ಚಿತ್ತಮ |
ನೆಡಂಬಡಿವರಿಂದಮಿಂದು ನಿನಗಾದುದಱಿಂ || ೩೨ ||

ವ|| ಅದಲ್ಲದೆಯುಂ

ಸವಣನನಾದರಿಪುದು ಕರ ।
ಮವಿರುದ್ಧಂ ಕಟ್ತ್ರಿಯಾಗಿ ನಾಯಾಗಿ ಬಟಿ ॥
ಕ್ಕ ವರಾಹನಾಗಿ ಚಾಂಡಾ ।
ಲವಂಶದೊಳ್ ಪುಟ್ಟುವುಜ್ಜುಗಂ ನಿಮಗಾಯ್ತೇ ॥ ೩೩ ॥

ವ ॥ ಎಂದು ನುಡಿವುದುಮಾ ಪಾಪಾಶ್ರಯಪರಿಣಾಮಪರಿಣತಿಯಿಂ ತನಗಾ ಕಷ್ಟಯೋನಿಚತುಷ್ಟಯದೊಳಾಯುಷ್ಯಂ ಕಟ್ಟುವುದುಮಾ ಪ್ರಸ್ತಾವದೊಳಾ ಮಹಾಮುನೀಶ್ವರನುತ್ತಮಕ್ಷಮಾಸ್ವರೂಪಮೆ ರೂಪುಗೊಂಡಂತೆ ಪರಮೋಪಶಮಚಿತ್ತನಾಗಿ

ಗಾಹೆ ॥ ಣಿಂದಂತಂ ಸಿಳಹಂತಂ ಸತ್ತುಂ ಮಿತ್ತುಂ ತಹೇವ ಸುಹದುಖ್ಖಂ
ಜೋಸಮಭಾವಇ ಪೆಚ್ಛಇ ಸೋಸಮಣೋ ಸೋಯ ಪಚ್ಛಇಯೊ ॥ ೩೪ ॥

ಕ್ಷಮೆಯ ಮೊದಲ್ ಸಮತೆಯ ಬಿ ।
ತ್ತು ಮೊದಲ್ ಸೈರಣೆಯ ಮೊತ್ತಮೊದಲೆನೆ ನೆಗಟ್ದಿ ॥
ರ್ದ ಮನುಷ್ಯನಾವನಾತನೆ ।
ಸಮಾನನಾತನೆ ಮುನೀಂದ್ರನಾತನೆ ದೇವಂ ॥ ೩೫ ॥

ಪಗೆಯಾವುದು ಕೆಳೆಯಾವುದು ।
ಬಗೆವೊಡೆ ಭಾವಿಸುವೊಡೆಂದು ನೋಡುವೊಡೆಂದುಂ ।
ಪಗೆ ಕರ್ಮಮೆ ಕೆಳೆ ಧರ್ಮಮೆ ।
ಜಗದೊಳ್ಮುನಿಪತಿಗೆ ಪರಮಜಿನಪತಿಮತದಿಂ ॥ ೩೬ ॥

ಮುನಿವರರುಂ ಕೂರ್ಪವರುಂ
ಮುನಿಸುಂ ಕೂರ್ಮೆಯುಮನುಂಟುಮಾಡುವ ಪದದೊಳ್
ಮುನಿಯದ ಕೂರದ ಮುನಿಸದ
ಮುನಿಪತಿ ಭಾವಿಪೊಡೆ ತಾನೆ ಜಿನಪತಿಯಲ್ತೆ ॥ ೩೭ ॥

ವ ॥ ಎಂದು ವಿಶುದ್ಧಾಂತರಂಗದಿಂ ವಿವಕ್ಷೆಗೆಯ್ಯುತ್ತುಂ

ಒಸೆಯುದೆ ಬೆಸೆಯುದೆ ಪರಿಭಾ
ವಿಸುತ್ತಮಿಂತಗ್ನಿವಾಯು ಭೂತಿಗಳ ಗುಣ ॥
ಕ್ಕೆ ಸಮಾನಚಿತ್ತನಾಗಿಯು
ಮಸಮಾನಮನಸ್ಕನಾದನೆನಗಿದು ಚೋದ್ಯಂ ॥ ೩೮ ॥

ವ ॥ ತದನಂತರಂ ಸೂರ್ಯಮಿತ್ರಾಚಾರ್ಯರಲ್ಲಿಂ ಪೊಱಮಟ್ಟುದಯವಾತ ಪರ್ವತಕ್ಕಾಗಿ ನಡೆವುದುಮಗ್ನಿಭೂತಿಯುಮವರ ಬೆಂಬೞಿಯನೆ ತಗುಳ್ದು ಪೋಗಿ ತನ್ಮಹೀಂದ್ರೋಪಕಂಠದೊಳ್ಮೆೞ್ಗಿ ಪೊಡೆವಟ್ಟು ನಿಮ್ಮಡಿ ನಿಮ್ಮನಾ ಪಂಚಮಹಾ ಪಾತಕನ ಮನೆಗೊಡಗೊಂಡುಯ್ದನೇಕಾಪವಾದೋಪಸರ್ಗಂಗಳಂ ಮಾಡಿದೆನಾ ದೋಷಮುಂ ಪ್ರಾಯಶ್ಚಿತ್ತದೊಳೇಗೆಯ್ದು ತೀರ್ವುದಲ್ತೆನಗೆ ನಿಮ್ಮಡಿ ದೀಕ್ಷೆಯಂ ದಯಂಗೆಯ್ಯಿಮೆಂದು ತತ್ಕಾಳಿಕಕಾಲಲಬ್ಧಿಯಿಂ ಸಂವೇಗವೈರಾಗ್ಯಪರನಾಗಿ ಪಿರಿದು ಮಾಗ್ರಹದಿಂ ಕೇಱಿ ಮೀಂ ಱಿ ಬೇಡಿದೊಡಲ್ಪಾಯುಷನುಮಾಸನ್ನಭವ್ಯನಪ್ಪುದಂ ಜಲಕ್ಷನಱಿದು ಶುಭ ಲಗ್ನದೊಳ್ ಜಾತರೂಪಧರನಂ ಮಾಡಿ

ಇವು ಗುಪ್ತಿಗಳಿವು ಸಮಿತಿಗ
ಳಿವು ನೆಗಜ್ದಾವಶ್ಯಕಂಗಳಿವು ಶಿಕ್ಷೆಗಳಿಂ
ತಿವು ಭಾವನೆಗಳ್ ಭಾವಿಪೊ ।
ಡಿವು ಚಾರಿತ್ರಂಗಳೆಂದನೇಕೋಕ್ತಿಗಳಿಂ ॥ ೩೯ ॥

ವ ॥ ನಿಯಮಾಚಾರ ಪ್ರಭೃತಿ ಪರಮಾಗಮಂಗಳನೋದಿಸುತ್ತುಂ ನಾನಾ ಜನಪದಸ್ಥಾನೀಯಂಗಳೊಳ್ ಸದ್ಧರ್ಮಪ್ರತಿಬೋಧನಾರ್ಥಂ ವಿಹಾರಿಸುತ್ತುಂ ವಿನಯ ಜನಾಂತರಂಗೋಚಿತಮಪ್ಪಂಗವಿಷಯಮಂ ವಿಷಯಮುಕ್ತರ್ಪೊಕ್ಕು ತನ್ಮಹೀಮಂಡಳಮಂಡನಮೆನಿಸಿದ ಚಂಪಾನಗರಮನೆಯ್ದಿದರಲ್ಲಿ

ಬೆಳಗೆಯ್ಗಳ ಕುಳಿರ್ವ ಪುೞಿ ।
ಲ್ಗಳ ತುಱುಗಿ ತಳಿರ್ತ್ತ ನಂದನಂಗಳ ಪೆಂಪಂ ॥
ತಳೆದು ಸೊಗಯಿಸುವ ಕೃತಕಾ
ಚಳತತಿಗಳ ಸಿರಿ ಕರಂ ಮನೋಹರಮದಱಿೊಳ್ ॥ ೪೦ ॥

ಪುದಿದ ತಮಾಲಮಿಲ್ಲದ ಲತಾಲಯಮಿಲ್ಲದ ಚಂಪಕಂಗಳಿ ।
ಲ್ಲದ ಸಹಕಾರಮಿಲ್ಲದ, ಸರೋವರಮಿಲ್ಲದ ರಾಜಹಂಸಮಿ ।
ಲ್ಲದ ಶುಕರಾಜಿಯಿಲ್ಲದ ಮದಾಳಿಗಳಿಲ್ಲದ ತಣ್ಬುಲಿಲ್ಗಳಿ ।
ಲ್ಲದ ಪುಳಿನಂಗಳಿಲ್ಲದೆಡೆಯಿಲ್ಲ ತದುರ್ಬಿಯೊಳೆಲ್ಲಿ ನೋೞ್ಪೊಡಂ ॥ ೪೧ ॥

ತರುನಿವಹಕ್ಕೆ ತಮ್ಮದಟೆ ತಮ್ಮ ವಿಲಾಸಮೆ ತಮ್ಮ ಚೆಲ್ವೆ ತ ।
ಮ್ಮರಸೆ ಪೊದಳ್ದಸಲ್ಗೆ ಸಲೆ ತಮ್ಮ ವಿಭೂತಿಯುಪೆರ್ಚೆ ಕೋರಕಾಂ ।
ಕುರ ವರಪತ್ರ ಪುಷ್ಪ ಫಳಪಕ್ವಚಯಂಗಳಿನೆಂತು ನೋೞ್ಪೊಡಂ ।
ನಿರುಪಮಮಾಗಿ ಕಣ್ಗೆ ಕರಮೊಪ್ಪಿದವಾವನ್ರಮಹೀಜರಾಜಿಗಳ್ ॥ ೪೨ ॥

ಪ್ರವರೋದ್ಯಾನವನಂಗಳಿಂ ಪ್ರವಿಲಸಚ್ಛಾಲೀವನಕ್ಕಾಗಿ ಪಾ ।
ಱುವ ಕೀರಾವಳಿ ಪುಷ್ಪವಾಟದಿನಗಲ್ದಬ್ಜಾಕರಕ್ಕಾಗಿ ಪೊ ।
ರ್ದುವ ಮತ್ತಭ್ರಮರಾಳಿ ಪೇರ್ಗೆಱೆಗಳಿಂ ಪುಂಡ್ರೇಕ್ಷುವಾಟಕ್ಕೆ ಪೊ ।
ಣ್ಮುವ ಪೇರಬ್ಬೆಗಳೆತ್ತಲುಂ ಸೊಗಯಿಕುಂ ಚಂಪಾಪುರೋಪಾಂತದೊಳ್ ॥ ೪೩ ॥

ವ॥ ಅಂತಾ ಪುರೋಪಾಂತದ ನಂದನವನಪ್ರದೇಶಮನೆಯ್ದೆವರ್ಪಾಗಳ್

ಅರವಿಂದೋತ್ಪಲ ಮಲ್ಲಿಕಾಪ್ರಸವಸೌರಭ್ಯಂಗಳಂ ಪೇಱೆಬ ।
ರ್ಪೆಲರುಂ ನಿರ್ಭರಭಕ್ತಿಯಿಂದ ಮಿದಿರ್ವಪ್ಪೆಂತಾಯ್ತು ಕಾದಂಬ ಭೃಂ ।
ಗರವಂ ಕೀರ ಚಕೋರ ಸಾರ ಸಮಯೂರಾರಾವದಿಂ ಬನ್ನಿಮಿ ।
ತ್ತಿರಿಮೆಂಬಂತೆ ಮೊಲಾಯ್ತು ತನ್ಮುನಿಯುಗಕ್ಕಾನಂದದಿಂ ನಂದನಂ ॥ ೪೪ ॥

ವ॥ ಆ ಪ್ರಸ್ತಾವದೊಳ್

ವನಜಾತಾಕರಶೀಕರಪ್ರಕರಸಾರಾಸಾರದಿಂ ನಾಂದು ನಂ ।
ದನನಾನಾಪ್ರಸವಪ್ರಭೂತಮಕರಂದಾಮೋದಮಂ ತಂದು ನೂ ।
ತನಚೂತಾವನಿಜಾತಗುಚ್ಛನಿವಹವ್ಯಾಜಂಗಳೊಳ್ ನಿಂದು ಮೆ ।
ಲ್ಲನೆ ತಣ್ಪಂ ತನಿಗಂಪುಮಂ ಪಡೆದು ತೀಡಿತ್ತೊಂದು ಮಂದಾನಿಲಂ ॥ ೪೫ ॥

ವ॥ ಅಲ್ಲಿಂ ಬಳಿಕ

ಇದು ಪುಣ್ಯಕ್ಷೇತ್ರವಿಶಾ ಇರ್ದುದೆ ದುರಿತಹರಕ್ಷೇತ್ರವಿಶಾ ಮೆಯ್ಯೊಳೀ ತೋ ।
ರ್ಪುದೆ ಸಿದ್ಧಕ್ಷೇತ್ರಮೆಂದಾದರದಿನಿವರ್ಗೆ ತೋರ್ಪಂತುಟಾಗಿರ್ದುದಾ ಬೇ
ಗದೊಳೆತ್ತಂ ವಂದನಾಭಕ್ತಿಯಿನನವರತಂ ಬಂದು ಬಂದಾಗಳುಂ ಕುಂ ।
ದದೆ ನಿರ್ವಾಣೋರ್ವಿಯುಂ ಪೂಜಿಸುವಖಿಳವಿನೇಯೋತ್ಕರಾಶೇಷಲೋಕಂ ॥ ೪೬ ॥

ವ॥ ಅಂತಶೇಷಕರ್ಮನಿರ್ಮೂಲನಕರನುಂ ದ್ವಾದಶತೀರ್ಥಕರನುಂ ಪರಿತ್ಯಕ್ತ ಸಕಲವಸುಂಧರಾತಳಾಧಿರಾಜ್ಯನುಂ ತ್ರಿಜಗತ್ಪೂಜ್ಯನೆನಿಸಿದ ಶ್ರೀವಾಸುಪೂಜ್ಯಭಟ್ಟಾರಕರ ಪರಿನಿರ್ವಾಣಕ್ಷೇತ್ರಮುಂ ಕಂಡು ಮೂಱುಸೂೞ್ ಬಲವಂದು ಕೈಗಳಂ ಮುಗಿದು

ಜಯಮದನಮದವಿಮರ್ದನ ।
ಜಯ ಸಕಳವಿನೇಯನಿವಹಸಖ ಜಯ ಭುವನ॥
ತ್ರಯಶಿಖರಶಿಖರಿಶೇಖರ ।
ಜಯ ನತಸುರಖಚರದನುಜಮನುಜಾಧೀಶಾ ॥ ೪೭ ॥

ಜಯಜಯ ವಾಸುಪೂಜ್ಯ ಸುರಪೂಜ್ಯ ಜಿನೇಶ್ವರ ವೀತರಾಗ ನಿ ।
ರ್ಭಯ ನಿರವದ್ಯ ನಿರ್ಜಿತ ನಿರಂಜನ ನಿರ್ಮಲ ನಿಷ್ಕಲಂಕ ನಿ
ರ್ನಯ ನಿರಪಾಯ ನಿರ್ಜನನ ನಿಸ್ಪೃಹ ನಿರ್ಮಮ ನಿರ್ವಿಕಲ್ಪ ನಿ ।
ಷ್ಕ್ರಿಯ ನಿರಪೇಕ್ಷ ನಿನ್ನ ಚರಣಂ ಶರಣಕ್ಕೆಮಗಿಂ ಜಿನೇಶ್ವರಾ ॥ ೪೮ ॥

ಭವದೀಯ ವಿಮಳರೂಪ ।
ಸ್ತವ ವಸ್ತುಸ್ತವ ಗುಣಸ್ತವಂಗಳನಿಂತೆಂ ॥
ದವನೆಣಿಸಲಶಕ್ಯಂ ನತ ।
ದಿವಿಜೇಂದ್ರಾಹೀಂದ್ರ ವಾಸುಪೂಜ್ಯ ಜಿನೇಂದ್ರಾ ॥ ೪೯ ॥

ನುತಪುಷ್ಪಾಸಾರಮುದ್ಯದ್ದಿವಿಜ ಜಯನಿನಾದಂ ನವಾಶೋಕವೃಕ್ಷಂ ।
ಸಿತಚಂಚಚ್ಚಾಮರಂ ಬೆಳ್ಗೊಡೆ ಸೊಗಯಿಪ ಭಾಮಂಡಳಂ ದೇವತೂರ್ಯೋ ॥
ದಿತನಾದಂ ಚಾರುಸಿಂಹಾಸನಮೆನೆ ನೆಗಳ್ದೀ ಪ್ರಾತಿಹಾರ್ಯಾಷ್ಟಕಂ ವಿ ।
ಶ್ರುತಮಾಗಿರ್ಕ್ಕುಂ ಸುರೇಂದ್ರೋಪಕೃತಮೆನಿಸಿ ನಿಮ್ಮೊಳ್ ತ್ರಿಲೋಕೈಕಬಂಧೂ ॥

ಭುವನತ್ರಯಂಗಳೊಳಗು ।
ಳ್ಳ ವಸ್ತುಗಳ್ ದೇವ ಕರತಳಾಮಳಕ ಸಮಾ ॥
ನವೆ ನಿಶ್ಚಯಮಾದವು ನಿನ ।
ಗೆ ವಿಮಲಕೇವಲವಿಲೋಚನಾಲೋಕನದಿಂ ॥ ೫೧ ॥

ದುರಿತಾರಾತಿಯನಿಕ್ಕಿ ಗೆಲ್ವುದುಮನಂತಜ್ಞಾನಮುಂ ತಾನಿದ ।
ಚ್ಚರಿಯೆಂಬಂತಿದನಂತದರ್ಶನಮುಮವ್ಯಾಬಾಧಶೋಭಾಕರಾ ।
ಕ್ಷರ ನಿರ್ವ್ಯಾಕುಲಮಪ್ಪನಂತಸುಖಮುಂ ಮೆಯ್ವೆತ್ತು ನಿನ್ನೊಳ್ಪರಂ ।
ದೊರೆವೆತ್ತಿರ್ದುದನಂತವೀರ್ಯಮುಮನಂತಾನಂತಸೌಖ್ಯಾಸ್ಪದಂ ॥ ೫೨ ॥

ದಯೆಯಿಂದ ಭಾವಿಯಂ ಭಾ ।
ವಿಯುಮೆಂದುಂ ಭಾವಿಯನ್ನಭಾವಿಯನೆಂಬೀ ॥
ನಯಮಂ ಮಾಡುವುದೆಮಗ ।
ಕ್ಷಯಸೌಖ್ಯಾನಂತ ಮೋಕ್ಷ ಲಕ್ಷ್ಮೀಕಾಂತಾ ॥ ೫೩ ॥

ವಸುಪೂಜ್ಯಂ ತಂದೆ ಸಂದೊಪ್ಪುವ ಜಯ[1][ವ[1]ತಿ ತಾಯ್ ನೀಳಮೆಪ್ಪತ್ತು ಬಿಲ್ ಶೋ
ಭಿಸುವಂಗಂ ಬಾಳಭಾನುಚ್ಛವಿ ನೆಗಳ್ದ ಕದಂಬದ್ರುಮಂ ತಾನಶೋಕಂ ।
ಪೆಸರಿಂದಂ ಲಾಂಛನಂ ಸೈರಿಭಮನುಪಮ ಚಂಪಾಪುರಂ ತನ್ನ ನಿರ್ವಾ ।
ಣ ಸುಸೇವ್ಯಸ್ಥಾನಮಾಗಿರ್ದಘರಿಪು ಕುಡುಗಿಷ್ಟಾರ್ಥಮಂ ವಾಸುಪೂಜ್ಯಂ ॥ ೫೪ ॥

---

1. ಸುದ (ಕ. ಗ)

ವ|| ಎಂದನೇಕ ಸ್ತುತಿಶತಸಹಸ್ರಂಗಳಿಂ ಸ್ತುತಿಯಿಸಿ ದೇಶಾವಧಿಜ್ಞಾನಿಯಪ್ಪ ಸೂರ್ಯಮಿತ್ರಮುನಿನಾಥನತಿವಿಶುದ್ಧಪರಿಣಾಮದಿಂ ಸರ್ವಾವಧಿಜ್ಞಾನಲೋಚನ ನಾಗಿ ನಿರ್ವಾಣೋರ್ವರಾಂತರ್ಭಾಗದಿಂ ಪೂಜಿಸಿಮುಟ್ಟು

ಅಮಿತಗುಣಾಬ್ಧಿ ವಿಶ್ರುತಬಹುಶ್ರುತಪಾರಗನಪ್ರಮತ್ತನ
ಪ್ರಮಿತ ಸುರಾಸುರೋರಗ ವಿಯಚ್ಚರ ರಾಜ ಕಿರೀಟ ತಾಟಿತ
ಕ್ರಮಕಮಲದ್ವಯಾನತ ಮಧುಬ್ರತನೆಯ್ದಿದನಗ್ನಿಭೂತಿ ಸಂ
ಯಮಿವೆರಸಾಗಳಾ ಪರಮಸಂಯಮಿ ಸಂಬರನಾಗಠಾಣಮಂ || ೫೫ ||

ವ|| ಅಂತು ಪುರೋಪಾಂತವನಾಂತರಾಳಸಂಸ್ಥಿತಮಪ್ಪ ಸಂಬರಕಂಬಳ ಪಾಂಡುರ ತ್ರಿತಯಾಭಿಧಾನಾಭಿರಾಮಮಪ್ಪ ನಾಗಮಂಟಪಂಗಳೊಳ್ ಸಂಬರನಾಗ ಠಾಣದೊಳ್ ಯೋಗನಿಯೋಗಪ್ರದೇಶದೊಳಿರ್ದಂದಿನ ದಿವಸಂ ತೀರ್ಥೋಪವಾಸಪ್ರ ತ್ಯಾಖ್ಯಾನದಿಂ ಪರಮಾರ್ಥಂಗಳಂ ಭಾವಿಸುತ್ತುಮಿರ್ದು ಮಱುದಿವಸಂ ಮಧ್ಯಾಹ್ನ ಕಾಲದೊಳಗ್ನಿಭೂತಿಋಷಿಯರ್ ಗುರುಗಳನುಮತದಿಂ ಚಂಪಾನಗರಕ್ಕೆ ಚರ್ಯಾ ಮಾರ್ಗದಿಂ ಬರುತ್ತುಮಾ ಪುರೋಪಾಂತದುಪವನಾಂತರಾಳದೊಳ್

ಮಾತಂಗಿಯನತಿಶೋಕಾ
ನ್ವೀತೆಯನಪರಿಮಿತದುಃಖಿತಾಂಧಕೆಯಂ ತೃ
ಷ್ಣಾತುರ ಗದ್ಗದ ಕಾಂತೆಯ
ನಾ ತಾಪಸನಾಗಳವಳನಿದಿರೊಳೆ ಕಂಡಂ || ೫೬ ||

ತಲೆರೋಮಂ ಜೆಡೆಗಟ್ಟೆ ಪೇನಿಟಿದು ಬಾಯೊಳ್ಶೀವೆ ಮೆಯ್ ಬಾತ ಬಾ
ವಲನಾತಕ್ಕಣೆಯಾಗಿ ನಾಱೆ ಪಲರುಂ ಚೀಯೆಂಬಿನಂ ಸೂಸಿದೆಂ
ಜಲವುಚ್ಚಿಳನಾವಗಂ ಬಿದಕಿ ತಿಂದಾ ಬಟ್ಟೆಯೊಳ್ ಬಟ್ಟನೇ
ಱಲ ಚೆಂಗಾರೆಯ ಮೆಲ್ದುಗುಬ್ದಿ ಸಹಕಾರೋಚ್ಛಿಷ್ಟಪಕ್ವಂಗಳಂ || ೫೭ ||

ತಡವಡಿಸಿ ಪುಡುಕಿ [1]ಪಂ[1]ಜಿನ
ನಡು ಬೀದಿಯೊಳಿರ್ದು ಮಱುಗುತಿರೆ ಕಂಡು ಕೆಲ ||
ರ್ಬಡಿದೆಡೆಯೊಳೊಡೆದ ಪುಣ್ಗಳಿ
ನೆಡೆಯುಡುಗದೆ ರುಧಿರವೊಱ[3]ತು ಕಱ[3]ಗಟ್ಟುವಿನಂ || ೫೮ ||

ಮೀಂಬೊಲಸು ನಾರ್ಪ ಮೆಯ್ಗ್ಗಮ
ಳುಂಬಂ ತೊಂಬುರ್ಚಿದಂತೆ ಸುರಿವರುಣಜಳ ||
ಕ್ಕಂ ಬಿಡದೆ ಕಾಗೆಯುಂ ಪ
ದ್ದುಂ ಬಳಸುವವೆಂದೊಡಿಂತು ಕಿಸುಗು[2]ಳಿಯೊ[2]ಳರೇ || ೫೯ ||

ಕೆಲಬರ್ಕರುಣಿಸೆ ಕೆಲಬ
ರ್ಪಲತೆಱದಿಂ ಜಡಿಯೆ ಕಂಡು ಕೆಲಬರ್ತ್ತವ್ಮಿಂ ||
ಜಲನೂಡೆ ದುಃಖದತಿಶಯ
ಜಲೆಯೊಳ್ ಮಲುಮಲನೆ ಮಱುಗಿ ಸಿಲ್ಕಿರ್ದವಳಂ || ೬೦ ||

ವ|| ಕಂಡು ಕರುಣಸಾದ್ರ್ರಹೃದಯಂ ಮನ್ಯು [ಗ] ದ್ಗದಕಂಠನುವಾಗಿ ನೀಡುಂ ಭಾವಿಸಿ ನೋಡಿ ತಲೆಯಂ ತೂಗಿದೂಗಿ

ಇದೇಂ ಬಹುವಿಚಿತ್ರಮೋ ಭವವಿಕಲ್ಪವೈಚಿತ್ರ್ಯಮಿಂ |
ತಿದೇನಘಟಮಾನಮೋ ವಿಕೃತಘೋರಸಂಸಾರಮಿಂ ||
ತಿದೇಂ ವೃಜಿನಬಂಧಮೋ ಕುಸೃತಿಬಂಧಸಂಬಂಧಮೆಂ |
ದದೇಂ ತಳೆದನೋ ಮುನಿಪ್ರವರನಾಗಳುದ್ವೇಗಮಂ || ೬೧ ||

ವ|| ಅಂತು ಸಂಸಾರದ ಸ್ವರೂಪಕ್ಕೆ ಚೋದ್ಯಂಬಟ್ಟು

---

1 ಪುಂ (ಗ) 2 ಳವೊ (ಕ)

ಆ ದುಃಖಜೀವಿಯಂ ಕಂ।
ಡಾದೊರೆಯು ಮುಮುಕ್ಷುಗಂ ನಿರೀಕ್ಷಿಸಲೊಡನಂ॥
ದಾದುದು ಬಾಷ್ಪಪ್ರಸರಂ।
ಸೋದರ್ಯವಿಮೋಹಮಾರ್ಗಮೇನಾಗಿಸದೋ ॥ ೬೨ ॥

ವ॥ ಅಂತು ಪರವಶದೊಳ್ ಮನ್ಯುಮಿಕ್ಕು ಸೈರಿಸಲಾಱದೆ

ಬಳೆದ ವಿಮೋಹದಿಂ ಪಿಡಿದ ಕುಂಚದ ಕಾವಿನೊಳಂದು ಪಕ್ವಸಂ
ಕುಲಮನದೊಂದೆರಳ್ಬಳಿಗೆ ಪೋಪಿನಮಲ್ಲಿಯೆ ನಿಂದು ದುಃಖ ವಿ
ಹ್ವಳನೆಡೆದೋಱ ನೂಂಕಿ ಕುಡುತುಂ ಕರುಣಂ ಪಿರಿದಾಗಿ ಪಿಂಬಗಲ್
ಕಳೆವಿನಮಿರ್ದನಾ ಪರಮಯೋಗಿಗಮಂತುಟು ಮೋಹಮಾಗದೇ ॥ ೬೩ ॥

ವ॥ ಇಂತು ಪಕ್ಷಿಪಕ್ಷಚಂಚುಚರಣಾಭಿಘಾತದೊಳಂ ಶಿಶು ಜನನಾನು[1] ಪಾತದಂಡಖಂಡಾಘಾತದೊಳುಮುದಿರ್ದು ನೆಲದೊಳ್ ಬಿರ್ದ ನೇಱಲಪಣ್ಗಳನಾ ಕೂಸಿನ ಪಕ್ಕಕ್ಕಾಗಿ ಸಾರ್ಚಿಕೊಟ್ಟು ತದನಂತರದಾ ವ್ಯತಿಕರದಿನಂತರಾಯುಮಾಗಿ ಮಗುಳ್ದುಬಂದು ನಾಗಸ್ಥಾನಮಂ ಪೊಕ್ಕು

ಪರಮ ಶ್ರೀ ಜೈನಧರ್ಮಾಂಬರಖರಕರನಂ ನಿರ್ಮಲಧ್ಯಾನನೀರಾ।
ಕರನಂ ಸಜ್ಞಾನಶೋಭಾಕರನನನುಪಮೋದಾತ್ತಚಾರಿತ್ರರತ್ನಾ।
ಕರನಂ ಸಂದಗ್ನಿಭೂತಿಬ್ರತಿ ಸವಿನಯದಿಂ ಭಕ್ತಿಯಿಂ ಬಂದುಕಂಡಂ।
ಪಿರಿದೊಂದಾನಂದದಿಂದಂ ಪರಮಜಿನಮತಾಂಭೋಜಿನೀ ರಾಜಹಂಸಂ ॥ ೬೪ ॥

ಇದು ಸಮಸ್ತವಿನಯಜನವಿನುತ ಶ್ರೀವರ್ಧಮಾನಮುನೀಂದ್ರವಂದ್ಯ
ಪರಮಜಿನೇಂದ್ರ ಶ್ರೀಪಾದಪದ್ಮವರಪ್ರಸಾದೋತ್ಪನ್ನ ಸಹಜ
ಕವೀಶ್ವರ ಶ್ರೀಶಾಂತಿನಾಥಪ್ರಣೀತಮಪ್ಪ ಸುಕು
ಮಾರಚರಿತದೊಳ್ ಚತುರ್ಥಾಶ್ವಾಸಂ॥

---

1 + ಪಾತಾ (ಕ)

# ೫. ಪಂಚಮಾಶ್ವಾಸಂ ॥

ಶ್ರೀಮನ್ಮುನೀಂದ್ರವಂದಿತ ।
ಕೋಮಲ ಕರಚರಣಭಕ್ತಿಯಿಂದಂ ಬಂದು ॥
ದ್ದಾಮಗುಣಂ ವಂದಿಸೆ [1][ಕಂ ।
ಡಾ][1] ಮುನಿಮುಖ್ಯಂ ಸರಸ್ವತೀಮುಖಮುಕುರಂ ॥ ೧ ॥

ಜ್ಞಾನದಿನಱಿದೆಂದಂ ನೀ ।
ಮೀ ನಗರಕ್ಕಾಗಿ ಚರಿಗೆವೋಗುತ್ತುಂ ನಾ ॥
ನಾನೂನದುಃಖಪೀಡಿತ ।
ಮಾನಸೆಯಾಗಃತ್ತುಮಿರ್ದ ಪೊಲವಾನಸೆಯಂ ॥ ೨ ॥

ಕರುಣಂ ಕೈಮಿಗೆ ಕಂಡಾ ।
ದರದಿಂದಂ ಮನ್ಯುಮಿಕ್ಕು ನಯನಜಲಂಗಳ್ ॥
ಸುರಿದಿನ್ನೆಗಮಲ್ಲಿರ್ದಂ ।
ತರಾಯದಿಂ ಬಂದಿರೀಗಳೆಂಬುದುಮಾಗಳ್ ॥ ೩ ॥

ವ॥ ಅಗ್ನಿಭೂತಿಮುನೀಶ್ವರನತ್ಯಾಶ್ಚರ್ಯಂಬಟ್ಟು

ಎನ್ನೊಡನೆ ಬಂದಿರೋ ಮೇ ।
ಣ್ಮನ್ನಾ ಕೂಸಿಂಗೆ ಬುದ್ಧಿಗಲಿಸಿದಿರೋ ಪೇ ॥
ೞ್ನಿಮ್ಮಡಿಗಳ್ ನಿಶ್ಚಯದಿಂ ।
ದೆನ್ನರುಮೀ ಜಗದೊಳಿಂತು ಪೇೞ್ದರುಮೊಳರೇ ॥ ೪ ॥

ವ॥ ಎಂಬುದುಂ ದರಹಸಿತವದನಾರವಿಂದರಾಗಿ

---

1+ ಬಂದಾ (ಕ) 2 ಬಂದಾ (ಕ)

ನಿನ್ನೊಡನೆ ಬಂದೆವಿಾಗ ।
ಳ್ಮನ್ನಾ ಕೂಸಿಂಗೆ ಬುದ್ಧಿಗಲಿಸಿದೆವುದಱಿಂ ॥
ನಿನ್ನೆಂದವಾರ್ಗಮೆಂದು ಜ ।
ಗನ್ನುತ ಚಾತುರ್ಯವಚನರಚನೆಗಳಿಂದಂ ॥ ೫ ॥

ವ॥ ಭಟ್ಟಾರಕರ್ಬೆಸಸುವುದುಂ ತದಂತೇವಾಸಿ ವಿಸ್ಮಯೋದಾತ್ತಚಿತ್ತನಾಗಿ

ನಾನಾವಿಧದುಃಖಾನ್ವಿತೆ ।
ತಾನೆತ್ತ ವಿವಿಕ್ತಮೋಹಪಾಶನೆನಾಗಿ ॥
ದಾರ್ನೆತ್ತುಂತುಂ ಮೋಹಂ ।
ತಾನನುಬಂಧಿಸಿದುದಿದಱ ಕಾರಣಮೇನೋ ॥ ೬ ॥

ಬೆಸಸಿಮಿದನೆನ್ನ ಮನದೊಂ ।
ದು ಸಂಶಯಂ ಪತ್ತುವಿಡುವಿನಂ ವ್ಯಾಮೋಹಂ ॥
ಪ್ರಶಮಿಸುವಿನಮೆಂಬುದು ಮಂ ।
ದೆಸೆದುಡು ವಾಕ್ಪ್ರಸರಮಾಗಳಾ ಯತಿಪತಿಯಾ ॥ ೭ ॥

ವ॥ ನಿಮ್ಮಾವಾಸದೊಳಾಮುಂದು ಚರಿಗೆನಿಂದಂದು ನೀನೆಮ್ಮಂ ನಿಮ್ಮ ತಮ್ಮನಪ್ಪ ವಾಯುಭೂತಿಯಿರ್ದಲ್ಲಿಗೊಡಗೊಂಡೊಯ್ದಾಗಳಾ ಪುರುಷನತಿಪರುಷ ವಚನಂಗಳಿಂ ತಿರಸ್ಕರಿಸಿ ನುಡಿದೊಡದುವೆ ನಿರ್ವೇಗದಿಂ ಸಂವೇಗಂ ಪುಟ್ಟೆ ನೀಮಿಾ ಯತಿಸ್ವರೂಪಮಂ ಕೈಕೊಂಡ ವಾರ್ತೆಯಂ ನಿಮ್ಮ ಮುನ್ನಿನ ಧರ್ಮಪತ್ನಿಯಪ್ಪ ಸೋಮದತ್ತೆ ನಿರ್ಣಯಮಾಗಿ ಕರ್ಣಪರಂಪರೆಯಿನಱಿದು ತನ್ನ ಮೈದುನನೈಶ್ವರ್ಯಗರ್ವದೊಳಂ ವಿದ್ಯಾಗರ್ವದೊಳಂ ನಿಮ್ಮ ಮಾವನಂ ನೀಂ ನಿರಾಕರಿಸಿ ನುಡಿದೊಡೆನ್ನ ಭರ್ತಾರಂ ನಿನ್ನನೇನುಮೆನಲಱಿಯದೆ ತನ್ನಂ ತಾನೆ ನಿಂದಿಸಿಕೊಂಡು ಸಿಗ್ಗಾಗಿ ಪೋಗಿ ತಪಂಬಟ್ಟನೆನ್ನ ಮಕ್ಕಳುಮಾನುಂ ದುಃಖಾಗ್ನಿಯೊಳ್ ಪುಡುಪುಡನೆ ಪುರ್ಗಿ ನಮೆವ ಪಾಪದ ಫಲಮಂ ನೀನಮೋಘಮುಣ್ಬೆಯೆಂದು ಮೂದಲಿಸಿ ನುಡಿವುದುಮುರ್ವರಾಮರ ಸಭಾಭ್ಯಂತರ ಲೋಹಾಸನಸ್ಥಿತಂ ತದಾಸನದಿನಿೞಿದು

ಮುಳಿದು ಪಿಡಿದೆೞೆದು ನಿನ್ನಾಣ್ಮನಪ್ಪ ನಾಣಿಲಿಸವಣನನೊಡಗೊಂಡು ಬಾ ಪೋಗೆಂದು ಪೊಱಮಡೆ ನೂಂಕುವುದುಮಪ್ರತ್ಯಾಖ್ಯಾನಕ್ರೋಧಕಷಾಯೋದಯದಿಂ ಪರಿಭವಾನಳನಳವಲ್ಲದಳುರೆ ಸೋಮದತ್ತೆ ಸೈರಿಸಲಾಱದೆ ॥

ಮುಳಿದೆನ್ನನಪರಾಧೆಯು ।
ನೞಿಲ್ದವಳನಿಂತನಾಥೆಯುಂ ಮೋದಿದ ಕಾ ॥
ಲ್ಗಳನಾವ ಜನ್ಮಜನ್ಮಂಗ ।
ಳೊಳಗಾಗಿಯುಮಕ್ಕೆ ಮುಂದೆ ಕೇಳ್ತಿನ್ನದಿರೆಂ ॥ ೮ ॥

ವ॥ ಎನ್ನನೊದೆದ ನಿನ್ನ ಕಾಲ್ಗಳನೆನ್ನ ಮಕ್ಕಳುಮಾನುಮೊಂದಾಗಿಯು ಮೇನಾಗಿಯುಂ ಸೀಳ್ದು ಪೋೞ್ದು ತಿಂಬೆನೆಂದಾರ್ತಧ್ಯಾನದಿಂ ನಿದಾನಂಗೆಯ್ದು ಸತ್ತು ಸಂಸಾರಕಾಂತಾರಾಂತರಾಳದೊಳ್ ತಿರ್ಯಗ್ಜಾತಿಯಾಗಿ ಪುಟ್ಟಿ ತಿರಿಯುತ್ತು ಮಿರ್ದಪ್ಪಳಿತ್ತಲಾ ಸೋಮದತ್ತೆಯ ಮನೆಯೊಳುಳ್ಳ ಸರ್ವಸ್ವಮಂ ಸೂಱೆಗೊಂಡು

ತದ್ವಾಯುಭೂತಿ ವಿಭವ ಸ ।
ಮುದ್ವೃತ್ತಂ ವಚನದಂಡಪರುಷತೆಯಿಂ ಸಂ ॥
ಪದ್ವಶದಿನುರ್ಕ್ಕಿದಂ ತೃಣ ।
ವದ್ವಸುಮತಿಯೆನಿಸಿರ್ದ ವಿಶ್ವವಿಶ್ವಂಭರೆಯೊಳ್ ॥ ೯ ॥

ಪುದಿದೈಶ್ವರ್ಯದಿನಗ್ಗದಗ್ಗಳಿಕೆಯಿಂ ಚಾತುರ್ಯದಿಂ ಶೌರ್ಯದಿಂ ।
ಮುದದಿಂ ಭೋಗದಿನತ್ಯುದಾತ್ತಮಹಿಮಾವಷ್ಟಂಭದಿಂ ಸದ್ವಿಲಾ ।
ಸದಿನಾವಾಸವವಾಸುಕಿಪ್ರಭೃತಿಗಳ್ ತಾವೆಯ್ದಿದಂದೇನನೆ ।
ಯ್ದಿದರೀ ಮಾನವಲೋಕದೊಳ್ ಜನಿಯಿಸಿರ್ದನ್ಯಾವನೀಪಾಳಕರ್ ॥ ೧೦ ॥

ವ॥ ಎನಿಸಿದುದ್ಧತಿಯೊಳುದ್ದಂ ಬಂದು ದಳ್ಳಿಂದು ನಿಂದುರಿದಂದಿನೇೞನೆಯ ದಿವಸಕ್ಕೆ

ಔದುಂಬರಕುಷ್ಟಂ ನೆಗೆ ।
ದೌದಾರ್ಯಕಳೇವರಂ ಪಳಾಳಂಬಿತಮಾ ॥
ದೌದುಂಬರಮೆನಿಪಂತೆವೊ ।
ಲಾ ದೊರೆಯುಂಗಾಯ್ತು ಖಳಕಳಂಕಾತಂಕಂ ॥ ೧೧ ॥

ವ॥ ಇಂತಪ್ರತ್ಯಾಖ್ಯಾನಕಷಾಯೋದಯದಿಂದೆಮ್ಮನವಮಾನಿಸಿ ನುಡಿದ ಪಾಪದ ಫಲದಿನೌದುಂಬರಕುಷ್ಟಮಾಗಿ ಸರ್ವಾಂಗೋಪಾಂಗಾವಯವಪ್ರದೇಶಂಗಳೆಲ್ಲಂ ರೂಪಱಿಯಲಾಗದಂತು ಜರ್ಜರಮಾಗಿ ಜರಿಯೆ ॥

ಅತಿಬಳನಾತ್ಮರಾಜಗೃಹಮಂ ಪುಗಲೀಯನೆ ಕಂಡರಾರುಮ ।
ನ್ವಿತರುಜನೆನ್ದು ಸಾರಲಣಮಿಾಯರೆ ಮುನ್ನೊಡವಟ್ಟು ತನ್ನ ಪೆಂ ।
ಡತಿ ಮೊದಲಾಗಿ ಪೂರ್ದಲಣಮಿಾಯಳೆ ಮಿತ್ರಜನಂಗಳೆಲ್ಲಮು ।
ದ್ಧತನಿವನೆಂದು ಮನ್ನಿಸರೆ ಪಾಪಿಯನಾರೊಳಕೊಂಡು ಮನ್ನಿಪರ್ ॥ ೧೨ ॥

ವ॥ ಅಂತು ಪೆಂಡಿರ್ಪೇಸೆಯುಂ ಕಂಡವರೇವಯ್ಸೆಯುಂ ಪಲವುದಿವಸಮಾಯಾಸಂಬಟ್ಟು ಬತ್ತಿದ ಬಾಯ್ಗಂ ಪೊತ್ತಿದನೆತ್ತಿಗಮಂತೇನುಮಂ ಪಡೆಯದೆ ಬಡತನಮಡಸಿ ಬಳಮುಱಿದು ಪುೞಿತು ನಮೆದು ಸತ್ತುಮಾ ಕೌಶಂಬೀಪುರದೊಳ್ ಬಹುಕರ್ಮಿಯೆಂಬ ದೊಂಬನಮನೆಯೊಳ್ ಸ್ತ್ರೀವೇದದಿಂ ಬೆಳ್ಗತ್ತಿಯಾಗಿ ಪುಟ್ಟಿ

ಜನಪದವೆನಿತೊಳವನಿತಱೊ ।
ಳೆನಿತೂರೊಳವನಿತುಮಂ ಪಲರ್ಮೆಯುಮದು ತಿ ॥
ಟ್ಟನೆ ತಿರಿದು ಮಾಯ್ದುಡೊಂ ।
ಬನ ಮನೆಯೊಳ್ ಮಲುಮಲನೆ ಮಱುಗಿ ನಮೆಯುತ್ತಿರ್ಕುಂ ॥ ೧೩ ॥

ಕಡುವಿರಿಯುವ ಪೊಱೞಿಗಳ ನೆಡೆ ।
ಮಡಗದೆ ಮೇಲೊಟ್ಟಿ ಮತ್ತೆ ಮೆಲ್ಪರಮುಮನಾ ॥
ಗಡೆ ಕಟ್ಟಿ ಕುಸಿದು ಕುಸಿದಡಿ ।
ಮಿಡುಕದೆ ಸುಗಿದಗಿದು ಮುರ್ಗಿ ತರ್ಗುವ ಪದದೊಳ್ ॥ ೧೪ ॥

ಬಡಿವ ಬಡಿಗೆಗಳ ಕೋಳೊಳ್ |
ತೊಡೆಯುದು ಸಲೆ ಪೊಟ್ಟಗೊಡೆದು ಕಡಿವಡೆದೆತ್ತಂ ||
ಪುಡುಪುಡನೆ ಪುರ್ಗಿ ಜೋಲ್ದೆಬ |
ಲ್ವಡಗಾಗಿ ಸುರುಳ್ದು ಸುರುಳ್ದು ಬಾಯ್ವುಟ್ಟಕುಂ || ೧೫ ||

ಆಱದಿದಾರ್ಪುದೆನ್ನದೆ ತಗಳ್ದು ಮರಂಗಳನೊಟ್ಟ ಕೀಲನಿ |
ಟ್ಟೇಱ ಬಲಿಲ್ವಿನಂ ಬಡಿದು ಗೋವುಗಳಿಂತಿರೆ ಪೇಱ ದುಃಖಮಂ |
ಪೀಱ ಬಿಗುರ್ತು ಬೀಗಿ ನಡುವೆನ್ನೊಡೆದಿರ್ಬಗಿಯಾಗಿ ಪೋಲ್ದು ನೀ |
ರೇಱದ ನಾಳಿಪುಣ್ಣೊಡೆದು ಸೌಳಿನೆ ಸೀಳ್ದುದು ದೋಣಿವೋಪಿನಂ || ೧೬ ||

ಈ ತೆಱದಿನಾದ ಪಲವುಂ |
ಯಾತನೆಗಳನೆಯ್ದಿ ಪುಟಿತು ಸತ್ತಾ ಪುರದೊಳ್ ||
ಪೋತಜಗಭೋದ್ಭೂತನಿ |
ಪಾತಂ ಪೇಪಂದಿಯಾದುದಘವಶದಿಂದಂ || ೧೭ ||

ತೊಲಗದೆ ಗೋವುಗಳ್ ನೆರೆದು ನಾಯ್ಗಳನುಚ್ಚರ್ವ ಕಂಡು ಗುಂಡುಗೊಂ |
ಡಲಸದೆ ನಿಚ್ಚಮಾರ್ದಿಡುವ ತಕ್ಕಿನ ಕರ್ಕಡೆಗೊಂಡು ಮಿಂಡು ಮಾ |
ರ್ಮಲೆದಿದಿರಾಂತು ನಿಂದಡಸಿ ಸುತ್ತುವ ಬಾರಿಗೆ ಮೆಯ್ಯನೊಡ್ಡಿ ಕೋ |
ಟಲೆಗೊಳಗಾಗಿ ಪಂದಿ ನಮೆವಂದವದಾರ್ಗಮಸೇವ್ಯವರ್ಣನಂ || ೧೮ ||

ಅನಿವಿರಿದು ದುಃಖದೊಳ್ ನಮೆ |
ದು ನಾರುಗಿದು ಪೊಗೆದು ಸತ್ತಲ್ಲಿ ನಿಷಾ ||
ದನ ಮನೆಯೊಳ್ಪೆಣ್ನಾಯಾ |
ಯ್ತು ನೆನೆದೊಡಾಶ್ಚರ್ಯಮಲ್ತೆ ಸಂಸೃತಿಚಕ್ರಂ || ೧೯ ||

ಮುಳಿಸಿಂ ಮಾಣದೆ ಗೋವುಗಳ್ ತಗುಳೆ ಕಾಯ್ಪಿಂದೆತ್ತಲುಂ ನಾಯ್ಗಳ ।
ವ್ವಳಿಸುತ್ತುಂ ಪರಿದೆಯ್ದಿ ಸೀಳ್ದು ತಿನೆ ನಾನಾವೇದನೋದ್ರೇಕಮುಂ ।
ತಳೆದಾ ನಾಯ್ ಬಡಪಟ್ಟು ದುಃಖದೊದವಿಂ ಬಾಯ್ವಿಟ್ಟು ಪೋಳಿಟ್ಟು ಪೇ ।
ಕುಳಿಗೊಂಡಾದ ವಿಷಾದದಿಂ ಪುಟಿತು ಸತ್ತಿತ್ತಂತೆ ಕಾಲಾಂತದೊಳ್ ॥ ೨೦ ॥

ವ॥ ಮತ್ತಮಿಾ ಚಂಪಾನಗರದೊಳ್

ಅಕುಲೀನ ಪ್ರಾಪ್ತರೊಳ್ ದುಶ್ಚರಿತರೆನಿಪ ಮಾತಂಗರೊಳ್ ಪುಟ್ಟಿ ಮತ್ತಂ
ವಿಕಟಾಂಗೋಪಾಂಗೆ ಘಾತಿಪ್ರಚುರೆ ಪೆಟವಿ ದುರ್ಗಂಧೆ ದುರ್ವರ್ಣೆ ಜಾತ್ಯಂ
ಧಕಿ ಗೋಳಾಂಗೂಳಲೋಳಾನನೆಯೆನಿಸಿದ ಪಾಪಕ್ಕೆ ಪಕ್ಕಾಗಿ ದುಃಖಾ
ಧಿಕೆಯಿಂ ಸಂಸಾರಕೂಪಾರದೊಳನವರತಂ ನೀಡುಮೋಲಾಡುತಿರ್ದಳ್ ॥ ೨೧ ॥

ವ॥ ಇಂತು ನೀಳನೆಂಬ ಮಾದೆಗಂಗಂ ಕೌಶಂಬಿಯೆಂಬ ಮಾದೆಂಗಿಗಂ ಮಗಳಾಗಿ ಪೂರ್ವೋಪಾರ್ಜಿತ ಶುಭಾನುಪೂರ್ವಿನಾಮ ಕರ್ಮೋರ್ವೀರುಹ ಪರಿಪಾಕ ಫಳಮನನುಭವಿಸುತ್ತುಮೊಂದು ಪೊತ್ತಪ್ಪಡಂ ಸುಖಂಗಾಣದೆ ಹಾಹಾಭೂತಚೇತಸ್ಕೆಯಾಗಿರ್ದಳಂ ನೀಮಿಾಗಳ್ ಕಂಡಿರಾ ದುಃಖಜೀವಿ ನಿಮ್ಮ ತಮ್ಮನಪ್ಪ ವಾಯುಭೂತಿಯುಪ್ಪುದಱಿನೆ ನೀನಿಂತಱಿಯುದೊಡಂ ಸೌಧರ್ಮಿಕೆ ಮಿಕ್ಕು ಬರ್ಕುಮೆಂಬಂತೆ ನಿಮಗತಿಸ್ನೇಹಮುಂ ವ್ಯಾಮೋಹಮುಂ ಕಯ್ಮಿಕ್ಕುಬಂದುದೆಂಬುದುಂ.

ಮನದೊಳ್ ಸಂವೇಗಂ ನೆ
ಟ್ಟನೆ ಪುಟ್ಟಿರೆ ವಾಯುಭೂತಿಚರನಪ್ಪಾ ಜೀ
ವನೀಗಳಭವ್ಯನೋ ಭ
ವ್ಯನೊ ಮತ್ತಂ ದೂರಭವ್ಯನೋ ಬೆಸಸಿಮಿದಂ ॥ ೨೨ ॥

ವ ॥ ಎಂಬುದುಮಾ ಜೀವನಭವ್ಯನಲ್ಲ ಪ್ರತ್ಯಾಸನ್ನಭವ್ಯಂ ನೀಮಿಾಗಳ್ ಪೋಗಿ ವಾಯುಭೂತಿ ಮೊದಲಾದ ಭವಪಂಚಕಂಗಳಂ ಪಂಚಾಣುವ್ರತಂಗಳಂ ಪೇಟಿ ಕೇಳ್ದು ಕೈಕೊಳ್ಗುಮದರ್ಕಾಯುರವಧಿಯುಮಿಂದಿನೊಂದೆ ದಿವಸಮದುಕಾರಣದಿಂ.

ನಿನ್ನೊಡವುಟ್ಟಿ ನಿನ್ನೊಡನೆ ಶಾಸ್ತ್ರವಿಶಾರದನಾಗಿಯುಂ ಸ್ವಮಾ ।
ನೋನ್ನತಚಿತ್ತನಾಗಿ ಋಷಿದೂಷಕನಾದುದು ಕಾಲಲಬ್ಧಿ ಸಾ ।
ರ್ವನ್ನೆವರಂ ಭವಾಟವಿಗಳೊಳ್ ದುರಿತಾನಳನಟ್ಟಿ ಬೆಂದನಂ ।
ನಿನ್ನ ವಚಸ್ಸುಧಾರಸ ಸುವರ್ಷದಿನಾಱಿಸು ವಾಯುಭೂತಿಯಂ ॥ ೨೩ ॥

ವ॥ ಎಂಬುದುಂ ಮಹಾಪ್ರಸಾದಮೆಂದಾ ದ್ವಿತೀಯಮುನೀಶ್ವರನಗ್ರಮುನೀಶ್ವರಾದೇಶದಿಂ ನಂದನವನೋದ್ದೇಶದೊಳಿರ್ದ ಜನ್ಮಾಂಧಕಿಯಲ್ಲಿಗೆ ಬಂದು ಮುಂದೆ ನಿಂದು.

ನಿಯತಂ ಭಾವಿಸು ಚಿತ್ತದೊಳ್ ಬೆದಱದೊಲ್ದಾರಯ್ದು ಕೇಳಗ್ನಿಭೂ ।
ತಿಯೆ ನಾನಗ್ರಜನೆಂ ಕನೀಯನೆ ಕಳಾಸಂಪನ್ನನೈ ವಾಯುಭೂ ।
ತಿಯೆ ಯೋಗೀಂದ್ರರನಂದಕಾರಣದೆ ಬಯ್ದಾ ದೋಷದಿಂ ದುಃಖಭಾ ।
ಗಿಯೆ ನೀಂ ಮುೞುಗಿದೆ ಘೋರಸಂಸರಣ ಪಾರಾವಾರಗಂಭೀರದೊಳ್ ॥ ೨೪ ॥

ಜನನಾಥಂ ಪಿತೃಸಾಯೆ ನಮ್ಮನಪದಸ್ಥರ್ಮಾಡಿ ಬೋಡಾದುದಂ ।
ಜನನೀಯುಗ್ರಜನಲ್ಲಿಗೆಯ್ದಿ ಬಹುಶಾಸ್ತ್ರಾರ್ಥೋಕ್ತಿಯಂ ಕಲ್ತುದಂ ।
ಪನಿಗೊಂಡುಂಡುದನೋದಿ ಬಂದೊಡರಸಂ ಮಂತ್ರಿತ್ವಮಂ ಕೊಟ್ಟುದಂ ।
ನೆನೆವೋ [1]ಮಾವನ[1]ರೂಪುಗಂಡು ಕಡುಪಿಂ ನೀಂ ಕಾಯ್ದುದಂ ಬಯ್ದುದಂ॥ ೨೫ ॥

ಬೋಧನಿರಾಕೃತಿಯಿಂ ಭವ ।
ಬಾಧಾಪೀಡಿತಶರೀರಿಯಾದೈ ಗುರುಸಂ ।
ಬೋಧನೆಯಿಂ ನಿನ್ನಂ ಪ್ರತಿ ।
ಬೋಧಿಸಲಾಂ ಬಂದೆನಗ್ನಿಭೂತಿಯನಱವೋ ॥ ೨೬ ॥

ಅಕ್ಕರ॥ ಮುಳಿಸಿಂ ನೀನಂದು ಮುನಿಪರಂ ಪೞದೊಡೆ ಮೆಯ್ಯೊಳೌದುಂಬರ
ಕುಷ್ಠಂ ಪುಟ್ಟಿ। ಪುೞತು ನಾರುಗಿದು ಕಾಶಂಬಿಯೊಳ್ ಸತ್ತಲ್ಲಿ ಬೆಳ್ಗತ್ತೆಯಾಗಿಪುಟ್ಟಿ।
ಕೞದು ಮತ್ತಮಾ ಪುರದೊಳ್ ಪೇಪಂದಿಯಾಗಿ ಬಂದಲ್ಲಿ ನಾಯಾಗಿ ಪುಟ್ಟಿ।
ಬೞಕೆ ನೀಳಂಗಂ ಕಾಶಂಬಿಗಂ ಪುಟ್ಟಿ ಮಗಳೆ ನೀನಿಂತು ಮಾದಂಗಿಯಾದೈ॥ ೨೭ ॥

---

1 ಮಾನವ (ಕ)

ಮುನಿಪತಿಯನಂದು ನೀಂ ಕೆ ।
ಮ್ಮನೆ ಮುಳಿಸಿನೊಳೆಯ್ದೆ ಬಯ್ದು ಪಾಪದ ಫಲದಿಂ ।
ದಿನಿವಿರಿದು ದುಃಖಮಂ ನೆ ।
ಟ್ಟನೆಯ್ದಿದ್ದೈ ಮಾನಗರ್ವಮೇನಾಗಿಸದೋ ॥ ೨೮ ॥

ಅನಿತುಮಹಾಸ್ಪದಕ್ಕನಿತು ಸದ್ವಿಭವಕ್ಕನಿತೊಂದು ಸಂಪದ
ಕ್ಕನಿತು ವಿಲಾಸದೇಳ್ಗೆಗೆಱೆವಟ್ಟೆನಿಸಿರ್ದು ಬೞಿಕ್ಕೆ ಪಾಪದಿಂ
ದಿನಿತು ನಿಕೃಷ್ಟದುರ್ಗತಿಗಳೊಳ್ ಬಲವಂದುದನೀಗಳಾಗಿಯುಂ
ನೆನೆದು ನಿರಾಕುಳಂ ಬಗೆದು ಭಾವಿಸು ನಿನ್ನ ಭವಾಂತರಂಗಳಂ ॥ ೨೯ ॥

ಅದು ಪುಣ್ಯದ ಫಲಮಿದು ಪಾ
ಪದ ಫಲಮದು ಸೌಖ್ಯಮಿದುವೆ ದುಃಖಮದಂತ
ಭ್ಯುದಯಕರಮಿದು ಮಹಾಭ್ಯುದ
ಯದೂರಮೆಂದದುವನಿದುವನಾರಯ್ ಮನದೊಳ್ ॥ ೩೦ ॥

ಎನೆ ಎನೆ ತನ್ನ ಮುನ್ನಿನ ಭವಾಂತರದೊಳ್ ಪುದಿದಿರ್ದ ಮಾತುಗಳ್
ಕನಸಿನ ಮಾರ್ಗಮಾಗಿ ಮನದೊಳ್ ನಿಲೆ ಪುಟ್ಟಿದ ಕಾಲಲಬ್ಧಿಯಿಂ
ವಿನಯಸಮೇತೆಯಾಗಿ ಪೊಡೆವಟ್ಟು ಮನೋಮುದದಿಂದಮಿರ್ಪುದುಂ
ಮುನಿಪತಿ ಪೇಳ್ದನಾ ಕಿಱಿಯವಳ್ಗೆ ಹಿತೋಪದೇಶಮಂ ॥ ೩೧ ॥

ನೆಲಸದ ಯೋನಿ ಮುಟ್ಟದೆಡೆ ಕಾಣದ ಕಾಲಮತತ್ವದೊಳ್ ಮನಂ
ನಿಲಿಸದ ಭಾವಮುಳಿಸದ ಪುದ್ಗಳಮಿಲ್ಲೆನೆ ಕರ್ಮಬಂಧದಿಂ
ಬಲವರುತಿರ್ಪ ಜೂಟಣದ ಗುಂಡಿಗೆಯಂತಿರೆ ಮೂಡಿ ಮುೞ್ಗಿ ಕೋ
ಟಲೆಗೊಳುತುಂ ಭವಾಂಬುನಿಧಿಯೊಳ್ ತಿರಿತಪ್ಪುವು ಜೀವರಾಶಿಗಳ್ ॥ ೩೨ ॥

ವ॥ ಇಂತು ಸಚಿತ್ತಾಚಿತ್ತ ಶೀತೋಷ್ಣ ನಿವೃತಸಂವೃತಾದಿ ಭೇದದಿಂ ಚತು
ರಶೀತಿಲಕ್ಷಪ್ರಮಾಣ ಯೋನಿಮುಖಂಗಳೊಳಾವರ್ತನಪರಿವರ್ತನದಿಂ ದುರಿತವರ್ತಿ
ಯಾಗಿ ನಮೆವ ಸಂಸಾರಿಜೀವಕ್ಕೆ.

ಅಮಿತಾಂಭೋನಿಧಿ ವಾಳುಕಪ್ರಕರಮಂ ಪುಂಜೀಕೃತಂ ಮಾಡಿ ಚೋ ।
ದ್ಯಮದಾಗಲ್ ಮಱಲೊಂದನಲ್ಲಿ ಕುಱಿಪಂ ಮಾಡಿಟ್ಟು ಚೈರಂತನ ।
ಕ್ರಮದಿಂದಾ ಮಣಲೆಲ್ಲಮಂ ಮಗುಳೆ ಪಾರಾವಾರದೊಳ್ ಪೊಯ್ದು ಮ ।
ತ್ತಮದಂ ಸೋದಿಸಿ ಕಾಣ್ಬವೊಲ್ ನೃಗತಿ ನೋಡಲ್ ನಾಡೆಯುಂ ದುರ್ಲಭಂ ॥

ವ॥ ಅಂತುಮಲ್ಲದೆಯುಂ

ಬೆಳೆದೆಳ್ಳಂ ಬಿರ್ಚಿ ರಾಶಿಸ್ಥಿತಿಯಿನಿರಿಸಿ ತದ್ರಾಶಿಯಂ ಮತ್ತಮೋರಂ ।
ತಳವಟ್ಟೆರ್ದಂದದಿಂದಾ ಕೊದಳಿಯ ಮಣಿಯೊಳ್ ತೀವುತಿರ್ಪಾಗಳುರ್ವೀ ।
ವಲಯಕ್ಕಾಶ್ಚರ್ಯಮಪ್ಪಂದದಿನನುದಿನಮೆಂದಾಗಿಯುಂ ಮುನ್ನಿನಂತಾ ।
ತಿಳಮಾ ಕಾಯೊಳ್ ಕ್ರಮಂದಪ್ಪದೆ ನೆಲಸುವವೊಲ್ ದುರ್ಲಭಂ ಮರ್ತ್ಯಜನ್ಮಂ ॥

ಸಮವಾಯಂ ಮನುಜತ್ವಮಾದೊಡಮಘವ್ಯಾಪಾರದಿಂ ನೀಚಗೋ ।
ತ್ರಮುಮಾಕ್ರಂದನಮುಂ ಕ್ಷುಧಾದಿ ಬಹುದುಃಖೋದ್ರೇಕಮುಂ ಕುತ್ಸಿತ ।
ತ್ವಮುಮುದ್ವೇಗಮುಮಪ್ರಗಲ್ಭತೆಯುಮಲ್ಪಾಯುಷ್ಯಮುಂ ದುರ್ಭಗ ।
ತ್ವಮುಮಾತಂಕಕಳಂಕಮುಂ ಸಮನಿಕುಂ ಸಂಸಾರಿಗವ್ಯಾಕುಲಂ ॥ ೩೫ ॥

ವ॥ ಇಂತಪಾರಾಸಾರ ಸಂಸಾರಕಾಂತಾರದೊಳುಂತು ದುರಿತೊಗ್ರದಾವಾನಳಾ ಟೋಪದಿಂ ಬೆದಬೆದ ಬೆಂದ ಜೀವಕ್ಕೆಂತಾನುಂ ಕ್ಷಯೋಪಶಮನಿಮಿತ್ತದಿಂ ಸದ್ಧರ್ಮಾಮೃತಲವಂ ದೊರೆಕೊಂಡುದಪ್ಪೊಡೆ

ಅನುಲೇಪಾತಿಶಯ ಪ್ರಭಾವದಿನಿತಾಂಗೋಪಾಂಗಮುತ್ಕೋಕಿಲ ।
ಸ್ವನ ಲೀಲಾಲಲಿತೋರುಚಾರುನಿಸದಂ ಶ್ರೀವೃಕ್ಷಸಂಪೂರ್ಣಲಾಂ ।
ಛನವಕ್ಷಂ ಕರಮೊಪ್ಪಿ ತೋರ್ಪ ಧವಳಾಕ್ಷಂ ಶೋಭಿತಾಂಗಂ ಭುಜಾ ।
ನನಮೆಂದಿಂತಿವಗಣ್ಯಪುಣ್ಯಜನಿತಂ ಜೀವಕ್ಕೆ ನಿರ್ವ್ಯಾಕುಲಂ ॥ ೩೬ ॥

ಕರಿತುರಗಾದಿ ವಾಹನಮುಮುತ್ಸವ ಹೇತುಕಮಪ್ಪ ಛತ್ರ ಚಾ ।
ಮರ ಪರಿಶೋಭಿತಾತಿಶಯಮುಂ ಭುವನಸ್ತುತಮಪ್ಪ ಕೀರ್ತಿಯುಂ ।
ನಿರುಪಮ ಮೂರ್ತಿಯುಂ ಸಮುಚಿತಾಸ್ಪದಮುಂ ಮಹಿಮಾವಿಲಾಸಮುಂ
ನರರ್ಗೆ ಸಮಂತು ಪೂರ್ವಕೃತ ಪುಣ್ಯದಿನಪ್ಪುದುದಿದಾವ ವಿಸ್ಮಯಂ ॥ ೩೭ ॥

ಆದಱಿಂ ನೀನಾಪ್ತಾಗಮ ।
ಪದಾರ್ಥ ಸಮ್ಯಕ್ತ್ವ ಮಾರ್ಗಮಂ ಕೇಳ್ದು ಮನೋ ॥
ಮುದದಿಂ ಕೈಕೊಳ್ ನಿನಗದು ।
ತುದಿಯೊಳ್ ಮಾಡುಗುಮನಂತ ಮುಕ್ತಿಶ್ರೀಯಂ ॥ ೩೮ ॥

ಮಾತೇನುದ್ಘಾತ ದೋಷಪ್ರಕರ ರಹಿತನೆನಿಪನಾಪ್ತಂ ತದಾಪ್ತಾನನಪ್ರೋ ।
ದ್ಭೂತಂ ಸಿದ್ಧಾಂತಮಾರ್ಗಂ ತದುವಿರಚನೆ ಸದ್ಧರ್ಮಮಾ ಧರ್ಮಮುಂ ಹಿಂ ।
ಸಾತೀತಂ ತದ್ದಯಾಮೂಲಮುಮುಪಶಮ ಧರ್ಮಾನುರಾಗಾನುತತ್ಪ್ರೋ ।
ಪೇತಂ ತತ್ಸಿದ್ಧಮಾಗಿರ್ದುದು ನಿರುಪಮ ಸಮ್ಯಕ್ತ್ವ ಸನ್ಮಾರ್ಗ ಮಾರ್ಗಂ ॥೩೯ ॥

ಕೊಲ್ಲದುದು ಪುಸಿಯದುದು ಕಳ ।
ವಿಲ್ಲದುದುಂ ತ್ರಿಕರಣತ್ವದಿಂ ಪಾದರದೊಳ್ ॥
ಸಲ್ಲದುದು ಕಾಂಕ್ಷೆಯೊಳ್ ತಱಿ ।
ಸಲ್ಲದುದೆಂದಯ್ದಣುಬ್ರತಂ ಜಿನಮತದೊಳ್ ॥ ೪೦ ॥

ಮದ್ಯ ಮಧು ಮಾಂಸಮೆಂಬಿವ ।
ನಾದ್ಯಂತಂ ತೊಱೆವುದಾವತೆಱದಿಂದಂ ಸಾ ॥
ವದ್ಯಮಣಮಾಗದಿರ್ಪುದು ।
ಸದ್ಯೋಗದೊಳಿರ್ಪುದಿದುವೆ ಪುಣ್ಯಮಗಣ್ಯಂ ॥ ೪೧ ॥

ವ॥ ಎಂದು ಪರಮಶ್ರಾವಕ ವ್ರತಪ್ರಾಸಾದಕ್ಕಧಿಷ್ಠಾನ ಸೋಪಾನ ಪಂಕ್ತಿ
ಗಳಾಗಿ ನೆಗೞ್ತೆವೆತ್ತ

ವಿಮಳಾಣುಬ್ರತ ಪಂಚಕ ।
ಮುಮಂತೆ ಮಧುಮದ್ಯ ವಿವಿಧ ಮಾಂಸ ಪರಿತ್ಯಾ ॥
ಗಮುಮೆಂಬ ಮೂಲಗುಣಮಂ ।
ಟುಮನಾ ಮುನಿಪುಂಗವಂ ಪ್ರಸಾದಂಗೆಯ್ದಂ ॥ ೪೨ ॥

ಕ್ರಮದಿಂದಾ ಜೀವಘಾತಾನೃತವಚನಪರಾರ್ಥಾಪಹಾರಾನ್ಯನಾರೀ ।
ಗಮು ಬಹ್ವಾರಂಭಪಾರಿಗ್ರಹಮೆನಿಸುವವಯ್ದುಂ ಮಹಾಪಾತಕಂಗ ।
ಳ್ಗೆ ಮನಂದಂದೊಂಗೆ ಸಂಸೃತ್ಯುದಧಿತಟಮದಾಸನ್ನಮಾ – ᑌ – – ।
ಳಮಹೋಗ್ರಗ್ರಾಹವೈಸಾರಿಣ ಮಕರಜಳೂಕಾನನಾಪಾರದುಃಖಂ ॥ ೪೩ ॥

ಕೊಲಿಸುವ ಕೊಲ್ವ ಶಾಠ್ಯಪರವಾಗಿಸುವಾಗುವ ಕಳ್ವ ಕಳ್ವರೊಳ್ ।
ಸಲೆ ಪುದುಗೊಳ್ವ ಪಾದರಮನಾಡಿಸುವಾಡುವ ಕಾಂಕ್ಷೆಯೊಳ್ ಮನಂ ।
ಸಲಿಸುವ ಸ್ವಲ್ಪಪಾಪಪರನುಂ ಶಠನುಂ ಖಳನುಂ ಕೃತಘ್ನನುಂ ।
ಕಲುಷಿಯುಮಾಬ್ಬುಮುಗ್ರನರಕಾಬ್ಧಿಗಭೀರಮನೆಯ್ದುವನ್ನೆಗಂ ॥ ೪೪ ॥

ವ॥ ಎಂದು ಸಂಕ್ಷೇಪದಿಂ ಸನ್ಮಾರ್ಗಸ್ವರೂಪಣನಿರೂಪಣಂಗೆಯ್ದು ವಿಷಮ ವಿಷಧರವಿಷಘಾತದಿಂ ನಿನಗಾಯುರವಧಿಯುಮಿಂದಿನನಿತೆ, ದರ್ಶನವಿಶುದ್ಧಿಯಾಗೆಂದು ಪರಮತಪಸ್ವಿ ಪರಸಿ ಗುರುಸಮೇತಂ ಸದ್ಧರ್ಮಕ್ಷೇತ್ರಂಗಳೊಳ್ ವಿಹಾರಿಸುತ್ತಿರ್ದರಿತ್ತಲಾ ಕೂಸುಮಣುಬ್ರತಧಾರಿಯಾಗಿ ಬರ್ಪ ನೆರವಿಯ ರಭಸಮುಂ ಭೋಂಕನೆ ಕೇಳ್ದಿದೇನೆಂದು [ಬೆಸಗೊಳೆ] ತನ್ನೊಡನಾಡಿಗಳಪ್ಪ ಚಂಡಾಲಶಿಶುಗಳಾ ಪ್ರಪಂಚಮೆಲ್ಲಮನವರಂ ಬೆಸಗೊಂಡು ಬಂದೀ ಚಂಪಾಪುರವರೇಶ್ವರನಪ್ಪ ಚಂದ್ರವಾಹನನರೇಶ್ವರನ ಪುರೋಹಿತಂ ನಾಗಶರ್ಮನಾತನ ಭಾರ್ಯೆ ತ್ರಿವೇದಿಯುಮಗಣ್ಯಪುಣ್ಯಲಕ್ಷ್ಮೀಭಾಜನರಾಗಿಯುಂ ಸಂತಾನಮಿಲ್ಲದುಬ್ಬೆಗದಿಂ ಪುತ್ರಾರ್ಥಿಗಳಾಗಿ ನಾಗಸ್ಥಾನದ ನಾಗರ್ಗೆ ಪರಸಲ್ಪೋದರವರೆಂದು ಪೇಟಿ[3] ಕೇಳ್ದು ಭೋಗಾಸಕ್ತೆಯಾಗಿಸರ್ಪಗಳ್

ಇದಿರೊಳ್ ಪಟ್ಟಿರೆಯಿಕ್ಕುತಿರ್ಪ ಪದದೊಳ್ ಶ್ರೀಬ್ರಹ್ಮಧಾಗ್ರಾಗ್ನಿ ತ ।
ನ್ನದರಾವಾಸಮನುರ್ವುತಿರ್ಪ ಪದದೊಳ್ ದುರ್ಗಂಧಿ ಜಾತ್ಯಂಧೆ ಮೆ ।
ಟ್ಟಿದೊಡಾಗಳ್ಮಳಿಸುಣ್ಮೆ ಪೂಣ್ಮೆ ಗರಳಂ ಕೈಗಣ್ಮೆ ಬಂದೆಯ್ದಿ ಕೊಂ ।
ಡುದು ಕೃಷ್ಣೋರಗನಾ ಮತಂಗಶಿಶುವಂ ಕಾಳೋರಗಂ ಕೊಳ್ವ[1]ವೊಲ್ ॥ ೪೫ ॥

ವ॥ ಆಪ್ರಸ್ತಾವದೊಳ್

ಅಗಣಿತ ಭಾಗಧೇಯಕೃತಮೂಲಗುಣಂಗಳನಂದಣುಬ್ರತಾ ।
ದಿಗಳನನಾಕುಲಂ ಬೆಸಸಿದಂ ಮುನಿಪುಂಗವನಾನವಂ ಮನಂ।
ಬುಗಿಸಿದೆನುರ್ವರಾಧಿಪಪುರೋಹಿತಭಾರ್ಯೆ ಸುತಾರ್ಥಿ ತತ್ರಿವೇ ।
ದಿಗೆ ಮಗಳಪ್ಪೆನಕ್ಕೆ ಫಲಮುಳ್ಳೊಡೆ ನೆಟ್ಟನಣುವ್ರತಂಗಳಾ ॥ ೪೬ ॥

ಸದಮಳಚರಿತರ್ಪೇಳ್ದಂ ।
ದದಿಂದೆ ಸಾವಿಂದೆ ಬಂದುದೆನುತುಂ ಭೋಗಾ ॥
ಸ್ಪದದೊಳ್ ಚಿತ್ತಂ ಬೆಚ್ಚಂ ।
ದದಿಂದೆ ಮನಮಿಟ್ಟವಳ್ ನಿದಾನಂಗೆಯ್ದಳ್ ॥ ೪೭ ॥

ವಿಕಟಾಂಗೋಪಾಂಗೆ ಜಾತ್ಯಂಧಕಿಯೆನಿಸಿದ ಮಾತಂಗಿ ತಾನೆತ್ತಲಾತ್ಯಂ
ತಿಕ ಸದ್ಧರ್ಮೋಪದೇಶಂ ಸಮನಿಸುವುದೆತ್ತಂತೆ ಭೋಗೋಪಭೋಗಾ
ಧಿಕಚಿತ್ತಂ ಸಾವುದೆತ್ತಾರಯಲಣಮುಮಸಾಧಾರಣಂ ಭಾವಿಸಲ್ಕಾ
ತುಕಮೇನಂ ಮಾಡದೇನಂ ದೊರೆಕೊಳಿಸದೊ ಸಂಸಾರಿಗೇನೇನನೇನಂ ॥ ೪೮ ॥

ವ॥ ಇಂತು ವಿಗತಜೀವಿತೆಯಾಗಿ ನಿದಾನಫಲದಿಂದಾ ತ್ರಿವೇದಿಯ ಗರ್ಭದೊಳ್ ನೆಲಸುವುದುಂ

---
1. ಲ್ವ (ಗ)

ನವಮಾಸವಿರಾಮದೊಳ ।
ಬ್ಜವದನೆ ಶುಭದಿನಮುಹೂರ್ತದೊಳ್ ಮಂಗಳ ತೂ ।
ರ್ಯನಿನಾದಮೆಸೆಯಲಿಂತಾ ।
ಶ್ರೀವೇದಿ ಪಡೆದಳ್ಸುರೂಪವತಿಯಂ ಸುತೆಯಂ ॥ ೪೯ ॥

ನಾಗಸ್ಥಾನದ ಶಂಬರ ।
ನಾಗಕುಮಾರಂಗೆ ಪರಸಿ ಪಡೆದೆಂ ಪೆಱದೇಂ ।
ಪೋಗೆಂದು ನಾಗಶರ್ಮಂ
ನಾಗಶ್ರೀಯೆಂದು ನಾಮಕರಣಂ ಗೆಯ್ದಂ ॥ ೫೦ ॥

ವ॥ ಅಂತು ಜಾತಕರ್ಮ ನಾಮಕರಣಾನ್ನಪ್ರಾಶನಚೌಲೋಪನಯನಾದಿ ಸಮುಚಿತಕ್ರಿಯೆಗಳಿಂ ಕ್ರಿಯೆವಡೆದು ವಿಶುದ್ಧರತ್ನದಂತಾ ಸ್ತ್ರೀರತ್ನಂ ಕ್ರಮಕ್ರಮದಿಂ ಬಳೆಯೆವಳೆಯೆ

ರಗಳೆ ॥ ಲಲಿತೆಯ ಶ್ರೀಪದತಳಗಳಶೋಕೆಯ
ತಳಿರಂ ಪೋಲ್ವುವು ಭಾವಿಪೊಡಾಕೆಯ
ಚರಣಾಂಗುಳಿಗಳಮರ್ಕೆಯಿನಪ್ಪಿದ
ಸುರದಂಪತಿಗಳ್[1] ಪೋಲ್ವೆಯನೊಪ್ಪಿದ[1]
ವಿಳಿಲೆಯ ಪದಯುಗನಖದಾಕೃತಿಗಳ್
[2]ಕುಳಿಶಾಭ್ರಕನಿಕರುಂ[2]ಬಾಕೃತಿಗಳ್
ಕೂರ್ಮೋನ್ನತಮೆನಿಸಿರ್ದ ಪದಂಗಳ್
ನರ್ಮಮನಾ[3]ದರಿ[3]ಸಿದವು[4]ಮಡ[4]ಂಗಳ್
ಪರಡು ನಿಗೂಢಂ ಲಲಿತ ಲತಾಂಗಿಯ
ವರ ಜಂಘಾಯುಗಲಂಗಳ ಭಂಗಿಯ
ನಱಿಯೆಂ ಪೊಗೞಲ್ ನೆಕ್ಕೊರವಟ್ಟೆಯ
ತೆಱನೇನಲ್ಲದೆ ಬಣ್ಣಿಪ ಬಟ್ಟೆಯ

---

1 ಪೊಲ್ಪಿಯನೊಪ್ಪಿದ 2 ಕುಳಿಶಾಭ್ರ ನಿಕುರುಂಬಾಕೃತಿಗಳು 3 ಜರೆ 4 ಮರ

ನಂಭೋಜಾನನೆಯೂರು ಯುಗಂಗಳ್
ರಂಭಾಸ್ತಂಭ ಯಟಗ ಪ್ರತಿಮಂಗಳ್
ವನಿತೆಯ ಪುಳಿನ ನಿತಂಬೋದ್ದೇಶಂ
ಮನಸಿಜಮದಗಜ ಕುಂಭನಿಕಾಶಂ
ಲಾವಣ್ಯಾಂಬುರಸದ್ರವರೂಪಂ
ಭಾವಿಪೊಡಾಕೆಯ ನಾಭೀಕೂಪಂ
ನೋಡೆ ಕುಮಾರಿಯ ಬಳ್ಕುವ ಮಧ್ಯಂ
ನಾಡೆ ಮನೋಜ್ಞಂ ಪೊಗಟಲಸಾಧ್ಯಂ
ಕುಚಯುಗವಿಲ್ಲದೆ ಶೋಭಿಪ ವಕ್ಷಂ
...................................

...................................
ಸುಲಲಿತಮಾಗಿರೆ ಶೀವಿದಕಕ್ಷಂ
ಸುದತಿಯ ತೊಳಗುವ ತೋಳವೊದಲ್ಗಳ್
ಮದನವಿಲಾಸದ ವೊತ್ತವೊದಲ್ಗಳ್
ಲಲನಾರತ್ನದ ಬಾಹುಯುಗಂಗಳ್
ಲಲಿತ ಲತಾಶಾಖಾ ಸದೃಶಂಗಳ್
ಸುರುಚಿರತರ ಮೃದುಪಲ್ಲವದಂತಿರೆ
ಕರತಳವೊಪ್ಪುಗುವೆಃಸೆದೋರಂತಿರೆ
ಕರಶಾಖೆಗಳತನುಕ್ಸರದಂದಂ
ಕರನಖಮುವು ಕೇದಗೆಯೆಸಟಿಂದಂ
ವಸುಧಾಮರವರ ಕನ್ನೆಯ ಕಂಧರ
ಮುಸದೃಶಮುದು ಕಂಬುಪ್ರತಿಬಂಧುರ
ಮವಳ ಪೊಳೆವ ರುಚಿರೋಷ್ಠಾಳಂಕೃತಿ
ಪವಳದ ದಳದಂತಾರಕ್ತಾಕೃತಿ
ದಂತಪಂಕ್ತಿ ದಾಡಿಮ ಬೀಜಾಕೃತಿ

ಕಾಂತ ಕಪೋಲಂ ನವಮುಕುರಾಕೃತಿ
ಮೂಗು ಸುರಭಿಕರ ಪರಿಮಳದಂದಮೆ
ನಾಗಸಂಪಗೆಯು ಬಿರಿಮುಗುಳಂದಮೆ
ಜಳಜದಳಾಕ್ಷಿಯು ಕಣ್ಮಲರಂದಂ
ಪೊಳೆಜಳ ಮೀಂಗಳ ಪೊಣರ್ಗಳ ಚಂದಂ
ಭ್ರೂಲತಿಕೆಗಳಳ್ಳಿಱಿವುವು ಕನ್ನೆಯ
ಲೀಲಾಲಸ ಗಜಗಮನದ ಕನ್ನೆಯ
ಅರವಿಂದಾಸ್ಯೆಯ ನೊಸಲಸಮಾನಂ
ನಿರುಪಮಮರ್ಧೇಂದು ಪ್ರತಿಮಾನಂ
ಕಿವಿಯ ಪಾಲೆ ನೀಲಾಂಬುಜನಾಳಮ
ನವಟಯ್ಸುಗುಮಂಗಜನಿಂದೋಳಮ
ನಳಿಕುಳ ಸನ್ನಿಭ ಮನಸಿಜಗೋಳಕ
ವಿಳಸದಳಂಕೃತಿ ಕುಟಿಳಚಳಾಳಕ
ಮಂಗಜ ಮಕರ ಪತಾಕಾಭಾಸಂ
ತುಂಗಕುಚೋದ್ಬಂಧನ ವಿನ್ಯಾಸಂ
ದೊರೆಗೆ ವಾರದೀಕೆಗೆ ಕನ್ಯಾತತಿ
ಕರಮೆ ಬಣ್ಣಿಸಲ್ಕಱಿಯಂ ಫಣಿಪತಿ
ವಿಭವ ವಿಲಾಸನಿವಾಸದ ಭಂಗಿಯ
ನಭಿನವಕೋಮಳಕನಕಲತಾಂಗಿಯ
ನಗಣಿತಗುಣಿಯಂ ವಿಬುಧನಿಕಾಯಂ
ಪೊಗಟಿಲ್ ನೆಱೆವರೆ ನಾಗಶ್ರೀಯಂ ॥ ೫೧ ॥

ಕಮಳಂ ಪಗಲೊಳ್ [ಶಶಿ] ಬಿಂ
ಬವಿರುಳೊಳೆಸೆದಿರ್ಪುವ ಲ್ತೆಯದಱಿಂದಿವಱೊಳ್
ಸಮನೆನಲಕ್ಕುಮೆ ಮದಗಜ
ಗಮನೆಯವಕ್ತ್ರಮನಹರ್ನಿಶಂ ತೊಳಗುವುದಂ ॥ ೫೨ ॥

ನಯನಂ ನೀಳಸರೋಜಭಾಸಿ ರದನಂ ಮುಕ್ತಾಫಳಸ್ಪರ್ಧಿ ಬಾ
ಹುಯುಗಂ ಮನ್ಮಥಪಾಶಹಾಸಿ ನಿಟಿಳಂ ರುಂದ್ರಾರ್ಧಚಂದ್ರಾಭಮಾ
ರಯೆ ದಂತಾವರಣಂ ಪ್ರವಾಳರುಚಿರಚ್ಛಾಯಾರುಣಾಕ್ಷೇಪಿ ನಿ
ರ್ಣಯಭಾವಂ ರಸಭಾವನೇದೊರೆ ಸುರೂಪಾಶ್ಚರ್ಯಮಾ ಕನ್ನೆಯಾ ॥ ೫೩ ॥

ಮನಸಿಜನಂಬು ಮನ್ಮಥನ ಕಯ್ಪಿಡಿ ಕಾಮನ ಕೈದು ಕಂತುರಾ।
ಜನ ಕರವಾಳ್ ಮನೋಭವನ ವಿದ್ಯೆ ಮನೋಜನಟ್ಟಮಿಕ್ಷುಚಾ।
ಪನ ಧನು ಮೀನಕೇತನನ ಕೇತನಮಂಗಜಚಕ್ರಿಯ ಚಕ್ರಮೆಂಬುದಂ।
ತಿನಿತನೆನಲ್ಕೆ ಬಲ್ಲೆನಱಿಯೆಂ ಪೊಗೞಲ್ ದ್ವಿಜರಾಜ ಕನ್ಯೆಯಂ ॥ ೫೪ ॥

ವಿಕಸಿತಶಾತಕುಂಭಸರಸೀರುಹವಕ್ತ್ರೆಯನುನ್ಮದಾಳಿನೀ
ಚಿಕುರೆಯನಂಗಜಾತಮದವಾರಣಯಾನ ಸಮಾನ ಯಾನೆಯಂ
ಸುಕರನಿದಾನೆಯಂ ಖಚರದಾರಕಿ ನಾಗಕುಮಾರಿ ದಿವ್ಯಕ
ನ್ಯಕೆಯೆನಲಲ್ಲದಾನಱಿಯೆನಂತೆನಲುಂತೆನಲಾ ಮೃಗಾಕ್ಷಿಯಂ ॥ ೫೫ ॥

ಬರೆವವರಿಲ್ಲ ಪೋಲ್ವೆ ಬರೆಯಲ್ ಮೃದುಕರ್ಮದೊಳೋಜೆವೆತ್ತು ಕಂ
ಡರಿಸುವ ವಿಶ್ವಕರ್ಮನೆಣೆಯಾಗಿರೆ ಕಂಡರಿಸಲ್ವಿಳಾಸದಿಂ
ಕರುವನೊಡರ್ಚ್ಚಿ ಬರ್ಚಿಸುವ ಬಲ್ಮೆಗೆ ಬೀಗುವ ಚೀರಘಟ್ಟಿ ತಾಂ
ಸರಿಯೆನಿಪಂದದಿಂ ಕರುವಿಡಲ್ ನೆಱೆಯಂ ದ್ವಿಜರಾಜಕನ್ನೆಯಂ ॥ ೫೬ ॥

ವದನಶ್ರೀವಿಭ್ರಮಂ ನಿರ್ಮಳಹಿಮಕರನಾಕಾರಮುಕ್ಷಿದ್ವಯಂ ಕಂ
ಜದಳಾಕಾರಂ ಲಸದ್ಭ್ರೂ ಮನಸಿಜಧನುರಾಕಾರಮತ್ಯಂತಶೋಭಾ
ಸ್ಪದಲೀಲಾಭಾಸುರಾಂಗಂ ಮೃದುಲಲಿತಲತಾಕಾರಮಾರಯ್ವೊಡೆಂದಂ
ದದಿನೇಕಾಕಾರೆಯಲ್ಲಳ್ ದ್ವಿಜಸುತೆ ಗುಣಿಯಾದಂದಮಾಶ್ಚರ್ಯಭೂತಂ ॥ ೫೭ ॥

ಸುರ ಗಂಧರ್ವ ಸುಪರ್ಣ ಕಿನ್ನರ ಖಗ ಸ್ತ್ರೀಸದ್ಮದೊಳ್ಮುನ್ನಮಾ
ದೊರೊಳಿನ್ನಪ್ಪರೊಳೀಗಳುಳ್ಳವರೊಳಿಲ್ಲೀ ಹಾವವೀ ಭಾವಮಿಾ
ಪರಿಜೀ ವಿಭ್ರಮಮಿಾ ವಿಲಾಸಮೆಸೆವೀ ಸೌಂದರ್ಯಮೆಂಬನ್ನಮಿಾ
ಧರಣೀಚಕ್ರದೊಳೇಂ ಜಸಂಬಡೆದಳೋ ಬೇಱೊಂದು ಸೌಂದರ್ಯದಿಂ || ೫೮ ||

ಸುರಕನ್ಯಕೆ ಮನುಜಸತಿ |
ವರಮಾಕಾರತ್ವಮಂ ಪ್ರಯೋಗಿಸಿ ದಿವದಿಂ (?) |
ಧರೆಗವತರಿಸಿದಳೆಂದೀ
ಧರೆ ಪೊಗಳ್ವುದು ರುಚಿರಪಕ್ವಬಿಂಬಾಧರೆಯಾ || ೫೯ ||

ಒದವಿ ಬಸಂತದೊಳ್ಬಯಸಿದಂದದ ತೆಂಬೆಲರೊಂದು ಶೀಟಮಿ
ಲ್ಲದ ಸಹಕಾರವಲ್ಲರಿಯ ತೋರ್ಕೆಗವೊಪ್ಪುವ ಭೃಂಗಸಂಗಮಿ
ಲ್ಲದ ನವಪದ್ಮಿನೀಮುಕುಳದಿಕ್ಕೆಗಮೆನೆ ನೆಱೆಯಾಗಿ ಶೋಭೆವೆತ್ತುದೊ
ಪರಿಶೋಭೆವೆತ್ತಿರೆ ವಿಲಾಸದ ವಿಭ್ರಮುದೇೞ್ಗೆ ಕನ್ನೆಯಾ || ೬೦ ||

ವ|| ಒಂದು ದಿವಸಮಾ ಕನ್ನೆ ತನ್ನೊಡನಾಡಿಗಳಪ್ಪ ಕನ್ನೆಯರ್ವೆರಸು ಮಹಾವಿಭೂತಿಯಿನಾ ನಾಗಸ್ಥಾನಕ್ಕೆ ವಂದು ನಾಗರನರ್ಚಿಸುವಲ್ಲಿ

ಕಲಶಂ ಜಾಗಂ ಧ್ವಜಂ ಕನ್ನಡಿ ಗುಡಿ ಸುಮನೋಮಾಳೆ ಶುಭ್ರಾಕ್ಷತಂ ಪೊಂ |
ಬಳೆ ತೂರ್ಯಂ ತೋರಣಂ ಬೆಳ್ಗೊಡೆ ಚಮರರುಹಂ ಚಂದನಂ ಸ್ವಸ್ತಿಕಂ ಸು |
ಲ್ವಮೆಂಬೀ ಮಂಗಳದ್ರವ್ಯದ ರಚನೆಯಿನಂದೇಂ ಮನಂಗೊಂಡುದೋ ಮಂ |
ಗಲಶೋಭಾ ಭೂಷಣಾಂಶು ಪ್ರಸರಮೆಸೆವಿನಂ ಧನ್ಯ ಕನ್ಯಾಕದಂಬಂ || ೬೧ ||

ವ || ಅನ್ನೆಗಮಿತ್ತಲಾ ಸೂರ್ಯಮಿತ್ರಾಚಾರ್ಯರಗ್ನಿ ಭೂತಿಋಷಿವೆರಸಿ ನಾನಾ ಜನಪದಂಗಳಂ ವಿಹಾರಿಸಿ ಮತ್ತಮಾ ಚಂಪಾಪುರಕ್ಕೆವಂದು

ತರದಿಂ ತಳ್ತಿರ್ದ ನದ್ಧ ಧ್ವಜ ಸಮುದಯುಮಂ ಚಿತ್ರಶೋಭಾಭಿರಾಮಾ ।
ಜಿರಮಂ ಪ್ರೋತ್ತುಂಗಗೋದಾಮುಖಮನನುಪಮಾವೇಷ್ಟಿತೋದ್ಯಾನಮಂ ಶಂ।
ಬರನಾಗಸ್ಥಾನಮಂ ಪ್ರಕ್ಷುಭಿತ ಬಹುಜನ ಧ್ವಾನಮಂ ಪೊಕ್ಕನಾಶಾಂ ।
ಬರವಿಖ್ಯಾತಪ್ರಶಂಸಂ ಪರಮಜಿನಮತಾಂಭೋಜಿನೀರಾಜಹಂಸಂ || ೬೨ ||

ಇದು ಸಮಸ್ತವಿನೇಯ ಜನವಿನುತ ಶ್ರೀವರ್ಧಮಾನಮುನೀಂದ್ರ ವಂದ್ಯ
ಪರಮಜಿನೇಂದ್ರ ಶ್ರೀಪಾದಪದ್ಮವರಪ್ರಸಾದೋತ್ಪನ್ನ
ಸಹಜಕವೀಶ್ವರ ಶ್ರೀಶಾಂತಿನಾಥಪ್ರಣೀತಮಪ್ಪ
ಸುಕುಮಾರಚರಿತದೊಳ್ ನಾಗಶ್ರೀ
ರೂಪವರ್ಣನಂ ಪಂಚಮಾಶ್ವಾಸಂ

---

# ಷಷ್ಠಾಶ್ವಾಸಂ

ಶ್ರೀಯುಂ ಪದಾಬ್ಜದೊಳ್ ವಾಕ್ ।
ಶ್ರೀಯುಂ ಮುಖಕಮಲದೊಳ್ ವಿರಾಜಿತಕೀರ್ತಿ ॥
ಶ್ರೀಯುಂ ದಿಕ್ತಟದೊಳ್ ತಳೆ ।
ದಾ ಯತಿವೃಷಭಂ ಸರಸ್ವತೀಮುಖಮುಕುರಂ ॥ ೧ ॥

ವ॥ ನಿರ್ವರ್ತಿತ ಪಂಥಾತಿಚಾರನಿಯಮನಾಗಿರ್ಪುದುಂ ಕನ್ಯಾರತ್ನಸಂಸ್ತ್ರಾ ಯಕ್ಕೆ ನಾಯಕರತ್ನಮೆನಿಸಿದ ನಾಗಶ್ರೀಕನ್ಯಕೆ

ಗುರುಚರಣಯುಗಲಭಕ್ತಿಯು ।
ಭರದಿಂದಿರ್ದಗ್ನಿಭೂತಿಮುನಿಪನನತ್ಯಾ ॥
ದರದಿಂದೆ ನೋಡಿ ಜಾತಿ ।
ಸ್ಮರೆಯಾದಳ್ ಪುಣ್ಯವಶದಿನಾರೇನಾಗರ್ ॥ ೨ ॥

ವ॥ ಅಂತು ಮುನ್ನಿನಭವದೊಳ್ ತನ್ನಂ ಪ್ರತಿಬೋಧಿಸಿದ ಮಹಾಪುರುಷನ ಪ್ಪುದನಱಿದು

ಅವರ ಚರಣಾಬ್ಜಯುಗಳೈ ।
ಕ್ಯವನತೆಯಾಗಿರ್ದ ಕನ್ನೆಯುಂ ಮಾನ್ಯೆಯನಂ ॥
ದವಳೋಕಿಪುದುಂ ವ್ಯಾಮೋ ।
ಹವಶೀಕೃತನಾದನಗ್ನಿಭೂತಿಮುನೀಂದ್ರಂ ॥ ೩ ॥

ವ॥ ಅಂತತಿ ಸ್ನೇಹಮುಂ ವ್ಯಾಮೋಹಮುಂ ಕೈಮಿಗೆ ಮನ್ಯುಮಿಕ್ಕು ಭಟ್ಟಾರಕ ರ ಮೊಗಮಂ ನೋಡಿ

ಎಮಗೀ ಕೂಸಂ ಕಾಣಲೊ ।
ಡಮತಿಸ್ನೇಹಂ ಮನಕ್ಕೆ ತೀಡಿದಪುದು ಬೋ ॥
ಧಮರೀಚಿಯಿನೆನ್ನ ಮನಸ್ತ ।
ಮಮಂ ಬಿಡೆ ಬಿದಱಿಸಮಳ ಸಜ್ಞಾನನಿಧೀ ॥ ೪ ॥

ವ|| ಎಂಬುದುಮಾ ಮಹಾಮುನೀಶ್ವರನುಂ ತದೀಯ ಭವಾವಳೀ ಸಂಬಂದ ಮಂ ಪೂರ್ವೋಕ್ತಕ್ರಮದಿಂ ಸವಿಸ್ತರಮಾಗೆ ತಿಳಿಯೆ ಪೇೞ್ದಾಗಳ್

ತರದಿಂದಾಲಿಸಿ ವಾಯುಭೂತಿ ಮೊದಲಾಗುತ್ತಿರ್ದ ಜನ್ಮೋತ್ಕರಾಂ ।
ತರ ವೃತ್ತಾಂತಮನೆಯ್ದೆ ಕೇಳ್ದು ಮನದೊಳ್ ತದ್ವೃತ್ತಕಂ ಶಾಸನಂ ।
ಬರೆದಿರ್ದಂತೆ ಜಲಕ್ಕನಾಗೆ ಮುದದಿಂದಾ ಕನ್ಯೆ ಕಯ್ಗಣ್ಮಿದಾ ।
ದರದಿಂ ನಿರ್ಭರಭಕ್ತಿಯಿಂದೆಱಗಿದಳ್ ಯೋಗೀಂದ್ರಪಾದಾಬ್ಜದೊಳ್ || ೫ ||

ವ || ಅಂತೆಱಗಿ ಪೊಡೆವಟ್ಟು ನಾಗಶ್ರೀಕನ್ಯಕೆಯ ಮನದೊಳಾದುಪಶಮ ಮನುಪಲಕ್ಷಿಸಿ ಸಂಸಾರಸ್ವರೂಪಮನಿಂತೆಂದು ಬೆಸಸಿದರ್

ಪ್ರಕಟಿತ ಜಿನಪ್ರವಚನ ।
ಪ್ರಕಾರದೊಳ್ ಸಾರಘೋರ ಸಂಸಾರಂ ಕೌ ||
ತುಕರೂಪಂ ದ್ರವ್ಯ ಕ್ಷೇ ।
ತ್ರ ಕಾಲ ಭವ ಭಾವಭೇದದಿಂ ಪಂಚವಿಧಂ || ೬ ||

ವ|| ಅವಱೊಳಗೆ ಷಟ್ಪರ್ಯಾಪ್ತಿಯೋಗ್ಯಪುದ್ಗಲದ್ರವ್ಯಂಗಳನೊಂದು ಜೀವ ನೊಂದು ಸಮಯದೊಳ್ ಕೈಕೊಂಡು ದ್ವಿತೀಯಾದಿ ಸಮಯಂಗಳೊಳ್ ಮುನ್ನೆ ಕೊಂಡ ಪುದ್ಗಲಂಗಳಂ ಬಿಸುಟ್ಟು ಪೆಱವುಂ ಸ್ನಿಗ್ಧರೂಕ್ಷಾದಿ ವಿಕಲ್ಪಂಗಳಂ ಜನ್ಮ ಜನ್ಮಾಂತರಂಗಳೊಳ್ ಕೊಳುತ್ತುಮಿಂತು ಮೂಱುಂ ಲೋಕದೊಳುಳ್ಳ ರೂಪದ್ರವ್ಯಂ ಗಳೆಲ್ಲಮಂ ನಿರವಶೇಷಮಾಗೆ ಕೈಕೊಳ್ವುದು ದ್ರವ್ಯಪರಾವರ್ತನಮೆಂಬುದು ಜಗ ತ್ರಯಮಧ್ಯಪ್ರದೇಶದೊಳತೀವ ಜಘನ್ಯಶರೀರಮಂ ಕೈಕೊಂಡು ಪುಟ್ಟಿ ಮತ್ತ ಮಾಯೆಡೆಯೊಳ್ ಪಲವುಂ ಸೂೞ್ ಲಘುಜನ್ಮಾವಗಾಹದಿಂ ಪುಟ್ಟಿ ಸತ್ತು ತದನಂ ತರಮಾಯೆಡೆಗತ್ತಲೇಕೈಕಪ್ರದೇಶೋತ್ತರಮಾಗೆ ಮೂಱುಂ ಲೋಕದ ಸರ್ವಕ್ಷೇ ತ್ರಂಗಳನಿತಱೊಳಮಾ ಮಾರ್ಗದಿಂದೆಯುಡುಗದೆ ಕೂಡಿ ಪುಟ್ಟುವುದು ಕ್ಷೇತ್ರಪ ರಾವರ್ತನಮೆಂಬುದು ಭರತೈರಾವತಕ್ಷೇತ್ರಂಗಳೆಂದುಂ ಕುಂದದೆ ಪರಿವರ್ತಿಸುವು ತ್ಸರ್ಪಿಣ್ಯವಸರ್ಪಿಣೀ ಕಾಲಂಗಳೊಳ್ ತದಾದಿಪ್ರವೇಶಸಮಯದೊಳ್ಪುಟ್ಟಿ ಕಟ್ಟಿದಾಯು ಷ್ಯದ ವಿರಾಮದೊಳ್ ಸತ್ತು ನಾನಾಭ್ರಮಣದಿಂ ಬಂದು ಪೂರ್ವೋಕ್ತ ಸಮಯದ

ತದ್ವಿತೀಯಾದಿ ಸಮಯದೊಳ್ ಪುಟ್ಟುತ್ತುಂ ಸಾವುತ್ತುಮೆರಡುಂ ಕಾಲಮುಮನೀ ಮಾರ್ಗದಿಂ ಸಮಯೋತ್ತರವೃದ್ಧಿಯಿಂ ಪರಿಸಮಾಪ್ತಮಾಗೆ ನೆಱೆಯಿಸುವುದು ಕಾಲಪರಿವರ್ತನಮೆಂಬುದು ಚತುರ್ಗತಿಗಳೊಳಂ ಸರ್ವಜಘನ್ಯಮಪ್ಪಾಯುಷ್ಯ ದೊಳ್ ತೊಡಗಿ ಸಮಯಾದಿಕಾನುಕ್ರಮದಿಂದನೇಕ ಭವಪರ್ಯಾಯ ಪರಿಭ್ರಮಣದಿಂ ಬಂದು ಪುಟ್ಟುತ್ತುಂ ಕಡೆಯೊಳುತ್ಕೃಷ್ಟಾಯುಷ್ಯಮನೆಯ್ದೆ ನೆಱೆಯಿಸುವ ನೆಱವಿ ಭವಪರಿವರ್ತನಮೆಂಬುದು ಮೂಲೋತ್ತರಪ್ರಕೃತಿಗಳೊಳ್ ಸರ್ವಜಘನ್ಯಸ್ಥಿತಿಯಂ ಮೊದಲ್ಗೊಟ್ಟು ತತ್ಸಾದೃಶ್ಯಸಂಪರಾಯವ್ಯವಸ್ಥಾಯಯೋಗದಿಂ ಪ್ರಪ್ರದೇಶಾನುಭಾಗ ಬಂಧಸ್ಥಾನಂಗಳೊಳಗಲಿಸಿ ಸಮಯೋತ್ತರಾನುಕ್ರಮದಿನುತ್ಕೃಷ್ಟಸ್ಥಿತಿವರಂ ಪರಿವ ಡಿದಪ್ಪದೆ ಕಿಟ್ಟುವುದಂ ಭಾವಪರಿವರ್ತನಮೆಂಬುದು ಜೀವಂ ಕರ್ಮಯೋಗಂಗಳಪ್ಪ ಪುದ್ಗಲಮನೊಂದು ಕ್ಷೇತ್ರಪ್ರದೇಶದೊಳೊಂದು ಕಾಲದ ಸಮಯದೊಳೊಂದು ಜಘನ್ಯಾಯುಷ್ಯದೊಳೊಂದು ಕರ್ಮದ ಸ್ಥಿತಿಯೊಳ್ ಸಮಕಟ್ಟಿಕೊಂಡು ದ್ವಿತೀಯಾದಿ ಸಮಯಾಂತರಂಗಳೊಳ್ ಮುನ್ನಮೆ ಕೈಕೊಂಡ ದ್ರವ್ಯಕ್ಷೇತ್ರಕಾಲಭವಭಾವಂಗ ಳೊಳ್ ಮಱೆದಪ್ಪೊಡಂ ಪರಿವರ್ತಿಸದೆ ಬೇಱೆವೇಱೆ ಪರಿವಡಿದಪ್ಪದೆ ಪುಟ್ಟುವುದು ಚಕ್ರಪರಿವರ್ತನಮೆಂಬುದಿಂತಸಾರ ಸಂಸಾರಚಕ್ರಪರಿವರ್ತನದೊಳಗೆ

ಖಳ ತಿರ್ಯಗ್ಗತಿಯೊಳ್ ಮನುಷ್ಯಭವದೊಳ್ ದೇವರ್ಕಳೊಳ್ ನಾರಕ
ರ್ಕಳೊಳೋರಂತಿರೆ ಪುಟ್ಟಿ ಚಿತ್ರವಿಧರೂಪಾಟೋಪವಿಭ್ರಾಂತಿಯಂ
ತಳೆದಲ್ಲಲ್ಲಿಗೆ ಬೇಱೆವೇಱೆ ಬಹುದುಃಖಾವರ್ತಸಂದೋಹದೊಳ್
ಸುೞಿಗುಂ ಮಾಣದೆ ಮಾಯ್ದು ಕರ್ಮವಶದಿಂ ಜೀವಂ ಭವಾಂಭೋಧಿಯೊಳ್ ॥೭॥

ಉಂಡ ಮೊಲೆವಾಲ ಪವಣಂ
ಕೊಂಡು ಬಿಸುಟ್ಟೊಡಲ ಪವಣನಿದು ಪವಣೆಂದಾರ್
ಕಂಡು ಮನಂಗೊಂಡು ಪವ
ಣ್ಗೊಂಡಱಿಪುವ ಜಡರನಾದಿಕಾಲಸ್ಥಿತಿಯಿಂ ॥ ೮ ॥

ವ॥ ಅಂತು ಪಂಚಪ್ರಕಾರದಿನನೇಕಪ್ರಕಾರಮಪ್ಪ ಸಂಸಾರಚಕ್ರಪರಾವರ್ತನ ಸ್ವರೂಪಮಂ ಸಂಕ್ಷೇಪಸ್ವರೂಪದಿಂ ಸವಿಸ್ತರಾರ್ಥಸ್ವರೂಪಮಾಗಿ ತಿಳಿಯಪೇೞ್ವುದುಂ

ನಾಗಶ್ರೀಕನ್ಯಕೆ ಸಂವೇಗಪರಾಯಣೆಯಾಗಿ ಧರ್ಮಸ್ವರೂಪಮಂ ಸವಿಸ್ತರಂ ಬೆಸಸಿ ಮೆಂಬುದುಮಾ ಮುನೀಂದ್ರನಿಂತೆಂದು ಬೆಸಸಿದಂ ನಿನ್ನ ಬೆಸಗೊಂಡ ಸದ್ಧರ್ಮ ಸನ್ಮಾರ್ಗಂ ಸಮ್ಯಗ್ದರ್ಶನಜ್ಞಾನಚಾರಿತ್ರಮಾರ್ಗದಿಂ ತ್ರಿಭೇದಮಾಗಿರ್ಕುಮಲ್ಲಿ ಜೀವಾದಿ ಪದಾರ್ಥತತ್ವಂಗಳಂ ನಿಸರ್ಗಾಧಿಗಮದ್ವಿಪ್ರಕಾರದಿನಾವುದೊಂದು ಪ್ರಕಾರ ದಿನಕ್ಕೆ ಪಿರಿದುಮಟ್ಟಿಱೊಳ್ ನಿಶ್ಚಯಂಗೆಯ್ದು ನಂಬುವುದು ಸಮ್ಯಗ್ದರ್ಶನಮೆಂಬು ದಕ್ಕುಂ ಪ್ರಮಾಣ ನಯ ನಯನಿಕ್ಷೇಪಂಗಳಿಂ ಯಥಾವಸ್ಥಿತಿ ಸಮಸ್ತವಸ್ತುಸ್ವರೂ ಪಮಂ ನಿಶ್ಚಯಮಾಗಿರಲಱಿವುದು ಸಮ್ಯಜ್ಞಾನಮೆಂಬುದಕ್ಕುಂ ಹಿಂಸಾದ್ಯಶೇಷಸಾ ವದ್ಯ ಕ್ರಿಯಾನಿವೃತ್ತಿಗೆಯ್ದು ಕಾಯ ವಾಙ್ಮನಃಕರ್ಮ ಯೋಗತ್ರಯವಿಶುದ್ಧಿಯಿಂದೆಸ ಗುವೆಸಕಂ ಸಮ್ಯಕ್ಚಾರಿತ್ರಮೆಂಬುದಕ್ಕುಮಾ ಚಾರಿತ್ರಮುಂ ಸಕಲವಿರತಿಲಕ್ಷಣದಿಂದನ ಗಾರ ಧರ್ಮಮೆಂದುಂ ಏಕದೇಶವಿರತಿಲಕ್ಷಣದಿಂ ಸಾಗಾರಧರ್ಮಮೆಂದೆರಡಱ್ತೆಱನಕ್ಕು ಮವಱೊಳ್ ಪಂಚಮಹಾವ್ರತ ಪಂಚಸಮಿತಿ ತ್ರಿಗುಪ್ತಿಗಳಿಂ ನೆಱೆದು ಯತಿಧರ್ಮಂ ತ್ರಯೋದಶಭೇದಮಕ್ಕುಮಣುಬ್ರತ ಗುಣಬ್ರತ ಶಿಕ್ಷಾಬ್ರತವಿಕಲ್ಪದಿಂ ಗೃಹಸ್ಥಧರ್ಮಂ ತ್ರಿಃಪ್ರಕಾರಮಕ್ಕುಮಂತವು ತಮ್ಮೊಳ್ ಪ್ರತ್ಯೇಕದಿನನುಕ್ರಮದಿಂ ಪಂಚ ತ್ರಿ ಚತು ರ್ಭೇದದಿಂ ದ್ವಾದಶಭೇದಮಕ್ಕುಮಲ್ಲಿ

ಆರಯ್ಯಲ್ಜೀವಹಿಂಸಾವಿರತಿ ವಿತಥವಾಕ್ಯಂ ಪರಾರ್ಥಾಪಹಾರ
ಪ್ರಾರಂಭಾನಾದರತ್ವಂ ಪರಯುವತಿರತಾನಾಭಿಲಾಷೋದ್ಯಮಂ ಬ
ಹ್ವಾರಂಭಾಕಾಂಕ್ಷೆಯೆಂದಿಂತಿವು ಜಿನಗದಿತಾಣುಬ್ರತಂಗಳ್ ವಿನೇಯಾ
ಧಾರಂಗಳ್ ಭಾಗಧೇಯಪ್ರಕೃತಿಗಳಮೃತಾವಾಸನಿಶ್ರೇಣಿಕಂಗಳ್ ॥ ೯ ॥

ದೆಸೆಗಳ್ಗೀ ಮೇರೆಯಿಂದಂ ಪೋಱಗೆ ನಡೆಯೆನಾನೆಂದು ಕೈಕೊಳ್ವುದುಂ ಸಂ
ತೊಸದಿಂ ತಾಳ್ದಿರ್ದಶೇಷಪ್ರಮಿತನಿಯಮಮುಂ ಮಂಡಳಾಗ್ರಾದ್ಯನರ್ಥ
ಪ್ರಸರಾಸ್ತ್ರೌಘಂಗಳೊಳ್ ತತ್ಪ್ರಮಿತಮೆನಿಸಿ ಕೈಕೊಂಡುಮೊಲ್ದೀಯದಿರ್ಪೊಂ
ದಸಮತ್ವೀಭಾವಮುಂ ಭಾವಿಪೊಡತಿಶಯಂಗಳ್ಗುಣಾಖ್ಯಬ್ರತಂಗಳ್ ॥ ೧೦ ॥

ಸಮತಾ ಸದ್ಭಾವದಿಂ ಪೂಜಿಸಿ ಪರಮಜಿನಾರಾಧನಂಗೆಯ್ವುದುಂ ಸಂ
ಯಮಿಗಳ್ಗುತ್ಕೃಷ್ಟದಿಂ ದಾನಮನತಿಮುದದಿಂದೀವುದುಂ ಪ್ರೋಷಧ ಪ್ರ
ಕ್ರಮದಿಂ ಪರ್ವಂಗಳಂ ನೋಂಪುದುಮಭಿಮತಭೋಗೋಪಭೋಗಂಗಳಂ ತ
ತ್ಪ್ರಮಿತಂ ಮಾಡಿಟ್ಟು ಕೈಕೊಂಡೆಸಗುವುದುಮಿದಾರಯ್ಯೆ ಶಿಕ್ಷಾಬ್ರತಂಗಳ್ ‖ ೧೧ ‖

ವಿತತಮಣುಗಣಸುಶಿಕ್ಷಾ
ವ್ರತಂಗಳೊಳ್ ಕ್ರಮದೆ ನೋಡಲೊಂದೊಂದಱೊಳ
ಯ್ದತಿಚಾರಮಾಗೆ ಪೋಗು
ತ್ತೆ ತುದಿಯೊಳಾರಯ್ಯಲವೆಲ್ಲಮಱುವತ್ತಕ್ಕುಂ ‖ ೧೨ ‖

ಅತಿಭಾರಾರೋಹಣಮು
ದ್ಗತಬಂಧಚ್ಛೇದಮನ್ನಪಾನನಿರೋಧಂ
ಕೃತಪೀಡೆಯಿಂದೆ ಹಿಂಸಾ
ವ್ರತಕ್ಕೆ ಪಂಚಪ್ರಕಾರಮಿಂತತಿಚಾರಂ ‖ ೧೩ ‖

ನಾನಾಮಿಥ್ಯೋಪದೇಶಂ ಪುದಿದೊದವಿದ ಸಾಕಾರಮಂತ್ರಂ ರಹೋವ್ಯಾ
ಖ್ಯಾನಂ ನ್ಯಾಸಾಪಹಾರಕ್ರಮಮನುಗತಿಯಿಂ ಕೂಟಲೇಖಕ್ರಿಯಾ ವಿ
ಜ್ಞಾನಂ ಸತ್ಯವ್ರತಕ್ಕಿಂತಿವು ಪರಿವಿಡಿಯಿಂದಯ್ದತೀಚಾರಮಕ್ಕುಂ
ಜೈನೇಂದ್ರಶ್ರೀಮತಾನುಕ್ರಮವಿರಚನೆಯಿಂ ನಂಬು ನೀನಂಬುಜಾಕ್ಷೀ ‖ ೧೪ ‖

ಹೀನಾಧಿಕ ವಿನಿಮಾನ
ಸ್ತೇನಾ[ಹೃತ]ದಾನಸದೃಶಮಿಶ್ರವಿಲೋಪ
ಸ್ತೇನಪ್ರಯೋಗಮೆಂದಿವು
ತಾನಸ್ತೇಯುವ್ರತಕ್ಕತಿಕ್ರಮಮಕ್ಕುಂ ‖ ೧೫ ‖

ಪರವೈವಾಹಿತ್ವರಿಕಾ
ಪರಿಹರಿತಾಗಮನಮಪರಿಹರಿತಾಗಮನಂ
ಸ್ಮರಕೇಳಿ ಮದನತೀವ್ರಾ
ತುರತೆ ಚತುರ್ಥವ್ರತಕ್ಕತಿಕ್ರಮಮಕ್ಕುಂ ‖ ೧೬ ‖

ಇರೆ ಕುಪ್ಯನಿವೇಶನ ಧನ
ವರಧಾನ್ಯ ಕ್ಷೇತ್ರಮುಖ್ಯಮೆಂಬಿವು ಪವಣಿಂ
[2]ದಿರದೇಜಿ[2]ಸುವುದು ಮತ್ತಂ
ಪರಿಮಾಣಪರಿಗ್ರಹವ್ರತಕ್ಕತಿಚಾರಂ ॥ ೧೭ ॥

ಅತಿಶಯತರಮೆನಿಪ ಗುಣ
ವ್ರತದೊಳ್ ದಿಗ್ವಿರತಿಗಕ್ಕುಮತಿಚಾರಮನಾ
ರತಮೂರ್ಧ್ವಾರ್ಧಃಸ್ತಿರ್ಯ
ಗ್ವ್ಯತಿಕ್ರಮುಕ್ಷೇತ್ರವೃದ್ಧಿ ವಿಸ್ಮರಣಂಗಳ್ ॥ ೧೮ ॥

ಕಪಟದೊಳೇಂ ಪ್ರೇಷಣ ಶ
ಬ್ದ ಪುದ್ಗಲಕ್ಷೇಪಸಮುದಿತಾನಯುನಂ ತಾ
ವಪಚಾರಂಗಳ್ ರೂಪಾ
ನುಪಾತಮುಂ ಪ್ರಮಿತದೇಶನಿಯಮವ್ರತದೊಳ್ ॥ ೧೯ ॥

ಪುದಿದಸಮೀಕ್ಷಾದಿ ಕರಣ
ಮುದಯಿಪ ಕಂದರ್ಪಮಂತೆ ಕೌತ್ಕುಚ್ಯಂ ಪೆ
ರ್ಚಿದ ಮೌಖರ್ಯ್ಯಮನರ್ಥ
ಕ್ಯದೊಳ್ ವ್ಯತಿಕ್ರಮುಮತಿಪ್ರಸಾ[3][ಧ][3]ನಸಹಿತಂ ॥ ೨೦ ॥

ಪರಿಕಿಪೊಡಸ್ಮರಣಮನಾ
ದರಂ ಮನೋವಾಕ್ಶರೀರ ದುಷ್ಪ್ರಣಿಧಾನಂ ॥
ನಿರುಪಮ ಶಿಕ್ಷಾವ್ರತದೊಳ್ ।
ನಿರುದ್ಧ ಸಾಮಾಯಿಕವ್ರತಕ್ಕತಿಚಾರಂ ॥ ೨೧ ॥

---

1. ತಾರ್ (ಕ) ಥಾರ್ (ಗ) 2. ದಾದರಿ (ಗ) 3 ದ (ಶ)

ಕ್ರಮದೆ ಪರವ್ಯಪದೇಶಂ ।
ಸಮತ್ಸರತ್ವಂ ಸಚಿತ್ತನಿಕ್ಷೇಪ ಪಿಧಾ
ನಮತಿಕ್ರಮ ಕಾಲಮತಿ ।
ಕ್ರಮಮಕ್ಕುಂ ಪಾತ್ರದಾನಮುಂ ಕುಡುವೆಡೆಯೊಳ್ ॥ ೨೨ ॥

ನೋಡದೆ ಪ್ರ[1]ತಿಲೇಪ[1]ನೆಯುಂ ।
ಮಾಡದೆ ಮಡಗಿಡುವ ಕೊಳ್ವ ಪಾಸುವುದುಂ ಕೊಂ ॥
ಡಾಡದುದುಂ ನೆನೆಯದುದುಂ ।
ಕೇಡಿನಿತುಂ ಪ್ರೋಷಧೋಪವಾಸವ್ರತದೊಳ್ ॥ ೨೩ ॥

ಕ್ರಮದಿಂ ಸಚಿತ್ತಸಂಬಂ ।
ಧಮಂತೆ ಸಮ್ಮಿಶ್ರಮಭಿಷವಂ ದುಃಪಕ್ವಾ ॥
ನ್ನಮಿವಯ್ದನ್ನಂಗಳತಿ ।
ಕ್ರಮಮಾ ಭೋಗೋಪಭೋಗಪರಿಮಿತಗತಿಯೊಳ್ ॥ ೨೪ ॥

ನುತಪಂಚಾಣುವ್ರತಂ ಮೂಱೆನಿಸುವ ಗುಣನಾಮವ್ರತಂ ನಾಲ್ಕು ಶಿಕ್ಷೆ ।
ಬ್ರತಮಿಂತೀ ಸುವ್ರತಂ ದ್ವಾದಶವಿಧಮಿವನೋರಂತತೀಚಾರನಿಃಪೀ ।
ಡಿತಮಾಗಲ್ ತಾಳ್ದಿ ಕೈಕೊಂಡೆಸಗೆ ನಿಖಿಳಸಂಸಾರಗಂಭೀರಕೂಪಾ ।
ರತಟೋದ್ದೇಶಾವಲಗ್ನಸ್ಥಿತಮೆನಿಸುಗುಮವ್ಯಾಕುಳಂ ಭವ್ಯಜೀವಂ ॥ ೨೫ ॥

ವ ॥ ಇಂತೀ ಸಮೀಚೀನ ಶ್ರವಕಾಚಾರಂಗಳಂ ನಿರತಿಚಾರಮಾಗೆ ತಾಳ್ದಿದ ದೇಶವಿರತಂಗಿಜ್ಜೆ ವಾರ್ತೆ ದತ್ತಿ ಸ್ವಾಧ್ಯಾಯ ಸಂಯಮ ತಪಮೆಂದಾರ್ಯಕರ್ಮ ಮಾಱು ತೆಱನಕ್ಕುಮಲ್ಲಿ ವರುಷವರುಷಾಂತರಂಗಳೊಳಾಷಾಢ ಕಾರ್ತಿಕ ಫಾಲ್ಗುಣ ಮಾಸಂಗಳ ನಂದೀಶ್ವರಪರ್ವದಿನಂಗಳೊಳಂ ತೀರ್ಥಕರಪರಮದೇವರ್ಗೆ ಪಂಚ ಮಹಾ ಕಲ್ಯಾಣ ವಿಭೂತಿಗಳೊಳಂ ಸೌಧರ್ಮೇಂದ್ರಂ ಮಾಳ್ಪ ಮಹಾಮಹಮೆಂಬ ಪೂಜೆಯುಂ ಚತುರ್ನಿಕಾಯಾಮರರ್ಮಾಳ್ಪ ಸರ್ವತೋಭದ್ರಮೆಂಬ ಪೂಜೆಯುಂ

1. ಡಿಂಲೇಹ (ಕ); ಲೇಖ (ಗ)

ಯಾಚಕ ವಾಚಕ ನರ್ತನ ಕಥಕ ಪುಣ್ಯಾಪಾಠಕ ಪ್ರಭೃತಿ ಸಮಸ್ತ ಜನಕ್ಕಂ ಬೇಡಿದುದಂ ಕೊಟ್ಟು ಚಕ್ರವರ್ತಿಗಳ್ ಮಾಳ್ಪ ಕಲ್ಪವೃಕ್ಷಮೆಂಬ ಪೂಜೆಯುಂ ಅರ್ಧಚಕ್ರವರ್ತಿಗಳ್ ಮಾಳ್ಪ ಚತುರ್ಮುಖಮೆಂಬ ಪೂಜೆಯುಂ ವಿದ್ಯಾಧರರ್ಮಾಳ್ಪ ರಥಾವರ್ತಮೆಂಬ ಪೂಜೆಯುಂ ಮಹಾಮಂಡಳೇಶ್ವರರ್ಮಾಳ್ಪಿಂದ್ರಕೇತುವೆಂಬ ಪೂಜೆಯುಂ ಮಂಡಳೇಶ್ವರರ್ಮಾಳ್ಪ....ಪೂಜೆಯೆಂಬ ಪೂಜೆಯುಂ ಅರ್ಧಮಂಡಳೇಶ್ವರರ್ಮಾಳ್ಪ ಮಹಿಮೆಯೆಂಬ ಪೂಜೆಯುಂ ನಾನಾರ್ಚನೋಪಕರಣಸಮೇತಮಾಗಿ ಜಿನೇಂದ್ರಮಹಾಭಿಷೇಕದೊಳ್ ನಾಳಿಕೇರೇಕ್ಷುರಸಾಮ್ರರಸಘೃತಕ್ಷೀರದಧಿಕಷಾಯೋದಕ ಚತುಷ್ಕುಂಭೋದಕ ಗಂಧೋದಕಸವನಮಂ ತಂತಮ್ಮ ಚಿತ್ತಾನುಸಾರವೃತ್ತಿಯಿಂ ಸಕಲ ವಿನೇಯ ಜನಂಗಳ್ ಮಾಳ್ಪ ಮಹಮೆಂಬ ಪೂಜೆಯುಮನುಳ್ಳುದೆಂಬುದಿಜ್ಯೆಯೆಂಬ ಮೊದಲಾರ್ಯಕರ್ಮಂ ಅಸಿಮಷಿಕೃಷಿವಾಣಿಜ್ಯಶಿಲ್ಪಪಶುಪಾಲ್ಯಮೆಂಬ ಷಟ್ಕರ್ಮಂಗಳೊಳ್ ನ್ಯಾಯದಿನರ್ಥೋಪಾರ್ಜನಂಗೆಯ್ವುದು ವಾರ್ತೆಯೆಂಬೆರಡನೆಯಾರ್ಯಕರ್ಮಂ ಕಾರುಣ್ಯಭಾವದಿಂ ಜೀವನಿಕಾಯಮನೋವಿ ಕಾವ ಭಯದತ್ತಿಯುಂ ಪಾತ್ರವಿಶೇಷಕ್ಕಾಹಾರೌಷಧೋಪಕರಣಾವಾಸಂಗಳನೀವ ಪಾತ್ರದತ್ತಿಯುಂ ತನ್ನ ಸಮಾನಮಪ್ಪ ಕುಲಶೀಲಂಗಳ ವ್ರತಸಂಪನ್ನರ್ಗೆ ಕರಿತುರಗಮಣಿಭೂಷಣಹಿರಣ್ಯಭೂಮಿಕನ್ಯಾದಿ ವಸ್ತುಗಳಂ ಕುಡುವ ಸಮದತ್ತಿಯುಂ ಆತ್ಮೀಯಾನ್ವಯೋದ್ಧರಣಸಮರ್ಥನಪ್ಪ ನಿಜಾತ್ಮಜಂಗೆ ಸಮಸ್ತಗೃಹಪರಿಚ್ಛೇದಮನೊಪ್ಪಿಸುವ ಸಕಳದತ್ತಿಯುಮನುಳ್ಳುದು ದತ್ತಿಯೆಂಬ ಮೂಱನೆಯಾರ್ಯಕರ್ಮಂ ಪರಮಾಗಮಂಗಳನೋದುವೋದಿಸುವೆಡೆಯೊಳಾದೊಂದು ವ್ಯವಸಾಯ ಸ್ವಾಧ್ಯಾಯಮೆಂಬ ನಾಲ್ಕನೆಯಾರ್ಯಕರ್ಮಂ ದ್ವಾದಶವಿಧೋಪಾಸಕವ್ರತಂಗಳಂ ನಿರತಿಚಾರವೃತ್ತಿಯಿಂ ಕೈಕೊಂಡೆಸಗುವ ತಾತ್ಪರ್ಯಂ ಸಂಯಮಮೆಂಬಯ್ದನೆಯಾರ್ಯಕರ್ಮಂ ಅಣುವ್ರತಮಹಾವ್ರತಪರಿಕಲ್ಪಿತಮಪ್ಪನಶನಾದಿಗಳನನುಷ್ಠಿಸಿ ಶಕ್ತಿಯಂ ಮಱಸದೆ ನೆಗಳ್ವುದು ತಪಮೆಂಬಾಱನೆಯಾರ್ಯಕರ್ಮಮಿಂತೀಯಾರ್ಯಕರ್ಮಂಗಳಂ ನೆಗಳ್ದಿ ಗೃಹಸ್ಥಾಶ್ರಮಪ್ರತಿಗನುಕ್ರಮದಿನನುಪಮಾನಗುಣಪ್ರವರ್ಧಮಾನಮಪ್ಪೇಕಾದಶಸ್ಥಾನಂಗಳಕ್ಕುಮವಾವುವೆಂದೊಡೆ

ಆಪುನರ್ಭವನಾಪ್ತಂ ತ
ಲ್ಲಪನೋದಿತಮಾಗಮಂ ತದಾಗಮದರ್ಥೋ
ಕ್ತಿ ಪದಾರ್ಥಮೆಂದು ನಿಶ್ಚಯಿ
ಪ ಪರಮದರುಶನಿಕನಂತವಂ ಪ್ರಾಥಮಿಕಂ ॥ ೨೬ ॥

ವರ ಪಂಚಾಣುವ್ರತಮಂ
ನಿರತಿಕ್ರಮಮಾಗೆ ತಾಳ್ದಿ ಪರಮದಯಾ ತ
ತ್ಪರನೆನಿಸಿದ ಶಲ್ಯತ್ರಯ
ವಿರಹಿತನೆರಡನೆಯ ನೆಲೆಯುವಂ ತಾಂ ವ್ರತಿಕಂ ॥ ೨೭ ॥

ನಿಯತಂ ತ್ರಿಸಂಧ್ಯೆಯೊಳ್ ಸಮ
ತೆಯಿನರುಹತ್ಪೂಜೆಯಿಂದಮಿರ್ಪಾತಂ ನಿ
ಶ್ಚಯದಿಂ ಮೂಱನೆಯಂ ಸಾ
ಮಯಿಕ ವ್ರತಧಾರಿ ಪೆಸರೊಳಂ ಸಾಮಯಿಕಂ ॥ ೨೮ ॥

ಅನಶನ ವಿಧಿಯಿಂ ತಿಂಗಳ
ನ ನಾಲ್ಕು ಪರ್ವದೊಳಮಾಪ್ತಪೂಜಾವಿಧಿಯಿಂ
ಮನಮೊಸೆದಿರ್ಪಂ ನಾಲ್ಕನೆ
ಯ ನೆಲೆಯುವಂ ಪ್ರೋಷಧೋಪವಾಸಿಯೆನಿಕ್ಕುಂ ॥ ೨೯ ॥

ಕುಸುಮ ಫಳ ಕಂದ ಮೂಲ ।
ಪ್ರಸರಂಗಳನಗ್ನಿಪಕ್ವಮಲ್ಲದುವನಪೇ ॥
ಕ್ಷಿಸಿಕೊಳ್ಳದನಯ್ದನೆಯಂ ।
ಪೆಸರಿಂದಾತಂ ಸಚಿತ್ತವಿರತನೆನಿಕ್ಕುಂ ॥ ೩೦ ॥

ದಿವದೊಳ್ ಸುರತವ್ಯಾಪಾ ।
ರವಿನೋದಮನನ್ನಪಾನಮಂ ರಾತ್ರಿಯೊಳಾ ॥
ಸೆವಡುವುದುಮನುಱಿದೆಸಗು ।
ವ ವಿವೇಕಿಯಾಱನೆಯ ರಾತ್ರಿಭುಕ್ತವ್ರತಿಕಂ ॥ ೩೧ ॥

ಸಹಜಾಶುಚಿದೇಹಂ ಪ್ರಾ ।
ಣಿಹತಿ ಪ್ರಾರಂಭವೆಂದು ವನಿತಾರತಿ ನಿ ॥
ಸ್ಪೃಹನಾಗಿ ತೊಱೆದು ನೆಗಳ್ವಂ ।
ಗೃಹಸ್ಥರೊಳ್ ಬ್ರಹ್ಮಚಾರಿಯೆಂಬನೆಯಾತಂ ॥ ೩೨ ॥

ಘನತರಸಾವದ್ಯಕರಂ ।
ನೆನೆವೊಡೆ ಷಟ್ಕರ್ಮವೆಂದವಂ ತೊಱೆದವನೆಂ ॥
ಟನೆಯ ನೆಲೆಯಾತನಾರಂ ।
ಭನಿವೃತ್ತನೆನಿಕುಮನುಪಮೋದ್ದಾಮಗುಣಂ ॥ ೩೩ ॥

ಧನಧಾನ್ಯಾದಿ ಪರಿಗ್ರಹ ।
ಮನಾವಗಂ ತೊಱೆದು ನೆಗಳ್ದುಪಾಸಕನೊಂಬ ॥
ತ್ತನೆಯ ಪರಿಮಿತಪರಿಗ್ರಹ ।
ವಿನಿವೃತ್ತನುದಾತ್ತಧರ್ಮನಿರ್ಮಲಚಿತ್ತಂ ॥ ೩೪ ॥

ತನಗೆಂದು ಮಾಡಿಸುತ್ತಂ ।
ತನಗೆಲ್ಲಂ ತನ್ನನಱಿಪಿ ಮಾಡಿದುದಂ ಕೊ ॥
ಳ್ಳೆನೆನಿಪ್ಪನಾತನನುಮೋ ।
ದನವಿರತಂ ದೇಶವಿರತರೊಳ್ಪತ್ತನೆಯಂ ॥ ೩೫ ॥

ವಿಶದಯಶೋನಿಳಯಂ ವಿಮ ।
ಳಶೀಳಸಂಪನ್ನನುಚಿತಭೈಕ್ಷ್ಯಾನೀಕಂ ॥
ನಿಶಿತಮತಿಯುಕ್ತನೇಕಾ ।
ದಶಸ್ಥನುದ್ದಿಷ್ಟದೇಶವಿರತಂ ಪೆಸರಿಂ ॥ ೩೬ ॥

ವ ॥ ಇಂತು ದರ್ಶನಿಕಂ ವ್ರತಿಕಂ ಸಾಮಯಿಕಂ ಪ್ರೋಷಧೋಪವಾಸಿಕಂ ಸಚಿತ್ತವಿರತಂ ರಾತ್ರಿಭುಕ್ತವ್ರತಂ ಬ್ರಹ್ಮಚಾರಿ ಆರಂಭಕಂ ಪರಿಗ್ರಹವಿರತಂ ಅನುಮತಿವಿರತಂ ಉದ್ದಿಷ್ಟವಿರತನೆಂದಿಂತು ಪನ್ನೊಂದು ವಿಕಲ್ಪಮನುಳ್ಳ

ಶ್ರಾವಕರೊಳನುಕ್ರಮದಿಂ ।
ಭಾವಿಪೊಡೆ ಜಘನ್ಯರಜುವರಲ್ಲಿಂದತ್ತ ॥
ಲ್ಯೂವರ್ಮಧ್ಯಮರತ್ತಲ್ ।
ತಾವುತ್ತಮರಿರ್ಪರಮಳ ಚಾರುಚರಿತ್ರರ್ ॥೩೭॥

ವ ॥ ಇಂತು ನೆಗಟ್ಟೆವೆತ್ತೇಕಾದಶಸ್ಥಾನಂಗಳೊಳಾ ನಿರತಿಚಾರವ್ರತಶೀಲ ಸಂಪನ್ನನುಂ ನಿರಸ್ತ ಮಿಥ್ಯಾತ್ವನುಂ ನಿಷ್ಕಷಾಯನುಮಾಗಿ ಸಮಾಚರಿಸಿ ಚರಮ ಕಾಲದೊಳ್

ಪಲಕಾಲಂ ಪುಟ್ಟಿ ಕುತ್ತಂ ಕಡುಪುಡುಗದೆ ಬೆನ್ನಟ್ಟಿ ರೌದ್ರೋಪಸರ್ಗ ।
ಪ್ರಸರಂ ಕೈಗಣ್ಮೆ ಮುಪ್ಪಾವರಿಸಿದ ಬಳದಿಂ ಪೊಣ್ಮೆ ಕಾಲಾಂತದೊಳ್ ಭಾ ।
ವಿಸಿ ತನ್ನಂ ತಾನನಿತ್ಯಾದಿಗಳನಱಿದನುಪ್ರೇಕ್ಷೆಗೆಯ್ಯುತ್ತುಮಾರ್ತ ।
ಣ್ಮೆ ಸಮುತ್ಪೀಭಾವದಿಂದಂ ಬಿಡುವುದೊಡಲನವ್ಯಾಕುಲಂ ಭವ್ಯಜೀವಂ ॥ ೩೮ ॥

ಕೃತಮಿತ್ರಪ್ರಣಯಂ ಜೀ ।
ವಿತಮರಣಾಶಂಸೆ ವಿಭವಸೌಖ್ಯನಿದಾನಂ ॥
ವ್ಯತಿಪಾತಮಕ್ಕುಮತ್ಯೂ ।
ರ್ಜಿತಮಾಗುತ್ತಿರ್ದ ಚರಮಸಲ್ಲೇಖನೆಯೊಳ್ ॥ ೩೯ ॥

ಇದು ದೈವಮಿದಾಗಮಮಿಂ ।
ತಿದು ತಪಮಿದು ಧರ್ಮವೆಂಬ ನಿರುಪಮಸಮ್ಯ ॥
ಕ್ತ್ವದ ತೆಱನಂ ನಾಗಶ್ರೀ
ಗೆ ದಿವ್ಯಮುನಿನಾಥನಱಿಯೆ ಬೆಸಸಿದನಾಗಳ್ ॥ ೪೦ ॥

ಧರ್ಮವೆ ಪರಮಪದಕ್ಕಾ ।
ಶರ್ಮಂ ಧರ್ಮವೆ ಸಮಸ್ತಸೌಖ್ಯಕ್ಕಾರ್ಮಂ ॥
ಧರ್ಮವೆ ದೇಹಿಗೆ ಶರಣಂ ।
ಧರ್ಮವೆ ಸಂಸಾರಿಗಖಿಳಸಂಸೃತಿಹರಣಂ ॥ ೪೧ ॥

ಧರ್ಮಂ ವಿಶ್ರುತಸಶ್ರುತಾತಿಶಯಮಂ ಧರ್ಮಂ ಬೃಹದ್ಭಾಗ್ಯಮಂ ।
ಧರ್ಮಂ ನಿರ್ಭರಸಾರ್ವಭೌಮಪದಮಂ ಧರ್ಮಂ ಸುರೇಂದ್ರತ್ವಮಂ ॥
ಧರ್ಮಂ ನಿರ್ಮಲಸದ್ಗುಣಪ್ರಕರಮಂ ಧರ್ಮಂ ತಪಃಖ್ಯಾತಿಯಂ ।
ಧರ್ಮಂ ಧಾರ್ಮಿಕನಪ್ಪವಂಗೆ ಕುಡುಗುಂ ನಿರ್ವಾಣಕಲ್ಯಾಣಮಂ ॥ ೪೨ ॥

ವ ॥ ಎಂದು ಸದ್ಧರ್ಮಸ್ವರೂಪಮುಮಂ ತತ್ಫಳಪ್ರಭಾವಮುಮಂ ಸೂರ್ಯಮಿತ್ರಭಟ್ಟಾರಕರ್ ತಿಳಿಯೆ ಪೇೞುತ್ತುಂ ಸಮ್ಯಕ್ತ್ವಪೂರ್ವಕಮಣುವ್ರತಂಗಳ ನೇೞಿಸಿ

ನಿಂಬದ ಕುಸುಮಂಗಳನಾ ।
ದುಂಬರಪಂಚಕಮನಂತೆ ನವನೀತಮನಾ ॥
ಣಂಬೆಯನನಾರತಂ ಬೆ ।
ಳ್ಗುಂಬಳಮಂ ಗಿಣ್ಣನುಣ್ಣದಿರ್ಪುದಮೋಘಂ ॥ ೪೩ ॥

ಕೃತಕಾರಿತಾನುಮೋದದಿ ।
ನತಿಸಾವದ್ಯಾದಿ ದೋಷಮಿಲ್ಲೆನಿಸಿದಣು ॥
ವ್ರತಮಂ ತಾಳ್ದಿದ ಮನುಜರ್ ।
ಕೃತಾರ್ಥರಾಗರೆ ಜಗತ್ತ್ರಯಾಭ್ಯಂತರದೊಳ್ ॥ ೪೪ ॥

ಭಯಮುಖಿಲಕಾಂಕ್ಷೆ ವಿಚಿಕಿ ।
ತ್ಸೆಯನ್ಯದೃಷ್ಟಿಪ್ರಶಂಸೆ ಸಂಸ್ತವನಮೆಂಬೀ ॥
ಕ್ರಿಯೆ ಸಮ್ಯಗ್ದೃಷ್ಟಿಗೆ ನೋ ।
ಡೆ ಯಥಾಕ್ರಮದಿಂ ವ್ಯತಿಕ್ರಮಂ ತಾನಕ್ಕುಂ ॥ ೪೫ ॥

ಒಳಕೊಂಡ ಪಂಚವಿಂಶತಿ ।
ಮಳದಿಂದಂ ಪಿಂಗಿ ತತ್ವರುಚಿಯಂ ತಾಳ್ದು ॥
ಜ್ವಲಗುಣಗಣಂಗಳಿಂದಂ ।
ಬೆಳಗುಗುಮಿಾ ತೆಱದೆ ನಿನ್ನ ದರ್ಶನರತ್ನಂ ॥ ೪೬ ॥

ವ || ಎಂದು ಸಂಬೋಧಿಸಿ ನಿಮ್ಮಯ್ಯಂ ನಾಗಶರ್ಮನೆನ್ನ ಕೊಟ್ಟ ವ್ರತಂಗಳಂ ಬಿಸುಡೆಂದು ನುಡಿಯುದೆ ಮಾಣಂ ನೀನಲ್ಲಿಯೆ ಬಿಸುಡವೇಡ ಎನಗೆ ವ್ರತಂಗಳಂ ಕೊಟ್ಟ ವ್ರತಿಗಳ್ಗೆ ಮಗುಳೆ ಕುಡುವೆಮೆಂಬುದೆನೆ ನಾಗಶ್ರೀಯಂತೆ ಗೆಯ್ವೆನೆಂದು ಗುರುಗಳಂ ಗುರುಭಕ್ತಿಪೂರ್ವಕಂ ವಂದಿಸಿ ತನ್ನ ಮನೆಗೆ ಪೋಪುದುಂ ತನ್ನೊಡನೆಯು ಕೂಸುಗಳ್ ತನ್ನಿಂ ಮುನ್ನಮೆ ನಾಗಶರ್ಮನಿರ್ದಲ್ಲಿಗೆ ವಂದು ನಿಮ್ಮ ಮಗಳ್ ಋಷಿಯರಲ್ಲಿ ಶ್ರಾವಕವ್ರತಂಗಳಂ ಕೈಕೊಂಡು ಬಂದಳೆಂದು ಪೇಳ್ವುದುಂ ಮಗಳ ಮೊಗಮಂ ನೋಡಿ

ಧರಣೀಚಕ್ರದೊಳಾರ್ಗಮಗ್ಗಳಮಿಳಾದೇವಾನ್ವವಾಯಂ ನರೇ |
ಶ್ವರಸಂಪೂಜ್ಯನೆ ನಾನಿದಂ ಮಗಳೆ ನೀಂ ಕಂಡಿರ್ದುಮಪ್ರೌಢರಂ ||
ತಿರೆ ಕಾಷ್ಠಾಂಬರನಾಗಿ ಮುಟ್ಟುಗಿಡೆ ವಂಶಂಗೆಟ್ಟು ನಾಣ್ಗೆಟ್ಟು ದು |
ಶ್ಚರಿತಂಗಾನತೆಯಾಗಿ ನಮ್ಮ ಕುಲಮಂ ನೀಂ ನೀರೊಳಿಂತದ್ದುವೋ || ೪೭ ||

ಕ್ಷಿತಿಯೊಳ್ ಪೂಜ್ಯದ್ವಿಜಸಂ |
ತತಿಯೆಂಬುದನಱಿಯದಿಂತು ನೀನೀಗಳ್ ದು ||
ರ್ಮತಿಯಾದೈ ನಾಮುಂತುಂ |
ವ್ರತಸ್ಥರಾ ವ್ರತಮನೇಕೆ ನೀಂ ಕೈಕೊಂಡೈ || ೪೮ ||

ಕೂಸಿನ ವಿಚಾರಬುದ್ಧಿ |
ನ್ಯಾಸಂ ನಿನಗಿಲ್ಲ ಮಱೆದು ಕೈಕೊಂಡುದುವೇಂ ||
ದೋಸಮದೇಂ ಬನ್ನಂ ಬಿಸು |
ಡಾ ಸವಣನ ಪೇಳ್ದ ಜೈನಮತಮಂ ಬ್ರತಮಂ || ೪೯ ||

ವ || ಎಂದು ನುಡಿದ ತಂದೆಯ ನುಡಿಯಂ ಕೇಳ್ದವಧಾರಿಸಿ

ಪದಪಿಂ ಧರ್ಮಮನೊಪ್ಪಿ ನಿಂದೆನಗಘಪ್ರಧ್ವಂಸನೋಪಾಯಸಂ ।
ಪದಮಂ ತನ್ಮುನಿ ಪೇೞ್ದಣು ವ್ರತಮನಾನೀಗಳ್ ಬಿಸುೞ್ವಾಗಳೇಂ ।
ತೊದಳಿಲ್ಲಂ ನುಡಿವಂದವಿಂತೆ ಕಿಱುಗೂಸೆಂಬೊಂದು ಮಾತೆನ್ನೊಳಂ ।
ತೆತದು ತಾಂ ನಿಕ್ಕುವಮಾದೊಡಾ ನುಡಿಯನಿನ್ನಾನೇತಱಂ ॥ ೫೦ ॥

ಎನಿತೆನ್ನನಾಗ್ರಹಂಗೆ ।
ಯ್ದು ನುಡಿದೊಡಂ ಬಿಸುಡಲೊಲ್ಲೆನೆನಗಾ ವ್ರತಮಂ ॥
ಮುನಿಪರೊಸೆದಿತ್ತರಾನವ ।
ರನೆಯ್ದಿದಿಂ ಬೞಿಯುಮವರ್ಗೆ ಮಗುೞೊಪ್ಪಿಸುವೆಂ ॥ ೫೧ ॥

ವ ॥ ಎಂಬುದುಮಂತಾದೊಡೆ ಕರಮೊಳ್ಳಿತ್ತು ನಡೆ ನಿನ್ನ ನಚ್ಚಿನ ಋಷಿಯಲ್ಲಿಗೆಂದು ಮಗಳನೊಡಗೊಂಡು ನಾಗಸ್ಥಾನಕ್ಕಾಗಿ ಮಹಾರಾಜವೀಥೀಮಾರ್ಗದಿಯಪ್ಪಾಗಳ್ ತೊಟ್ಟನೆ ಕಟ್ಟಿದಿರೊಳ್

ಪಿಡಿ ಬಡಿ ಕಟ್ಟು ನೂಂಕು ತೆಗೆ ಸೂಲದೊಳಿಕ್ಕುೞಿಯೊಳಿಕ್ಕು ಕೈಗಳಂ ।
ಕಡಿ ಪಿಡಿಮೊತ್ತಿ ಮೂಗನರಿ ಗಾಣದೊಳಿಕ್ಕು ಬಿಗುರ್ತು ಬೀಗಿ ಬೆ ।
ನ್ನೊಡವಿನಮೊಡ್ಡಿ ಕಾಸು ಪಿಡಿ ಕೆಂಡದೆಳಿಂಱಡೆಯನಾಡು ಚುರ್ಚು ಮಾ ।
ನ್ನುಡಿಯದೆ ಗಾಣದೊಳ್ ಪಿೞಿ ಪಿಸುೞ್ದಿರೆ [1][ಪೋ][1]ೞಿಸು ಪಿಂಡಿವಾಳದೊಳ್ ॥ ೫೨ ॥

ಆಪದೋಷನನೇಳಿಸಿ ಕೊಂ ।
ದ ಪಾಪಿಯಂ ಪಲವುತೆಱದ ಕೊಲೆಗಳಿನೀ ನಿ ॥
ಷ್ಕೃಪನಂ ಕೊಲ್ಲೆನುತುಂ ಬ ।
ರ್ಪ ಪುರಜನಂಗಳ ರವಂಗಳಂ ಸತಿ ಕೇಳ್ದಳ್ ॥ ೫೩ ॥

ವ॥ ಅಂತೊರ್ವನಂ ಪೆಡಂಗೆಯ್ಯುಡಿಯಲ್ಕಟ್ಟಿ ಪೊೞಲ ಜನಂಗಳೆಲ್ಲಂ ನೆರೆದು ನುಡಿಯುತ್ತುಂ ಗೞಿವೞಿಯ ಪಾವಿನಂತೆ ಬೆಂಬೞಿಯುಂ ತಗುಳ್ವ ಪರಿತರೆ ಪರೇ

1 ಪೇ (ಕ).

ತವನಕ್ಕಾಗಿ ಕೊಂಡು ಪೋಪುದಂ ನಾಗಶ್ರೀ ಕಂಡು ನಾಗಶರ್ಮಭಟ್ಟನನೆನ್ನ ಗಿವಿಾ ಸುಭಗಸುಂದರಾಕಾರನಪ್ಪ ಕುಮಾರನನೇಕೆ ಕೊಲಲೊಯ್ದಪರ್ಬೆಸಗೊಂಡು ಬನ್ನಿ ಮೆಂಬುದುಂ ನಾಗಶರ್ಮನಾ ಪ್ರಪಂಚಮನೆಲ್ಲಮಂ ತಳಾಱನಂ ಬೆಸಗೊಂಡು ಬಂದು ತಿಳಿಯೆ ಪೇೞ್ಗಿವಿಾ ಪೊೞಲೊಳಾರ್ಗಮಗ್ಗಳಂ ಪದಿನಾಱುಕೋಟಿ ದ್ರವ್ಯಮನುಳ್ಳ ಸುದತ್ತನೆಂಬ ಪರದನ ಮಗನೀತಂ ನರಸೇನನೆಂಬಂ ಸಪ್ತವ್ಯಸನವಶವರ್ತಿಯಾಗಿ ಅಕ್ಷ ಧೂರ್ತನೆಂಬ ಮಾಣಿಯೊಡನಕ್ಷಕ್ರೀಡೆಯಾಡಿ ಲಕ್ಷದ್ರವ್ಯಮಂ ಸೋಲ್ತೊಡಕ್ಷಧೂರ್ತ ನಾ ದ್ರವ್ಯಮಂ ಕೊಟ್ಟಲ್ಲದೆ ಪೋಗದಿರೆಂದರಸನಾಣೆಯಿಟ್ಟೊಡಾಜ್ಞಾಲಂಘನಂ ಗೆಯ್ದು ದಲ್ಲದಾತನಂ ಕೊಂದೊಡೀತನನರಸಂ ಕೊಲವೇೞ್ದೊಡೆ ತಳಾಱಂ ಕೊಲಲು ಯ್ವಪನೆಂದು ಪೇೞ್ವುದುಮಂತಾದೊಡಾನೀ ವ್ರತಮನಾವ್ರತಿಗೆ ಮಗುೞೊಪ್ಪಿಸಿದೆ ನಪ್ಪೊಡೇಗೆಯ್ದಪಮಾಂ ಪ್ರಾಣಿಗಳಂ ಕೊಲಲ್ವೇೞ್ಕುಂ ಕೊಂದೊಡೆನ್ನುಮನೀ ಮಾರ್ಗದಿಂ ಪೆಡಂಗೆಯ್ಯುಡಿಯೆ ಕಟ್ಟೆ ಪುರಜನಮುಂ ಪರಿಜನಮುಂ ಬಂಧುಜನಮುಂ ನೆರೆದು ಬರೆ ಬಾೞ್ವಾೞ್ ಕೊಲ್ಲದೆ ಮಾಣರದು ಕಾರಣದಿಂ

ಕೊಲೆಯಂ ಮಾಣ್ಕೊಲ್ವರೊಳ್ಕೂಡದಿರು ಕೊಲಿಸದಿರ್ ಜೀವಸಂಘಾತಮಂ ನಿ।
ರ್ಮಳಸದ್ಧರ್ಮಾನುರಾಗೋನ್ನತ ವಿನುತದಯಾಮೂಲಸಮ್ಯಕ್ತ್ವಮಂ ನಿ ।
ಶ್ಚಳಮಿಂಬಿಂ ತಾಳ್ದ ನೀನೆಂದೆನಗಭಿನುತಮಂ ಪೇೞ್ದಿನಾ ಕೀರ್ತಿಲಕ್ಷ್ಮೀ ।
ನಿಳಯಂ ಯೋಗೀಂದ್ರಹಂಸಂ ಪರಮಜಿನಮತಾಂಭೋಜಿನೀರಾಜಹಂಸಂ ॥ ೫೪ ॥

ಇದು ಸಮಸ್ತ ವಿನೇಯಜನವಿನುತ ಶ್ರೀವರ್ಧಮಾನಮುನೀಂದ್ರವಂದ್ಯ
ಪರಮಜಿನೇಂದ್ರ ಶ್ರೀಪಾದಪದ್ಮವರಪ್ರಸಾದೋತ್ಪನ್ನ
ಸಹಜಕವೀಶ್ವರ ಶ್ರೀಶಾಂತಿನಾಥ ಪ್ರಣೀತಮಪ್ಪ
ಸುಕುಮಾರಚರಿತದೊಳ್ ನಾಗಶ್ರೀಯ
ಪಂಚಾಣುವ್ರತವರ್ಣನಂ
ಷಷ್ಠಮಾಶ್ವಾಸಂ

# ಸಪ್ತಮಾಶ್ವಾಸಂ

ಶ್ರೀ ದೊರೆಕೊಳ್ಗೆಂದು ವಚ।
ಶ್ರೀ ದೊರೆಕೊಳ್ಗೆಂದು ಸೌಖ್ಯಸಂಪದಮುಕ್ತಿ ॥
ಶ್ರೀ ದೊರೆಕೊಳ್ಗೆಂದಾಶೀ
ರ್ವಾದಂಗೊಟ್ಟಂ ಸರಸ್ವತೀಮುಖಮುಕುರಂ ॥ ೧ ॥

ವ॥ ಎಂಬುದುಮಾ ಕೊಲ್ಲದವ್ರತಮೊಂದುಮುೞಿಯೆ ಬೞಿಯುಮುೞಿದ ವ್ರತಂಗಳೆಲ್ಲಮನಾ ನಾಣಿಲಿ ಸವಣಂಗೆ ಕೊಟ್ಟು ಬರ್ಪಂ ಬಾಯೆಂದು ಕಿಱಿದಂತರಂ ಬರ್ಪನ್ನೆಗಂ

ಕವಿತರ್ಪ ನೆರವಿಯುಂ ಕ[1]ನ।
ಲ[1]ವೋರಿಗಳ್ಕಂಡು ಬೆರ್ಚಿ ಕೆಂಗೋಲ್ಗೊಂಡೋ ॥
ಡುವುದನಿದೇನೆಂದಾ ಕೊ।
ಡವಿ ಬೆಸಗೊಳೆ ನಾಗಶರ್ಮನದನಱಿದೆಂದಂ ॥ ೨ ॥

ಎನಗಾರ್ ಬಲ್ಲಿದರೆಂದು ವಂಗವಿಷಯಾಧೀಶಂ ಭರಂಗೆಯ್ದು ಭೋಂ।
ಕೆನೆ ಮೇಲೆತ್ತಿ ಕಱುತ್ತು ಮಾಣದೆನಸುಂ ವಜ್ರಾಯುಧಂ ಚಂದ್ರವಾ ॥
ಹನನೊಳ್ ಕಾದಲೊಡರ್ಚಿ ಬಂದು ವಿಷಯಾಂತರ್ಭಾಗದೊಳ್ಬಿಟ್ಟು ತೊ।
ಟ್ಟನೆ ಬೂತಟ್ಟಿದೊಡಟ್ಟಿದಂ ಬಳನನಿಂತೀ ಭೂಪನಾಕ್ಷೇಪದಿಂ ॥ ೩ ॥

ವ॥ ಅಂತು ಮೇಲೆವಂದು ಬೂತಟ್ಟಿದ ವಜ್ರಾಯುಧನ ಮೇಲೆ ಹಸ್ತ್ಯಶ್ವ ರಥ ಪದಾತಿ ಚಾತುರ್ವಳಸಹಿತಂ ಬಳನೆಂಬ ದಂಡಾಧಿನಾಥನನೀತನಟ್ಟಿದೊಡಾ ಇರ್ವರ್ಗಂ ಸಮರಾಡಂಬ[ರ]ಮಳುಂಬಮಾಗೆಯುಭಯಬಲಂಗಳುಂ ಮಲ್ಲಾಮಲ್ಲಿಯಾಗಿ ಕಾದುವಾಗಳ್ ತಕ್ಷಕನೆಂಬಾಪ್ತಚರನಲ್ಲಿ ತಲ್ಲಣಿಸಿ ನಿಲಲಾಱದೊಲ್ಲನುಲಿದೋಡೈತಂದಲ್ಲಿಗೆ ವಂದು ಚಂದ್ರವಾಹನನರೇಂದ್ರನಂ ಕಂಡು

---

1 ವಲ (ಕ)

ಬಳನಂ ವಜ್ರಾಯುಧಾಂಕಂ ದ್ವಿರದಘಟೆಯನೊಡ್ಡೊಡ್ಡಿ ತಳ್ತಿರ್ದ ಮೇಘಾ ।
ವಳಿಯಂ ಪರ್ಬಿರ್ದರಣ್ಯಪ್ರಕರಮನಖಿಳಧ್ವಾಂತದುಶ್ಚರ್ಗಂ ಸ್ವಬಾಹಾ ॥
ಬಲದಿಂ ಪಂಚಾಸ್ಯನೆಂತಾ ಪ್ರಳಯದವನನೆಂತುಗ್ರದಾವಾಗ್ನಿಯೆಂತುತ್ಪ ।
ಳಜಾಳಾರಾತಿಯೆಂತಂತಿರೆ ಸಮರದೊಳೋರಂತೆ ಮಾಜಿಗಾಂತು ಗೆಲ್ದಂ ॥ ೪ ॥

ವ॥ ಎಂದು ಬಿನ್ನಪಂಗೆಯ್ವ ಚರನ ಬಿನ್ನಪದಿಂ ಬಿನ್ನನೆ ಮೊಗಮಂ ಮಾಡಿ ಬಿಲ್ಲಂ ಬೆಜಿಗುಮಾಗಿಪ್ಪುದುಮಾ ಪ್ರಸ್ತಾವದೊಳ್

ಅನುವರದೊಳ್ ವಜ್ರಾಯುಧ ।
ನನಿಕ್ಕಿ ವಿಕ್ರಾಂತದಿಂದೆ ವಿಜಯಧ್ವಜಮಂ ॥
ತನಗೆತ್ತಿಸಿದಂ ದಂಡಾ
ಧಿನಾಯಕಂ ಬಳನಜೇಯ ನಿಜಶೌರ್ಯಬಳಂ ॥ ೫ ॥

ವ॥ ಎಂದು ಲೇಖವಾಹನಂ ಚಂದ್ರವಾಹನಂಗುತ್ಸಾಹದಿಂ ವಾರ್ತೆಯಂ ಪೇೞ್ವುದುಮಂಗಚಿತ್ತಮಂ ಕೊಟ್ಟಂ ಮುನ್ನೆ ಬಂದೀತನೆನಗೆ ಸೇನಾಭಂಗಮುಂ ಮನೋಭಂಗಮುಮಪ್ಪಂತು ಪುಸಿವಾರ್ತೆಯಂ ಪೇೞ್ದನೀ ಪುಸಿವನಂ ಕುಸಿಯೊತ್ತಿ ಬಟ್ಟೆಯೊಳ್ ಪೆಟ್ಟಮೆಟ್ಟಿದು ಬಳಸಿದ ದಸಿಯೊಳ್ತೆಗೆಯಿಮೆಂದು ಚಂದ್ರವಾಹನ ನರೇಂದ್ರಂ ಪೇೞೆ ತಳಾಜರ್ತಕ್ಷಕನಂ ಕನಲವೋರಿಗಳ್ ಪೂಡಿ ಪೆಟ್ಟಮೆಟ್ಟಿದಪ ರೆಂಬುದುಂ ನಾಗಶ್ರೀಕನ್ಯಕೆ ಕರುಣಾರಸಾರ್ದ್ರಹೃದಯೆಯಾಗಿ ಋಷಿಯಕೊಟ್ಟ ಪುಸಿಯದ ವ್ರತಮಂ ಬಿಸುಟೆನಪ್ಪೊಡೆ ಪುಸಿಯದಿರಲ್ಬಾರದು ಪುಸಿದೆನಪ್ಪೊಡೆನ್ನು ಮನಸೆಯೊಳೆ ಪೂಡಿ ಪೆಟ್ಟಮೆಟ್ಟಿದು ಕೊಲ್ವರೆಂಬುದುಮಂತಾಪೊಡಾ ವ್ರತಮು ಮೀರ್ಕೆ ಮತ್ತಿನ ಜೊತ್ತಿಸಿ ಕೊಟ್ಟಸಿತ [1]ವ್ರತಂಗಳನಾ[1]ಜಿನಮುನಿಗೆ ಕೊಟ್ಟು ಬರ್ಪ ಮೆಂದು ಕಿಱಿದಂತರಂ ಬರ್ಪಾಗಳ್

---

1. ದಲ್ಲಿ ತ್ರುಟಿತ (ಕ)

ದಬ್ಬಳಮುಂ ಬೆರಲ್ಗಳೊಳಡಂಗುವಿನಂ ನಡೆಪೊಯ್ದು ಮಾಳೆಯಂ ।
ದಬ್ಬುಕವಿಂಡೆ ನುಗ್ಗುನುಜಿ೦ಯುಪ್ಪಿನೆಗಂ ಬಿಡೆ ಬೀಸಿ ಪೊಯ್ದು ಕ ।
ಣ್ಗಬ್ಬೆಯ ಗುಳ್ಳೆಯಂತೆ ಪೊಜಿಪಾಯ್ಪನಮುಟ್ಟ[1]ಳೆ[1]ವೊಯ್ದೊಡೊರ್ವನಂ ।
ಬೊಬ್ಬಿಱಿದಾರ್ದು ಕೊಲ್ವ ಕೊಲೆಯಂ ಹರಿಣೇಕ್ಷಣೆ ಕಂಡು ಭೀತಿಯಿಂ ॥ ೬ ॥

ತಂದೆಯನೆಂದಳ್ಪೇೞಿವಿ ।
ವಂದಿರ್ನೆರೆದಿವನನಿಂತು ನಾನಾವಿಧದಿಂ ॥
ಕೊಂದಪರಿದಾವಕಾರಣ ।
ದಿಂದಮೊ ಬೆಸಗೊಳ್ಳಿಮೆಂಬುದುಂ ವಿಪ್ರವರಂ ॥ ೭ ॥

ವ॥ ತಳಾಱರಂ ಬೆಸಗೊಂಡು ಬಂದು ಮಗಳ್ಗಿಂತೆಂದು ಪೇೞಲ್ ತಗುಳ್ದಂ

ನೆಗಟ್ದ ಸುಮಿತ್ರನೆಂಬ ಪರದಂಗೆ ಮಗಳ್ಸುಕಾಂತೆಯೆಂಬೊಳೇ ।
ವೊಗಟ್ಪುದಶೇಷ ರೂಪವತಿ ಮೆಲ್ಲಗೆ ತನ್ನಯ ಕನ್ನೆಮಾಡದಿಂ ।
ಮೃಗಶಿಶುನೇತ್ರೆ ತಾಂ ಪುಗುವ ಬೇಗೆದಿನೊಯ್ಯನೆ ಬಂದು ಬಾಗಿಲಂ ।
ನುಗುಳ್ಪಳ ನೆತ್ತಿಯಂ ಪಿಡಿದುದಾಕ್ಷಣದೊಳ್ಮುಳಿಸಿಂ ಮಹೋರಗಂ ॥ ೮ ॥

ವ ॥ ಆಗಳಾ ಸುಮಿತ್ರಂ ಮಿತ್ರಕಳತ್ರ ಸಹಿತಮಾಗಳ್ಬಾಯೞಿದು ತತ್ಸತಿ ಪರಾಸುವಾದಳೆಗೆತ್ತು ಪರೇತವನಕ್ಕೆ ಕೊಂಡುಪೋಪುದುಮಲ್ಲಿಯೊರ್ವಂ ಗರುಡ ನಾಭಿಯೆಂಬ ಗಾರುಡಿಗಂ ತತ್ಕನ್ಯಕೆಯಾಯುಷ್ಯಂ ಬರ್ಪಂತೆ ಬಂದೀ ಬಿಂಬೋಷ್ಠೆಯಂ ಸರ್ಪದಷ್ಟೆಯನೆನಗೆ ಮದುವೆಮಾಳ್ಪಿರಪ್ಪೊಡೆ ನಾಳೆ ನೇಸರ್ಮೂಡದ ಮುನ್ನಮೆ ವಿಷಾಪಹಾರಂ ಮಾಡಿದಪ್ಪೆನಿಂದಿನೊಂದು ರಾತ್ರಿಯುಮಂ ಪರೇತವನಸ್ಥಾನದಿಂ ತೊಲಗಲೀಯದೆ ಕಾಪಂ ಸುವಿಧಾನಮಾಗೆ ಮಾಡಿಮೆಂಬುದುಂ ಸುಮಿತ್ರನಂತೆ ಗೆಯ್ಪೆನೆಂದು ನಾಲ್ವರ್ [2]ಸಾಹಸ[2] ಭಟರಪ್ಪ ಸುಭಟರ್ಗೆ ನಾಲ್ಸಾಸಿರ ಪೊನ್ನಂ ನುಡಿದು ಜಾವಮಿರಿ [ಸಿ] ಸಾಸಿರದೀನಾರದ ಸಮುಕಟ್ಟಿನ ನಾಲ್ಕು ಪೊಟ್ಟಳಿಗೆಯನೊಂದೆಮಾಡಿ

1. ನೆ (ಗ) 2. ಸಹಸ್ರ (ಕ)

ನಾಲ್ವರ ನಡುವಿರಿಸಿ ಮನೆಗೆ ಪೋಪುದುಮವರೊಳೊರ್ವನಾ ಮೂವರುಮಂ ಬಂಚಿಸಿ ಬಿಟ್ಟು ನೋಡಿಯೊಂದು ಪೊಟ್ಟಣಮನಡಂಗಿಸಿರ್ಪುದುಂ ಮಱುದಿವಸಂ ಗರುಡನಾಭಿ ಬಂದು ಕನ್ನೆಯುಂ ಸಚೇತನೆಮಾಡಿ ಮದುವೆನಿಲ್ವುದುಂ [1]ನುಡಿದನಲ್ಲದೆ ಪೊನ್ನಂ ಮುನ್ನಮೆ ಕೊಟ್ಟೆನಿಲ್ಲ ಇವರೀಯರ್ಥಮುಂ ತಮ್ಮೊಳೋರೊರ್ವರ ವಂಚಿಸಿಯುಮೆಲ್ಲಮೊಂದಾಗಿ ಛಿದ್ರಿಸಲಱಿಯರೆಂದುವಾನವರ ಮನದ ಪುಱುವಗೆಯುನಱಿಯವೆ ಲೋಗರೆ ವಂಚಿಸಿದರಾಗಲೆವೇೞ್ಕುಮೆಂದರಸರ್ಗೆ[1] ಬಿನ್ನಪಂಗೆಯ್ವುದುಮರಸಂ ತನ್ನ ತಳಾಱನಪ್ಪ ಚಂಡಕೀರ್ತಿಯುಂ ಬರಿಸಿ ಮೂಱು ನಾಲ್ಕು ದಿವಸದೊಳೀ ಪೊನ್ನನಾವಪ್ರಕಾರದೊಳವಾಗಿಯುಮಾರಯ್ದು ತಂದು ಕುಡುವುದಂತಲ್ಲದೊಡೆ ಕಳ್ಳಂಗೆ ಮಾೞ್ಪ ನಿಗ್ರಹಮುಂ ನಿನಗೆ ಮಾೞ್ಪೆನೆಂದರಸನಾಗ್ರಹಿಸಿ ನುಡಿವುದುಂ ಚಂಡಕೀರ್ತಿಯಾ ನಾಲ್ವರುಮಂ ತನ್ನ ಮನೆಗೊಡಗೊಂಡುಪೋಗಿ ಬಿನ್ನನಾಗಿರ್ಪುದುಮಾತನ ಮಗಳ್ ಸುಮತಿಯೆಂಬ ಗಣಿಕೆ ಕಂಡಿದೇನೆಂದು ಬೆಸಗೊಂಡೊಡೆ ಚಂಡಕೀರ್ತಿಯದೆಲ್ಲಮುಂ ಜಲಕ್ಕನಱಿಪೆ

ಏಳಿದನಂತೆ ಬಾಯಟಿದು ಚಿಂತಿಸುವಂದಮಿದಾವುದುರ್ವರಾ ।
ಪಾಳನಿನಿಟ್ಟ ವಾಸರಚತುಸ್ತ್ರಿಕ ಮಾತ್ರದೊಳಾವುಪಾಯದಿಂ ।
ಮೇಳಿಸಿ ತಂದುಕೊಂಡು ಕುಡುವೆಂ ನಿನಗರ್ಥಮನೆಂದು ಲೋಳನೀ ।
ಲಾಳಕಿ ಪೂಣ್ದು ತಂದೆಯ ಮನಃಕ್ಷತಮುಂ ಮನದಿಂದಗಲ್ಚಿದಳ್ ॥ ೯ ॥

ವ॥ ಅಂತೇಕಾಂತದೊಳ್ ತಮ್ಮ ತಂದೆಯ ಮನೋಗ್ಲಾನಿಯುಂ ಪಱಿವಡೆ ನುಡಿದು

ಮನವೊಲ್ದು ತನ್ನ [2]ಗುಣಣೆ[2]ಯು ।
ಮನೆಯುಂ ಗಜಗಮನೆ ಪೊಕ್ಕು ತದ್ಭಟರಂ ಮೆ ॥
ಲ್ಲನೆ ಬೇಱೆವೇಱೆ ಬರವೇ ।
ೞ್ದನಿತಾನುಂ ತೆಱದ ಲಲ್ಲೆಯಿಂ ಜೊತ್ತಿಸಿದಳ್ ॥ ೧೦ ॥

---

1 ಈ ಭಾಗದ ಅರ್ಥ ಅಸ್ಪಷ್ಟವಾಗಿದೆ. 2 ಗಣಸೆ (ಕ, ಗ)

ಪದೆಪಂ ಕೆಯ್ತದೊಳುಂಟುಮಾಡಿ ನಯಮಂ ವಾಗ್ವೃತ್ತಿಯೊಳ್ ತೋಱಿ ನೋ|
ಟದೊಳಾದೆಱ್ಕಱಿನಪ್ಪುಕೆಯ್ದೆಸಕದೊಳ್ ಮೆಲ್ಪಂ ಪಳಂಚಲ್ಪಿ ಕ |
ಣ್ಬದಿರೊಳ್ ಕಾಮಿನಿ ಕಾಮರಾಗರಸಮಂ ತೞ್ಕೈಸಿ ತಳ್ಪೊಯ್ಯು ಮೇ |
ಳದೊಳಂ ಪೊಕ್ಕೈನಸುಂ ಮನಂಗೊಳಿಸಿದೊಳ್ ನಾನಾಪ್ರಕಾರಂಗಳಿಂ || ೧೧ ||

ಎನಗೆನಗೆ ಸೋಲ್ತಳೆಂಬಂ |
ತೆ ನೋಡಿ ನೋಟದೊಳಲಂಪನಾರ್ಜಿಸಿ ಕಾ ||
ಮಿನಿ ಕಾಮಪಾಶದಂತೆಯಿ |
ರೆ ನಾಲ್ವರುಂ ಭಟರ ಮನಮನುಱ[3] ಸೆಱ[3]ವಿಡಿದಳ್ || ೧೨ ||

*ಅಕ್ಕರ|| ನೋಡದನ್ನೆಗಂ ನೋ[1][ವ][1]ಕ್ಕುಮಲ್ಲದೆ ನುಡಿಯದಿರ್ಪನ್ನೆಗಂ ಧೈರ್ಯ
ಮಕ್ಕುಂ|
ಕೂಡದನ್ನೆಗಂ ಕೂಡದಂ[2][ತಿ][2]ರಲಕ್ಕುಂ ಬಸಮಾಗದನ್ನೆಗಂ ಬಳಸಲಕ್ಕುಂ |
ನೋಡಿ ನೋಯದೆ ನುಡಿದು ಕಾತರಿಸದೆ ಕೂಡೆ ಲಲ್ಲಯಿಸದೆ |
ನೋಡ ಬಸಮಾಗಿ ಬಸಮೞಿದು ಬಳಸದೆ ಬೞಿಕೆಯ್ದು ಬದ್ದೆಯನೊಲಿಪನಾವಂ||೧೩

ವ|| ಎಂಬುದುಂ ನಿತಂಬಿನಿ ನಾನಾಪ್ರಕಾರದ ತತ್ತುಪಣಂಗಳಿಂ ಜೊತ್ತಿಸಿ ವಶೀಕೃತಂ ಮಾಡಿ ಮಱುದಿವಸಂ ಆ ನಾಲ್ವರುಮನೊಂಡೆಡೆಗೆ ವರಿಸಿ ಕುಳ್ಳಿರಿಸಿ

ಧನಮುಂ ನೀಮೆಲ್ಲಮಿರ್ದಂತಿರೆ ಪೊಱಗಣವರ್ಬಂದು ಕೊಳ್ವಂದು ವಿಶ್ವಾ |
ವನಿಚಕ್ರಕ್ಕಕ್ಕುಮತ್ಯದ್ಭುತತರಮಿದೆಱ[3]ೊಳ್ ತೊಟ್ಟ ವೃತ್ತಾಂತಮುಂ ನೀ |
ಮೆನಗೀಗಳ್ಪೇೞಿಮಾರಾರ್ತೊಲಗಿದರದನಾರ್ಮುನ್ನ ಕೈಕೊಂಡಿರಾ ಕಾ|
ಪಿನೊಳಿರ್ದರ್ವಂದು ನಿಮ್ಮೊಳ್ ನುಡಿದ ಮನಜರಾರೆಂಬುದಂ ನೀಮಮೋಘಂ ||೧೪||

---

* ಈ ಅಕ್ಕರದ 3, 4 ನೆಯ ಪಾದಗಳಲ್ಲಿ ಛಂದೋದೋಷಗಳಿವೆ. 1. ಡಿಂಲ (ಕ.ಗ)
2. ಗಿ (ಕ); ಡಂಗಿ (ಗ)

ಅಕ್ಕರ ॥ ನುಡಿದ ಸುಮತಿಯ ನುಡಿಯನಿಂಬಿನೆ ಕೇಳ್ದು ದಪ್ಪೆಯಂ ಕಾದಿರ್ದೆನೆಂದನೊರ್ವಂ ।
ನಡುವಿರುಳ್ವೋಗಿ ವಣಿಜರನೊಟ್ಟಯ್ಸಿ ವಂಚಿಸಿ ಕುಱಿದಂದೆನೆಂದನೊರ್ವಂ ।
ಪಿಡಿದು ತಂದಿತ್ತ ಕುಱಿಯನಾನುಱೆ ಕೊಂದು ಪಿಶಿತಮಂ ಮಾಡಿದೆನೆಂದನೊರ್ವಂ ।
ನುಡಿಗೆ ಮೆಚ್ಚಿಟ್ಟು ನೋಟಕ್ಕೆ ಬಸನಾಗಿ ಮಡದಿಯೊಡವಟ್ಟಿದೆನೆಂದನೊರ್ವಂ ॥೧೫॥

ವ॥ ಅಂತಾ ನಾಲ್ವರುಂ ನಾಟ್ವಿರ್ತನಮಿಲ್ಲದುಳ್ಳುದನುಳ್ಳಂದದೊಳಱಿಪುವುದುಮಾಗಳಾ ಸುಮತಿ ತಾಂ ಸುಮತಿಯಪ್ಪುದಱಿನವರ ಬಗೆಯನಱಿದುಪಾಯಮನಾಗಳೆ ಚರ್ಚಿಸಿ

ಇಂದೆನಗೆ ನಿದ್ದೆ ಬಾರದು ।
ಬಂದಪುದಾಲಸ್ಯಮುಸದಳಂ ನೀಮೆನಗೊಂ ।
ದೊಂದು ಕಥೆಗಳನಪೂರ್ವಮ ।
ನಂದಮಗುಂದಲಿಸೆ ಪೇಟ್ದು ಪೊತ್ತಂ ಕಳೆಯಿಂ ॥ ೧೬ ॥

ಎಂಬುದುಮಾವಾವ ಕಥೆಗಳನಱಿವೆವಲ್ಲೆವು ನೀಂ ಪೇೞ್ವೊಡೆ ಕೇಳಲ್ಬಲ್ಲೆವು ಎಮಗೆ ನೀನೆ ಪೇೞಲ್ವೇೞ್ಕುಮೆಂಬುದುಂ ಸುಮತಿ ಚಿತ್ರಕಥೆಯನಿಂತೆಂದು ಪೇೞಲ್ತಗುಳ್ದಳ್ ಪಾಟಳೀಪುತ್ರಮೆಂಬ ಪೊೞಲೊಳ್ ವಸುದತ್ತನೆಂಬ ಪರದನಾತನ ಮಗಳ್ ಸುದಾಮೆಯೆಂಬ ಕನ್ಯೆಯತ್ಯಂತರೂಪ ಲಾವಣ್ಯಭಾಗ್ಯಸೌಭಾಗ್ಯ[1]ಸಂಗೆ [ಗ] ೞಗೆಯಂ[1] ಮಿಾವಾಗಳ್ ನೆಗೞ್ ಬಂದು ಕಾಲಂ ಪಿಡಿದೊಡೆ ಬಿಡಿಸಲಱಿಯದೆ ಸಿಡಿಮಿಡಿವಂದು ತಡಿಯೊಳ್ ಮಿಾಯುತ್ತಿರ್ದ ತಮ್ಮ ಭಾವನಂ ಧನದೇವನಂ ಕರೆದೀ ನೆಗೞಂ ಬಿಡಿಸೆಂಬುದುಮಾತೆ ತನಗೆ ನಾದುನಿಯಪ್ಪುದಱಿಂ ನಗೆಮಾಡಿ ನಿನ್ನ ವಿವಾಹದಿವಸದ ಪ್ರಥಮ ಪ್ರಸಾಧನಮನೆನಗೆ ತೋಱುವೆಯಪ್ಪೊಡೆ ಬಿಡಿಸುವೆನೆಂದೊಡಂಬಡಿಸಿ ಬಿಡಿಸಿದಿಂ ಬೞಿಯ ಕತಿಪಯದಿನಂಗಳ್ ಕೞಿಯೆ ಸುದಾಮೆಗೆ ಪರಿಣಯನ ಪ್ರಾರಂಭಮಾಗೆ ವಿವಿಧ ಮಣಿಭೂಷಣಾಲಂಕರಣೆಯಾಗಿ ತನ್ನ ಪ್ರತಿಜ್ಞೆಯಂ ನೆನೆದು ಬಯ್ಗಿನ ಬೇಗಂ ಮೆಯ್ಗರೆದು ಭಾವನಿರ್ದ ಭವನಕ್ಕಾಗಿ ಬರ್ಪಾಗಳ್

---

1. ಸಂಗಸಂಗೆಯುಂ (ಕ) ಸಂಗಗಂಗೆಯುಂನದಿದೊಳು (ಗ)

ಪಸಿದೊಡೆ ಕಂದಿ ಕುಂದಿ ದೆಸೆಗೆವ್ವಳಿಸುತ್ತುಮಿದಿರ್ಚೆ ಸಾರ್ಚೆ ರಾ ।
ಗಿಸಿ ಪಿರಿದೊಂದು ವಸ್ತು ದೊರೆಕೊಂಡುದು ಬಾಱ್ಪುರೆ ಬರ್ದೆನೆಂದು ರ ।
ಕ್ಕಸನಿದಿರೆರ್ದು ಕೊಲ್ವಪದದೊಳ್ ನಿಜವೃತ್ತಕಮಂ ಸಮಂತು ಸೂ ।
ಚಿಸಿ ಮಗುಳ್ದಿಲ್ಲಿಗಾಂ ಬಱಿಕೆ ಬಂದಪೆನೀಗಳೆ ನಂಬು ನಿಶ್ಚಯಂ ॥ ೧೭ ॥

ವ॥ ಎಂಬುದುಮಾ ಬ್ರಹ್ಮರಾಕ್ಷಸನಿವಳ ಮಾತಂ ನಂಬಿ ನಂಬುಗೆಯುಂ ಕೊಂಡು ಬೆಂಬಱಿಯನೆ ತಗುಳ್ದು ಪೋಪೆಂ ನುಡಿದು ತಪ್ಪಿದೊಡೆ ಪಿಡಿದು ನುಂಗಲಱಿಯದೊನಲ್ಲೆನೆಂದು ರೂಪುಗರೆದು ಪೆಱಪೆಱಗನೆ ಬರುತಿರ್ದ [ನ] ನ್ನೆಗಂ ಮುಂದೊಂದೆಡೆಯೊಳ್

ಎನಗಿಂದಿಂಗಾಱುತಿಂಗಳ್ ಸಮನಿಸದಪುದಿಲ್ಲೆಲ್ಲಿಯುಂ ಬಂದಿಮಂಚಲ್ ।
ಖನನಪ್ರಾರಂಭ ಚೌರ್ಯಾದಿಗಳನಶನಮಾಗಳ್ ಚತುರ್ವಾಸರಂ ಭೋ ।
ಜನಮಾತ್ರಂ ಬಂದೊಡಿಂದಾಂ ಸಕಲವಿಭವಮಂ ಪೆತ್ತೆನೆಂದೆಂದು ತನ್ನೊಳ್ ।
ನೆನೆಯುತ್ತುಂ ಬರ್ಪನಂ ತಸ್ಕರನನಧನನಂ ನೀಡಱಿಂ ನೋಡಿ ಕಂಡಳ್ ॥ ೧೮ ॥

ವ॥ ಅಂತು ಗೆಂಟಱಿಂ ನೋಡಿ ಕಂಡು ತೊಲಗಿ ಪೋಪುದುಂ ಮಿಂಚಿನ ಗೊಂಚಲನೆ ಸಂಚಳಿಸಿ ಪೊಳೆವ ರತ್ನಾಭರಣಂಗಳ ಪೊಳೆಪಂ ಕಂಡಿದೇನಾನುಮೊಂದಾಶ್ಚರ್ಯಮಾಗಲ್ವೇೞ್ಕುಮಾಗಳಿನ ಪೊತ್ತಪ್ಪುದು ಖೇಚರ ನಿಶಾಚರ ದ್ಯುಚರ ಸಂಚಾರಮಲ್ಲದೆ ಭೂಚರಗೋಚರಮಲ್ಲೆಂದು ಮುಟ್ಟೆವರ್ಪುದುಮಾ ಕನ್ನೆ ತನ್ನ ಪ್ರತಿಜ್ಞಾ ಪ್ರಪಂಚಮಂ ಸವಿಸ್ತರಂ ಪೇೞ್ದು

ಎಡೆಮುಡಗದಿಂದೆ ನಿನ್ನಿ ।
ರ್ದೆಡೆಗೀಗಳೆ ಬರ್ಪೆನೆಂದು ನಂಬುಗೆಗೊಟ್ಟಾ ॥
ಎಡೆಯಿಂದೆ ತಳರ್ದು ಕಿಱಿದೆಡೆ ।
ನಡೆಪುದುಮಡಹಡಿಸಿ ಮಸಗಿ ಬಿಡೆ ಜಡಿಯುತ್ತುಂ ॥ ೧೯ ॥

ವ॥ ಬೀದಿ ಬೀದಿಗಳೊಳ್ ಸೋದಿಸಿ ಕಾವ ತಳಾಱಂ ಕಂಡು

ಈ ಪೊತ್ತಿನೊಳೀ ಪೆಣ್ಗೊ ।
ಸೀ ಪಸದನಮೆಸೆಯೆ ಪೋಪುದೆಲ್ಲಮಿದಘಟ ॥
ವ್ಯಾಪಾರಮಿವಳ್ ಪರಪುರು ।
ಷಾಪೇಕ್ಷಣೆಯುಕ್ಕುಮೆನುತುಮಂತರ್ಗತದೊಳ್ ॥ ೨೦ ॥

ಎನೀ ಪೊತ್ತೆತ್ತವೋಪೈ ಸಿತಗೆ ಮಗುಳಿ ಮಗುಳೆನುತ್ತೆಯ್ದೆವಂದಾಗಳೆಂದಳ್ ।
ನೀನೆನ್ನಂ ಕಾಡವೇಡಾಂ ತೊಡರ್ದವಸರದೊಳ್ ಪ್ರತ್ಯಯಂಗೆಯ್ದೆನೊರ್ವಂ ।
ಗೇನುಂ ತಳ್ವಿಲ್ಲದಾನೀಗಳೆ ಚಟುಲತೆಯಿಂ ನಿನ್ನನೆಯ್ತಪ್ಪೆನೆಂ ।
ದೇನಾನುಂ ಸೂರುಳ್ಗಳಿಂ ನಂಬಿಸಿದೊಡನುಚರಂ ಕೇಳ್ದದಂ ತನ್ನೊಳೆಂಗುಂ ॥೨೧॥

ವ॥ ಅನೀಗಳೀಕೆಯುಂ ಬಿಡೆ ಜಡಿದೊಡಗೊಂಡುಯ್ದೆನಪ್ಪೊಡೆ ತುಡುಗೆಗಾಟಿಸಿ ಜಡಿದನೆಂಬ ಕಳಕಳದಿಂದೆನಗೆ ಕಳವು ಪೊರ್ದುಗುಮೆಂದಿವಳೆಲ್ಲಿಗೆ ವೋದಪಳೆಂಬುದಂ ಬೆನ್ನನೆ ಪೋಗಿ ನೋಟ್ಪೆನೆಂದು ಬಟಿಯನುಟಿಯದೆ ಬಂದಿಂತಾ ಮೂವರುಂ ನೋಡುತ್ತುಮಿರ್ದನ್ನೆಗಮಾ ಕನ್ಯೆ ಧನದೇವನ ಪಡುವೋವರಿಯ ಮನೆಯನೆಯ್ದಿ ಪಡಿಯುಂ ಮಿಡಿದೊಡೆಚ್ಚತ್ತುಪಡಿಯಂ ತೆಱೆದು ನೋಡಿ ಸುದಾಮೆಯಪ್ಪುದನಱಿದು

*ಮಣಿಭೂಷಣಂ ॥ ಸದಮಳಮಣಿಭೂಷಿತೆ ನೀನೀ ನಟ್ಟನಡುವಿರಳ್ ।
ಕುದುಗುಳಿತನದಿನೀ ಯೆಡೆಗೆ ಪೊಲ್ಲದು ವಂದೆ ಎಂಬುದುಂ ।
ಮದುವೆಯ ದಿವಸದಂದು ಬರವೇಳ್ಪುದು ನೀನೆಂದೆನ್ನನಂದು ನೀಂ।
ಚದುರ್ಗಿಡೆ ನುಡಿದೊಡಾಂ ನುಡಿದ ನನ್ನಿಗೆ ವಂದೆಂ ॥ ೨೨ ॥

ವ॥ ನಿನ್ನ ಮೆಚ್ಚಿದು ಗೆಯ್ ಎಂದು ಪರಿಚ್ಛೇದಿಸಿ ನುಡಿವುದುಂ

ಸೋದರಮಾವನ ಮಗಳೆನೆ ।
ನಾಮುನಿಯೆಂದಂದು ನಿನ್ನನಾಂ ಕಾಡಿದೆನಿಂ ॥
ತೀ ದೊರೆಯ ನನ್ನಿ ಸನ್ನುತ ।
ಮಾದುದನಾನಿಂತು ನನ್ನ ಮೆಯ್ಯೊಳೆ ಕಂಡೆಂ ॥ ೨೩ ॥

---

* ಈ ವೃತ್ತ ತೀರ ಅಶುದ್ಧವಾಗಿದೆ.

ತಳವಱ ಕಳ್ಳರ ಬಾರಿಯೊ ।
ಳೊಳಗಾಗವೆ ನಿನ್ನ ಬರ್ದುಕಿ ಬಂದಂದವಿದಾ ॥
ರಳವೀಗಳುಂಬವುಂಬುಜ ।
ದಳಾಕ್ಷಿ ಪೋಗಬ್ಬೆ ಬೇಗವೆಂಬುದುಮಾಗಳ್ ॥ ೨೪ ॥

ವ॥ ಸುದಾಮೆ ವಿಸ್ಮಯಂಬಟ್ಟು ಧನದೇವನ ಮುನ್ನಿನ ಲಂಪಳಿಕೆಯುಮ ನೊಲ್ದು ಬಂದೆಡೆಯೊಳೊಲ್ಲದೆ ಮೆಚ್ಚಿ ಪೊಗಟ್ದು ಪೋಗಲ್ವೇಟ್ದಿದುಮಂ ನೆನೆಯುತ್ತಂ ಬರ್ಪಾಗಳಾ ಮೂವರುಮಾಕೆಯ ಸತ್ಯಮುಮನಾತನ ಶೌಚಮುಮಂ ಮೆಚ್ಚಿ ಪೊಗಟುತ್ತಂ ಪೋಗಿ ಮುನ್ನಮಿರ್ಪೆಡೆಗಳೊಳಿರ್ದರನ್ನೆಗಮಾ ಸುದಾಮೆಯುಂ ತಳಾಱನನಱಸುತ್ತಂ ಬಂದು ನನ್ನಿಯಂ ಕೊಟ್ಟುದಱಿಂ ನಿನ್ನಲ್ಲಿಗೆ ವಂದೆ ನೀನಿನ್ನೆನ್ನಂ ಮೆಚ್ಚುಕೆಯಿವೆಂಬುದುಂ ಮುನ್ನಮಾಂ ನಿನ್ನನೆನ್ನಳಿಂದಱಿಯದೆ ಪೊಲ್ಲಮಾನಸೆಯೆಂದೆ ಬಗೆದು ಪಿಡಿದೆಂ ನಿನ್ನನ್ನರ್ಮಹಾಸತಿಯರಾರುಮಿಲ್ಲ ಬೇಗಂ ಪೋಗೆಂಬುದುಮಲ್ಲಿಂ ಬಂದು ಕಳ್ಳನಂ ಕಂಡು

ಇವು ಲಕ್ಕೆ ಕೋಟಿ ಬೆಲೆಕೆ ।
ಯ್ವ ದಿವ್ಯಾಭರಣವಿಂತಿವಂ ನೀಂ ಕೊಳ್ಳೆಂ ॥
ದವಯವದಿಂ ನುಡಿದೊಡೆ ನೀಂ ಸ ।
ತ್ಯವಾದಿಯ್ಪೆಯೆಂದು ಪೊಗಟ್ದು ಪೋಗಲ್ವೇಟ್ದಂ ॥ ೨೫ ॥

ವ॥ ಅಂತಾಯೆಡೆಯಿಂ ರಕ್ಕಸನಿರ್ದೆಡೆಗೆವಂದು ನೀನೆನ್ನಂ ತಿನ್ನೆಂಬುದುಮಾ ರಕ್ಕಸಂ ಬೆಕ್ಕಸಂಬಟ್ಟು

ನೀಂ ನಿನ್ನ ನುಡಿದ ನುಡಿವಳಿ ।
ಯಂ ನೆಱಪಿದೆ ನಿನ್ನ ನನ್ನಿ ನಿನ್ನಯ ಮೆಯ್ಯೊಳ್ ॥
ಸನ್ನಿದಮಾದುದು ಪೋಗೆನೆ ।
ಕನ್ನೆಯುಮಾತ್ಮಾಲಯಕ್ಕೆ ಬೇಗಂ ಪೋದಳ್ ॥ ೨೬ ॥

ವ॥ ಇಂತಾ ಕನ್ನೆಯಂ ಬೇಗಂ ಕಾದು ಕಱಿಪಿದ ನಾಲ್ವರೊಳಗೆ

ಧನದೇವನೊಳ್ಳಿದನೊ ಕ |
ಳ್ಳನೊಳ್ಳಿದನೊ ತಳಱನೊಳ್ಳಿದನೊ ರಕ್ಕಸನೀ ||
ತನೆ ಕಡೆಯುಲೊಳ್ಳಿದನೊ ನಿ |
ಮ್ಮನಿಬರುಮೊಳ್ಳಿದರನುಳ್ಳ ತೆಱದಿಂ ಪೇೞಿಂ || ೨೭ ||

ವ॥ ಎಂಬುದುಮವರೊಳ್ ಇರುಳ್ ತೊೞಲ್ದಿಣಿ[ಲ್ಗೊ]ತ್ತೆಯಿಟ್ಟ ಪಟ್ಟಾತನೇಕಾಂತದೊಳ್ ದಿನಾಂತದೊಳಗಣ್ಯಪುಣ್ಯಲಾವಣ್ಯಸಂಪನ್ನೆಯಪ್ಪ ಕನ್ನೆಯಂ ತನಗಾಟಿಸಿ ಬಂದೊಡನೊಲ್ಲದೆ ಮೊಱೆಗೊಂಡು ಕಱಿಪಿದ ಧನದೇವನ ಸಮಾನಮಾವನುಮಿಲ್ಲೆಂದಂ ತಂದ ಕುೞಿಯನಂದಿರುಳೊಳ್ಕೊಂದು ತಿಂದಾತಂ ಪಸಿದು ದೆಸೆದೆಸೆಗವ್ವಳಿಸಿ ಹಾಹಾಭೂತಚೇತಸನಾಗಿರ್ದು ಮೃದುಪಿಶಿತಾಹಾರಮಂ ಪಡೆದುಂ ಮೆಚ್ಚಿ ಕರುಣಿಸಿ ತಿನಲೊಲ್ಲದೆ ಕಾದು ಕಱಿಪಿದ ರಕ್ಕಸಂಗೆ ಮಿಕ್ಕವರುಳ್ಳೊಡೆ ಪೇೞಿಮೆಂದಂ ಸರ್ಪದಷ್ಟೆಯಂ ಕಾದುಕೊಂಡು ಜಾವಮಿರ್ದ್ದಾತಂ ನಿರ್ದೋಷಿಗಳ ಮೈಯೊಳಿಲ್ಲದ ದೋಷಂಗಳನಿಟ್ಟು ಕಟ್ಟಿ ಪಿಡಿದುಯ್ದರಸರಲ್ಲಿ ನಿಚ್ಚಂ ಮೆಚ್ಚುವಡೆವವನಮೂಲ್ಯಮಣಿಗಣಭೂಷಿತೆಯಾಗಿ ನಡುವಿರುಳ್ ಬರ್ಪ ಕೊಡಗೂಸಂ ಜಡಿದು ಪಿಡಿತಂದೊಪ್ಪಿಸದೆ ಕಱಿಪಿ ಜಸಮಂ ತಳೆದ ತಳಾಱನ ದೊರೆಗೆ ವರಲಾರುಮಾಱರೆಂದಂ ಕುಱಂಬರ ಪಳ್ಳಿಗೆವೋಗಿ ಕುೞಿಯುಂ ಕಳ್ದತಂದಾತನಱು ದಿಂಗಳರೆಯೇಱಿ ಹಱಿದು ಪಱಿದ (?) ಪರುಣೆಯಂ ಪಡೆದೊಡಂ ಕುಱುವಡಿಯಂ ಪಡೆದೆನೆಂದಿರ್ಪ ಕಳ್ಳನಂತಪ್ಪುರೀ ದಿವ್ಯವಸ್ತ್ರಾಭರಣಂಗಳಂ ಕೊಳ್ಳೆಂದು ಮುಂದಿಕ್ಕಿದೊಡವಱೊಳೊಂದುಮಂ ಕೊಳ್ಳದೆ ಪೋಗಲ್ವೇೞ್ದಿ ಕಳ್ಳನಂತೆ ಮೂಱುಂ ಲೋಕದೊಳೊಳ್ಳಿದರಾರಾನುಮುಳ್ಳೊಡೆ ನೀಮೆ ಪೇೞಿಮೆಂದನಿಂತಾ ನಾಲ್ವರುಂ ತಂತಮ್ಮ ಮನಕ್ಕನುಸಾರಿಯಾಗಿ ನೆಗಟ್ಟಿ ನೆಗೞ್ತೆಗಳಂ ನುಡಿವುದುಮವಂದಿರಂದಿರುಳಾಡಿದಾಟಮುಮಂದಿನಕೂಟಮುಮಂ ಕೂಡಿ ಬಂದೊಡೆ ಸುಮತಿ ಸುಮತಿವಿಕಾಸದಿಂ ಕಳ್ಳನೊಳ್ಳಿದನೆಂದವನನೆ ಕಳ್ಳನೆಂದಱಿದು

ಅವರೆಲ್ಲರುಮಂ ಪೋಗ ।
ಲ್ಕೆವೇೞ್ದು ಬೞಿಕ್ಕಂತೆ ಕಳ್ಳನೊಳ್ಳಿದನೆಂದಿ ॥
ರ್ದವನನಿರವೇೞ್ದು ಪಲತೆಱ ।
ದ ವಿಮೋಹಮುಮನುಂಟುಮಾಡಿ ಕೃತ್ರಿಮದಿಂದಂ ॥ ೨೮ ॥

ವ॥ ನಿನಗಮೆನಗಮೆನಿತು ಕಾಲಮಿರ್ಪೊಡಂ ಧನಮನೂನಮುಂಟು ಪೋಪಂ ಬಾಯೆಂದು ತನ್ನ ಮನೆಯ ಕಡಾರದ ಪೊನ್ನಂ ತಂದು ಮುಂದಿೞಿಪುವುದುಂ ಭೃತಕಂ ಕೃತಕಪ್ರಣಯಮೆಂದಱಿಯದೆ ನೆಱೆ ಕೂರ್ತಳೆಗೆತ್ತು ಮೆಯ್ಯಱಿಯದೆನ್ನ ಕಯ್ಯೊಳಂ ಕಿಱಿದರ್ಥಮಿರ್ದಪುದದುವನಿಲ್ಲಿಕ್ಕೆಂದು ತನ್ನ ಕಯ್ಯೊಳಿರ್ದ ಸಾಸಿರಗದ್ಯಾಣದ ಪೊಟ್ಟಣಮಂ ಸುಮತಿಯ ಕಯ್ಯೊಳ್ ಕೊಟ್ಟಾಗಳಾಕೆಯುಮದಂ ಕಳೆದುಕೊಂಡು ಕಿಱಿದುಬೇಗಮಾತನಂ ನಿದ್ರೆಗೆಯ್ಯಲ್ವೇಡಿ ಪುಸಿನಿದ್ರೆಗೆಯ್ದಿರ್ದು ಪೋಗಿ ಚಂಡಕೀರ್ತಿಗಾ ವೃತ್ತಾಂತಮನಱಿಪಿದೊಡಾತನವನಂ ಪಿಡಿದು ಚಂದ್ರವಾಹನಂಗೆ ತೋಱೆ ಕಳ್ಳನಂ ಕಿಱಿದನೆ ಕುಱಿದಱಿದಱಿಪಲ್ವೇೞ್ದೊಡಾತನನೊಯ್ದುಪರೆಂದು ಪೇೞ್ದಿತಂದೆಯ ಮಾತಂ ಕನ್ಯೆ ನಿರ್ಣಯಮಾಗಿ ಅವಕರ್ಣಿಸಿ ನೀಮೆನ್ನ ಕೈಕೊಂಡ ಕಳ್ಳದ ಬ್ರತಮಂ ಬಿಸುಡಲ್ವೇೞ್ದಿರ್ ಬಿಸುಟೆನಪ್ಪೊಡೆನಗಂ ಕೞಲ್ವೇೞ್ಕುಂ ಕೞ್ದಿನಪ್ಪೊಡೆನ್ನುಮುನೀ ಮಾರ್ಗದ ಕೊಲೆಯೊಳಲೆದು ಕೊಲ್ವರೆಂಬುದುಮಂತಾದೊಡಾ ತಪಮಿರ್ಕೆ ಮತ್ತಿನ ಬ್ರತಂಗಳನುೞಿದು ಪುೞಿಲೊಳೆ ಬರ್ಪಂ ನಡೆಯೆಂದು ಕಿಱಿದೆಡೆಯುಂ ನಡೆವುದುಂ ಮುಂದೊಂದೆಡೆಯೊಳ್

ನಯಹೀನರ್ಪಿಡಿದೊತ್ತಿ ಕೆನ್ನೆವರೆಗಂ ಕರ್ಣಂಗಳಂ ಕೊಯ್ದು ನಿ ।
ರ್ದಯದಿಂ ಪೀಡಿಸಿ ಬಳ್ಕುವೋಪಿನೆಗಮೆಲ್ವಂ ತಾಪಿನಂ ಮೇಗೆ ಮೂ ।
ಗಿಯ ಮೂಗಂ ತಲೆವಾರಕೊಯ್ದು ತಲೆಯೊಂದಂ ಕಂಠದೊಳ್ಕಟ್ಟಿ ಪಾ ।
ೞಿಯನೊಕ್ಕಾಕೆಯನಂದು ಬಂಧುಜನಮೆಲ್ಲಂ ನಿಂದು ನೋೞ್ಪಾಕೆಯುಂ ॥ ೨೯ ॥

ವ॥ ತನಗಿದಿರಾಗಿ ಬರ್ಪ ಪಾಣ್ಬೆಯುಂ ದುಂದುಱುಂಬೆಯುಂ ಕಂಡೀಕೆ ಗೆಯ್ದ ದೋಷಮಾವುದೆಂದು ಬೆಸಗೊಳ್ಳಿಮೆಂಬುದುಂ ನಾಗಶರ್ಮಂ ತಳಾಱನಂ ಬೆಸಗೊಂಡು

ನಾಗಶ್ರೀಗೆ ಪೇೞ್ಗುಮಾ ಚಂಪಾನಗರನಿಕಟೋದ್ದೇಶದೊಳ್ ಶ್ವೇತಪುರಮೆಂಬ ಪುರ ಮುಂಟಲ್ಲಿ

ಅನುಪಮ ಸಶ್ರೀಕಂ ಮ |
ತ್ಸ್ಯನೆಂಬ ಪರದಂಗೆ ಜೈನೆಯೆಂಬಳ್ ಕುಲಮಾ ||
ನಿನಿ ತದ್ಯುಗಕ್ಕೆ ಪೆಸರಿಂ |
ದೆ ನಂದನುಂ ಭದ್ರನುಮಿಾ ತನೂಭವರಿರ್ವರ್ || ೩೦ ||

ವ|| ಜೈನೆವೊಡೆವುಟ್ಟಿದಂ ಸೂರಸೇನನೆಂಬ ಪರದನಾತನ ಭಾರ್ಯೆ ಸುಮಿತ್ರೆಯೆಂಬಳವರ್ಗೆ ಮದಾಳಿಯೆಂಬ ಮಗಳ್ಪುಟ್ಟಿ ಬಳೆಯುತ್ತಿರೆ ನಂದನೊಂದು ದಿವಸಂ ಸುವರ್ಣ್ನದ್ವೀಪಕ್ಕೆ ಪರದುವೋಗುತ್ತಂ ಪನ್ನೆರಡು ವರುಷಕ್ಕಾಂ ಬಾರದೆ ತಡೆದೆನಪ್ಪೊಡೆ ಕನ್ನೆಯನೆನ್ನ ತಮ್ಮಂ ಭದ್ರಂಗೆ ಕುಡಿಮೆಂದು ತಮ್ಮ ಮಾವನಪ್ಪ ಸೂರಸೇನಂಗಂ ಸುಮಿತ್ರೆಗನುಪ್ಪಯಿಸಿ ಪೋಪುದುಮಿತ್ತಲಾ ಮದಾಳಿಯುಂ ವಿವಾಹಪ್ರಾಪ್ತೆಯಾಗಿ ಬಳೆಯುವಳೆಯೆ

ಪನ್ನೆರಡು ವರುಷದವಧಿಯು |
ಮಿನ್ನೆಱೆದುದು ಕೂಸು ಕಱಿಯೆ ಬಳೆದುದು ನಂದಂ ||
ತನ್ನೆಂದವಧಿಗೆ ಬಾರಂ |
ಕನ್ನೆಯುನಿನ್ನಿರಿಸಲಾಗ ಭದ್ರಂಗೀವಂ || ೩೧ ||

ವ|| ಎಂದು ಸೂರಸೇನಂ ಮದಾಳಿಯಂ ಭದ್ರಂಗೆ ಕುಡುವೆನೆಂದು ಪಸೆಯೊಳಿರಿಸಿ

ನೆಱೆ ಸಂತೊಸದಿಂ ಕೈನೀ |
ರೆಱೆಯಲ್ಕೆಂದಿರ್ಪ ಪದದೊಳತ್ಯಾಶ್ಚರ್ಯಂ |
ನೆಱೆದಿರೆ ಮದಾಳಿಗಯಸಂ |
ಪಱಪಡೆ ಬರ್ಪಂದದಿಂದೆ ನಂದಂ ಬಂದಂ || ೩೨ ||

ಬಂದ ನಂದನಂ ತಂದೆಯುಂ ಮಾವನುಂ ಕಂಡು ಮದಾಳಿಯೊಳ್ಮದುವೆ ನಿಲ್ಲೆಂಬುದುಂ ಭದ್ರಂಗೆ ಕುಡಲ್ವೇಡಿರ್ದ ಕೂಸನೆನಗೆ ಮದುವೆಯಾಗೆಂಬುದುಂ ಭದ್ರನುಂ ನಂದಂಗೆಂದು ಬಳಿದ ಕೂಸೆನಗೆ ಮೊಱೆಯಲ್ಲಳೆಂದಿರ್ವರು ಮೋರೋರ್ವರ ಮೇಲೆ ನೆವಮಿಟ್ಟು ಮಾಣ್ಬುದುಂ ಮದಾಳಿಯುಂ ನಂದನ ವನದಿಂ ಸರೋಜವನದಿಂದಮಗಲ್ದ ಮದಾಳಿಯಂತೆ ಮಱುಗಿ ತನ್ನ ತವರ್ಮನೆಯಲ್ಲಿ ರ್ಪುದುಮಲ್ಲಿಯೊರ್ವಂ ನಾಗಸೂರನೆಂಬ ಪರದನೊಳನವಂಗೆಣ್ಬರ್ಪೆಂಡಿರೊಳರವರೊಳಂ ತಣಿಯದತಿ ವಿಷಯಕಾಂಕ್ಷೆಯಿಂ ಮದಾಳಿಗೆ ಬಸವಾಗಿ ಮಱಿವಾಱುತ್ತಿರ್ಪುದುಂ ತಳಾಱನಱಿದು ಪಿಡಿದಾ ಪಾಣ್ಬನಂ ಕೊಂಡು ತಲೆಯನಱಿದೀಕೆಯು ಕೊರಲೊಳ್ಕಟ್ಟಿ ಕಿವಿಮೂಗನಱಿದೊಂದೆವಱಿಗುಟ್ಟುತಂ ಪೋಗುತಿರ್ದಪರೆಂಬುದುಂ

ಜಸಮುಱಿವಂತಿರೀ ಬ್ರತಮನಾ ಬ್ರತಿಗೊಪ್ಪಿಸಿ ಬಂದೆನಪ್ಪೊಡಾ ।
ನಸತಿಯೆನಾಗಿ ದುಶ್ಚರಿತ ವೃತ್ತಿಯೊಳಗ್ಗಲಿಸಲ್ಕೆವೇಱ್ಕುಮಂ ।
ತೆಸಗಿದೆನಪ್ಪೊಡೋವದೆ ಖಳರ್ನ್ನರೆ ತಂದು ಕಱುತ್ತು ಪೂಣ್ಕೆವೆ ।
ತ್ತೊಸೆದೊಳಗಾಗಿ ಮೂಗನರಿದೀ ವಿಧಿಯಾಗಿರೆ ಮಾಡದಿರ್ಪ್ಪರೇ ॥ ೩೩ ॥

ಅಂತಾದೊಡೆನಗೆ ನೀವೞಲುಂ ನೀರಿೞಿಯಲುವಣ್ಮದ ಸಾವು ಸಮನಿಸುಗುವುದು ಕಾರಣದಿಂ

ಇನಿತೊಂದು ಪರಾಭವಪದ ।
ಮನೆಯ್ದುವರ್ಪಾರದರದೊಳೆಂದಾಂ ಪರದಾ ।
ರ ನಿವೃತ್ತಿಗೆಯ್ದಿನೆನೆ ಪೇ ।
ಟ್ದಿ ನಾಲ್ಕುಮಂ ತಳೆದು ಮಗಳೆ ತೊಱೆ ನೀಂ ಪೆಱವಂ ॥ ೩೪ ॥

ಎಂದು ಮತ್ತಮಂತೆ ಬರ್ಪಾಗಳ್

ಕಿವಿಯಂ ಕೀಲ್ಕೊಳ್ವಿನಂ ಕರ್ಬುನದ ಸಲಗೆಯೊಳ್ ಬಿಟ್ಟ ನಿಟ್ಟೆಲ್ವುಗಳ್ ತೋ।
ಱುವಿನಂ ಕಾಯ್ದಿರ್ಕುೞಿಂದಿರ್ಕುೞಿಸೆ ಕುರವದಿಂ ಕೂಡೆ ನೆತ್ತರ್ತೆರಳ್ದು

ಣ್ಮುವಿನಂ ಮೆಯ್ಯೆಲ್ಲಮಂ ಜರ್ಜರಿಸಿ ಜವಜವಾಗಿರ್ದನಂ ಗುರ್ದಿ ಹಾಹಾ
ರವದಿಂ ಶೂಲಾಗ್ರದೊಳ್ ಬಾಯುೞಿದೊಳಱುವಿನಂ ಕೊಲ್ವುದಂ ಕನ್ನೆ ಕಂಡಳ್
|| ೩೫ ||

ಕಂಡೀ ಪ್ರಚಂಡತುಂಡನ ಮಾಡಿದ ದೋಷಮಾವುದಾಗಿ ನಾನಾ ವಿಧದ ವಧೆಗಳಂ ಮಾಡಿದಪರಿದಂ ಬೆಸಗೊಂಡು ಪೇೞೆನೆಂಬುದುಂ,ನಾಗಶರ್ಮನಾ ಪ್ರಪಂಚ ಮೆಲ್ಲಮಂ ತಳಾಱನಂ ಬೆಸಗೊಂಡು ತಿಳಿಯೆ ಪೇೞ್ಗುಮಾ ಕೊಲೆಪಡೆವಾತಂ ಚಂದ್ರ ವಾಹನನ ಕೀಲಾರಿಗಂ ವೀರಪೂರ್ಣನೆಂಬನೊಂದು ದಿವಸಮಲ್ಲಿಯ ತುಱು ಪಳ್ಳಿಯ ಗೋವುಳಿಗರೊಳ್ಪೋಟಿಗೆಯ್ದುೞಿದಾಡುವ ಬೀಡಿನೆಮ್ಮೆಗಳಂ ಪಿಡಿದಂತರಸ ಗೊಪ್ಪಿಸುವುದುಮರಸನೀತನ ಭಕ್ತಿಗಂ ವ್ಯವಸಾಯಕ್ಕಂ ಮೆಚ್ಚಿ ತನ್ನ ತಂದೆಮ್ಮೆ ಗಳೊಳೊಂದುಮಂ ಕೊಳ್ಳದೆ ನೀನೇ ಕೊಳ್ಳೆಂದು ಕೊಟ್ಟೊಡಾ ದಯೆಗೆ ನಯಂಬಡೆದೆ ನೆಂದು ತಲೆಕೆೞಗಾಗಿ ಮೇಗುಗಾಣದೆ ಮತ್ತಂ ಪೆಱರ ಪುಲವುಂ ಜೀವಧನಂಗಳನರ ಸರ ಕಾಪಿನ ಪೊಲನಂ ಪೊಕ್ಕುವೆಂದುಂಡಿಗೆಯೊತ್ತಿಕೊಳುತ್ತು ಮೂೞಿಗವಾದೆಡೆಗಳೊಳ್ ಝೂಳೆಯಂಗೊಳುತ್ತುಮನಿತಱೊಳಂ ತಣಿಯದೆ ಚಂದ್ರಮತೀ ಮಹಾದೇವಿಯ ಕೀಲಾರದ ಧೇನುಗಳಂ ಸೂಱೆಗೊಳ್ವಂತೆ ಕೊಂಡುಪೋದೊಡೆ ಚಂದ್ರಮತಿ ಚಂದ್ರ ವಾಹನನಲ್ಲಿಗೆ ವಂದು

ಆರೊಳಮೆಂದುಮಿಲ್ಲದ ಪರಾಭವಮಿಂದೆನಗಾಯ್ತು ನಿನ್ನ ಕೀ
ಲಾರಿಗ ವೀರಪೂರ್ಣ ಭಟನಳ್ಕುಱದೊಟ್ಟಜೆಯಿಂದಮೆನ್ನನಾ
ಬಾರಿಪರೆಂದು ಗೋವುಮನನಾಕುಲಮಿೞ್ಕುಳಿಗೊಂಡು ಪೋದನೇ
ಕಾರಣದಿಂದೆ ಪೇೞನಗೆ ನೀಂ ದಯುಗೆಟ್ಟೆ ಪುರಾಧಿನಾಯಕಾ || ೩೬ ||

ಎಂದು [ಪೇೞೆ] ಕ್ರೋಧಾನಳಾರಕ್ತನೇತ್ರನಾಗಿ ವೀರಪೂರ್ಣನಂ ತನ್ನಲ್ಲಿಗೆ ವರಿಸುವುದುಂ

ಬೆದಱೆ ಪುಲಿ ಬಾವಿಯೊಳ್ ಬಿ |
ರ್ದದನಱೆದೊಡೆ ಗುಂಡುಗೊಂಡು [1][ಕೊಂದಿ][1]ಕ್ಕ ಗುಮ |

1 ಱು (ಕ.ಗ)

ಲ್ಲದೆ ಪಿಡಿದು ತೆಗೆವರಾರೆಂ ।
ಬುದನೆನಿಸಿ ಜನಂ ತಗುಳ್ದು ತನತನಗೆಂಗುಂ ॥ ೩೭ ॥

ವ॥ ಈತನಿತನಿಜಿ³ೊಳಗೆ ಮಾಣ್ದನಲ್ಲ ಎಮ್ಮೆಮ್ಮ ಜೀವಧನಂಗಳನಾಯಿಲಂ ಗೊಂಡಿರ್ದಪನೆಂಬುದುಮೆನ್ನ ಕೊಟ್ಟನಿತಜಿ³ೊಳಂ ತಣಿಯದೆ ಮತ್ತೆಯತಿಕಾಂಕ್ಷೆಯಿಂ ಲೋಗರೊಡವೆಯಂ ಝೂಳಿಯಂಗೊಂಡನಿವನಂ ಪಲವುದಿವಸಂ ನವೆಯಿಸಿ ಕೊಲ್ಲಿ ಮೆಂಬುದುಂ ತಳಾಜಿರೀತನನತಿದುಃಖಾಕ್ರಂದನಮುಣ್ಮೆ ಗೋಣ್ಮುರಿಗೊಂಡು ಕೊಂದು ಕೂಗಿದಪರೆಂಬುದುಂ ನಾಗಶ್ರೀ ತನ್ನ ತಂದೆಯನೆಂದಳೆಂದುವುಮಿಂತಪ್ಪ ಸಾವುಂ ನೋವುಮಾಗದಿರ್ಕೆಂದು ಗುರುಗಳಲ್ಲಿ ಕೊಲ್ಲದ ಪುಸಿಯದ ಕಳದ ಪರದಾರಗಮ ನಂಗೆಯ್ಯದ ಪರಿಗ್ರಹಕಾಂಕ್ಷೆಗೆಯ್ಯದಯ್ದುಮಣುವ್ರತಂಗಳಂ ಕೈಕೊಂಡೆನೀಗಳವಂ ಮಗುಳೊಪ್ಪಿಸಿದೆನೆಪ್ಪೊಡೆ ಇಂತೀ ಇನಿಬರುಮೆಯ್ದಿದ ದುಃಖಂಗಳನೆಯ್ದಿ ಮೇಗೆ ನರಕಂಬುಗುವೆನೆಂಬುದುಂ ತಾನುಮಾಸನ್ನಭವ್ಯನಪ್ಪುದುಕಾರಣಂ

ಕೊಲೆಯೆಂದಸತ್ಯಮೆಂದ ।
ಗ್ಗಲಿಸಿದ ಕಳವೆಂದುಂ ಪಾದರಮೆಂದು ಪಳಂ ॥
ಚಲೆವ ಪರಿಗ್ರಹಮೆಂದಿವ ।
ಜಿ³ೊಳಾದಪೇಕ್ಷೆಯನುಪೇಕ್ಷಿಸಬ್ಜದಳಾಕ್ಷೀ ॥ ೩೮ ॥

ವ॥ ನೀನೀ ಬ್ರತಂಗಳಂ ನಿಶ್ಚಳಮಾಗೆ ತಾಳ್ದುವುದು ನಿನಗೆ ದರ್ಪದಿಂ ಬ್ರತಂಗಳಂ ಕೊಟ್ಟ ವ್ರತಿಯನಾದರ್ಶಿಸಿ ಬರ್ಪಂ ಬಾಯೆಂದು ನಾಗಶರ್ಮಂ ನಾಗ ಶ್ರೀಯನೊಡಗೊಂಡು ಬಂದು ನಾಗಸ್ಥಾನದ ಪ್ರಥಮದ್ವಾರದೊಳ್ ನಿಂದು ಸೂರ್ಯ ಮಿತ್ರಾಚಾರ್ಯರಂ ಕಂಡು

ಅನವದ್ಯ॥ ಕ್ಷಿತಿಯೊಳಾನಭಿವಂದಿತನೆಂ ವಿಪ್ರೋತ್ತಮನೆಂ ಸಕಳೋರ್ವರಾ।
ಪತಿಕಿರೀಟತಟಾರ್ಚಿತಪಾದದ್ವಂದ್ವನೆನಪ್ರತಿಮಪ್ರಜಾ
ಪತಿಸಮಾನನೆನೆನ್ನಮಗಳ್ಗೀನಾನುಮುಪಾಯದ ಮಾಯೆಯಿಂ।
ವ್ರತಮನಾಗ್ರಹದಿಂದಮೆ ನೀವಿಂತೀವುದಿದಾವುದು ಸಂಮದಂ ॥ ೩೯ ॥

ವ॥ ಎಂಬುದುಮಾ ಮುನೀಂದ್ರರ್ ನಾಗಶರ್ಮನ ಭವ್ಯತೆಯು ಕಾಲಲಬ್ಧಿಯು ಮನಲ್ಲಿಯ ವಿನೇಯಜನಂಗಳೆಲ್ಲಮಿಂತಲ್ಲದೆ ಸದ್ಧರ್ಮಕ್ಕೆ ಬಾರರೆಂಬ ಮಾರ್ಗ ಪ್ರಭಾವಮುಮಂ ದಿವ್ಯಜ್ಞಾನದಿಂದಮುಪಲಕ್ಷಿಸಿ ಕೂಸಪ್ಪೊಡೆ ಎಮ್ಮ ಕೂಸು ನಿನಗೆತ್ತಣ ಮಗಳೆಂಬುದುಮಾ ಕನ್ನೆ ತನ್ಮುನೀಂದ್ರಪಾದಾರವಿಂದದ್ವಂದ್ವದೊಳ್ ನಿರ್ಬಂಧ್ವಭಾವದಿಂ ವಿನೀತೋತ್ತಮಾಂಗೆ ಕೆಲದೊಳ್ ಕುಳ್ಳಿರ್ಪುದುಮವರ ಮಹಾ ತಪಃಪ್ರಭಾವದಿಂದಾಜ್ಞಾಮಾಹಾತ್ಮ್ಯದಿಂದೇನುಮೆನಲಣ್ಮದೆ ಬಾಯ್‌ಬಿಟ್ಟು ಕೀಲಿಸಿದಂತಲ್ಲಿ ತಳರದಿರ್ಪುದುಂ

ಅಮಿತಾಳಾಪಂಗಳಿಂ ದೊಮ್ಮಳಿಸಿ ಕಿನಿಸಿ ಕೊಟ್ಟೊಳ್ವ ತಾತ್ಪರ್ಯಮೇನೆ।
ಮ್ಮ ಮಗಳ್ ಬಂದೆಮ್ಮ ಕೈಯೊಳ್ ಬ್ರತಮನೊಸೆದು ಕೈಕೊಂಡೊಡೇನಾಯ್ತು ಪೇಱಿ
ನ್ನೆಮಗೀ ಕೂಸಾರ್ಗೆ ನೀಮಾರ್ಗಿದು ಗುಣದೊಳಗಲ್ಲಿಲ್ಲಿರಲ್ವೇಡ ನಿಮ್ಮಾ। ।
ಶ್ರಮದತ್ತಲ್ಪೋಗಿಮಿರ್ದಂದರಸರ ದೆಸೆಯಿಂ ನಿಕ್ಕುವಂ ಪೊಲ್ಲದಕ್ಕಂ ॥ ೪೦ ॥

ಈಯೆಡೆಯಿಂ ಪೋಗೆಲೆ ಪಾ।
ರ್ವಾಯೆನೆ ತಲ್ಲಣಿಸಿ ಪಾರ್ವನಬ್ರಾಹ್ಮಣ್ಯಂ॥
ಭೋಯೆಂದು ಪುಯ್ಯಲಿಡುತುಂ।
ಬಾಯಂಬಿಡುತುಂ ನೃಪೇಂದ್ರಸಭೆಯಂ ಪೊಕ್ಕಂ ॥ ೪೧ ॥

ವ॥ ಅಂತು ತನ್ನಾಳ್ದನಪ್ಪ ಚಂದ್ರವಾಹನನರೇಂದ್ರನಂ ಕಂಡು

ಎನಗಾರ್ಬಲ್ಲಿದರೆಂದು ಗಂಡುಗೆಡದೊರ್ವಂ ದೇವ ಠಕ್ಕಿಕ್ಕಿ ಸಾ।
ಧನಸಂಮೋಹನದಿಂದಮೆನ್ನ ಮಗಳಂ ಬಲ್ಲಾಳ್ತನಂಗೆಯ್ದು ನಿ।
ನ್ನ ನರಾಧೀಶ್ವರನಕ್ಕೆ ಬರ್ಕೆ ಕುಡೆನೆಂದೊಟ್ಟೈಸಿ ಕೈಕೊಂಡು ನಿಂ।
ದನಿದಂ ನೀನವಧಾರಿಸೆಂದು ತೊವಲಂ ಮುಂದಿಕ್ಕಿದಂ ಭೂಪನಾ ॥ ೪೨ ॥

ವ॥ ಆಗಳಾ ಮಹೀವಲ್ಲಭನತ್ಯಾಶ್ಚರ್ಯಂಬಟ್ಟು ರಿಷಿಯರಿಂತೊಟ್ಟ ಕೌತುಕಮುಂ ನೋೞ್ಪ ಕುತೂಹಳದಿನಾತ್ಮೀಯ ಪ್ರಾಣೇಶ್ವರಿಯಪ್ಪ ಚಂದ್ರಮತಿ ಮಹಾದೇವಿವೆರಸು ಅಶೇಷಸಾಮಂತಮಹಾಸಾಮಂತಮಂಡಳೇಶ್ವರಶ್ರೇಷ್ಠಿ ಸಚಿವಪ್ರಧಾನ

ಪಂಡಿತಪ್ರಕರಪ್ರಭೃತಿಪರಿಜನಾನ್ವಿತನಾಗಿ ನಾಗಸ್ಥಾನಕ್ಕೆ ವಂದು ಯತಿಪತಿಗಳಂ ಕಂಡು ವಿನಯದಿಂ ಬಂದಿಸಿ ತದಾಸನ್ನಪ್ರದೇಶದೊಳ್ಕುಳ್ಳಿರ್ದು

ಮುನಿವೃಂದಾರಕವಂದ್ಯ ಪೇಱಿಮಿನಿತೊಂದಾಕ್ರೋಶವಿೀ ನಾಗಶ
ರ್ಮನೊಳೇ ಕಾರಣದಿಂದವಿಂದು ದೊರೆಕೊಂಡತ್ತಾವ ತಾತ್ಪರ್ಯದಿಂ ।
ವಿನಯೋಲ್ಲಂಘನವಂ ಪ್ರಭಾವಿಸಿದನೀ ಸಂಬಂಧದೊಂದಂದಮಂ
ತೆನೆ ಭೂಭೃತ್ಪತಿಗಾ ಜಗತ್ಪತಿ ಸಮಂತಿಂತೆಂಗುವಿೀಯಂದದಿಂ ॥ ೪೩ ॥

ಜಗತೀವಲಯಮುಮಱಿವ ।
ನ್ನೆಗನೆಮ್ಮ ಮಗಳ್ ಬ್ರತಂಗಳಂ ಕೇಳ್ದು ಮನಂ ॥
ಬುಗಿಸಿದೊಡೆಂ [1]ತಬಳೆ[ಗೆ[1]] ತಾ ।
ಳಗೊಟ್ಟೆಯೆಂದೆಮ್ಮೊಳಿಂತು ತೋಟಗೆ ವಂದಂ ॥ ೪೪ ॥

ಎನೆ ನಾಗಶರ್ಮನೆಂದಂ ।
ಜನಪತಿ ನೀನಾದಿಯಾಗಿ ನೆಱೆ ನೆರೆದಿರ್ದೀ ॥
ಜನಮೆಲ್ಲಮಱಿವುದಾನೀ ।
ತನುಜೆಯನೀ ಫಣಿಗೆ ಪರಸಿ ಪಡೆದ ಸ್ಥಿತಿಯಂ ॥ ೪೫ ॥

ವ॥ ಎಂಬುದುಮಾ ಮುನೀಂದ್ರರೀ ಕನ್ನೆ ನಿಮ್ಮ ತನುಜೆಯಪ್ಪುದನೆಲ್ಲರು ಮಱಿವರಪ್ಪೊಡೆ ನಾಲ್ಕು ವೇದಮುಮನಾಱಂಗಮುಮಂ ಆಱು ತರ್ಕಮುಮಂ ಪದಿನೆಂಟು ಧರ್ಮಶಾಸ್ತ್ರಂಗಳಂ ವ್ಯಾಕರಣಕಾವ್ಯನಾಟಕಛಂದೋಲಂಕಾರಗ್ರಹ ಗಣಿತವೈದ್ಯಾದಿ ಶಾಸ್ತ್ರಂಗಳೊಳ್ ಪರಿಣತರ್ ನೀಮುಮಪ್ಪಿರಂತನಿತುಮನೀ ಕೂಸಿಂ ಗೋದಿಸಿ ಶಿಕ್ಷಿಸಿದುದಂ ತೋಱಿದಿರಪ್ಪೊಡೆ ಕೂಸು ನಿಮ್ಮ ಮಗಳಪ್ಪುದು ನಿಶ್ಚಯ ಮೆಂಬುದುಮುದೆಲ್ಲಮಂ ನಾಗಶರ್ಮನವಧಾರಿಸಿ

---

1. ತಟ್ಟಬಳೆ (ಗ) ತೆಬಳೆ (ಕ)

ಇನಿತುಮನಾನಾವಗಮುಱಿ ।
ವೆನಲ್ಲೆನೀ ಕನ್ನೆಯಂ ಮನೋಮುದದಿಂದಾ ॥
ನನಿತಱಿಕೊಳೊಂದುಮನೋದಿಸಿ ।
ದೆನಲ್ಲೆನಿಲ್ಲದುದನೆಂತು ಪುಸಿದುಂಟೆಂಬೆಂ ॥೪೬॥

ವ॥ ಎಂಬುದುಮಾ ಮುನೀಶ್ವರರಾ ಧರಾಧೀಶ್ವರನ ಮೊಗಮಂ ನೋಡಿ

ಮಾಲಿನಿ॥ ಅಸದೃಶಮೆನೆ ಮುನ್ನಂ ಶಬ್ದಶಾಸ್ತ್ರಾದಿ ವಿದ್ಯಾ ।
ವಿಸರಮನುಚಿತಾಳಾಪಂಗಳಿಂ ಪಾಂಗುವೆತ್ತೋ ।
ದಿಸಿದೆಮದಱಿನೀ ಕೂಸೆಮ್ಮ ಕೂಸೆಂಬುದುಂ ವಾ ।
ಕ್ಪ್ರಸರಮೆಸೆಯೆ ಪಾಪಾಕ್ಷೇಪನಂ ಭೂಪನೆಂಗುಂ ॥ ೪೭ ॥

ವ॥ ನಿಮ್ಮಡಿ ನೀಮಿಾ ಕನ್ನೆಯಂ ಮುನ್ನವೋದಿಸಿದಿರಪ್ಪೊಡಿನ್ನುಮೆನ್ನ ಮುಂದೆಯೋದಿಸಿಂ ಕೇಳ್ವ ಜನದ ಮನದ ಸಂಶಯಮಂ ಬಿಡಿಸಿಮೆಂಬುದುಮಾ ಕನ್ಯಕೆಯ ಮಸ್ತಕಾಗ್ರದೊಳಾತ್ಮೀಯ ದಕ್ಷಿಣಹಸ್ತಪಲ್ಲವಮನಳಂಕರಿಸಿದಾಗಳ್

ಶ್ರೀಗಂ ವಾಕ್ಶ್ರೀಗಮಿಂತೀಕೆಯೆ ಮಿಗಿಲೆನಿಪೈಶ್ವರ್ಯ ಸಂಪನ್ನೆಯಂ ಸಂ ।
ವೇಗವ್ಯುತ್ಪನ್ನೆಯಂ ದುರ್ಧರಕುಮತನಗೋದ್ಭಿನ್ನೆಯಂ ವಿಪ್ರವಂಶ ।
ಶ್ರೀಗರ್ಭೋತ್ಪನ್ನೆಯಂ ವಿಹ್ವಳವಿಷಯಲತಾಚ್ಛಿನ್ನೆಯಂ ಬೇಗಮೆಂದರ್ ।
ನಾಗಶ್ರೀ ಕನ್ನೆಯಂ ಚೆನ್ನೆಯುನಮೃತಪದಾಸನ್ನೆಯಂ ವರ್ಣಿನಾಥರ್ ॥ ೪೮ ॥

ಮೊದಲೊಳ್ ನಿನ್ನಯ ವಾಯುಭೂತಿಯೆನಿಸಿರ್ದಾ ಜನ್ಮದೊಳ್ ಸನ್ಮನೋ
ಮುದದಿಂ ರಾಜಗೃಹಾಭಿಧಾನಪುರದೊಳ್ ತಾತ್ಪರ್ಯವೆಂದೋದಿದಂ
ದದೆ ಲೋಕಕ್ಕೆ ವಿಚಿತ್ರಮಾಗೆ ಮಗಳೇ ಸಂದೀ ನೃಪಾಸ್ಥಾನಮ
ಧ್ಯದೊಳಿನ್ನೋದಿಸಿದೋದನೋದಿ ಮೆಱೆ ನೀಂ ನಿನ್ನೊಂದು ಮಗ್ಗುಂಫಮಂ ॥೪೯॥

ಎನಲೊಡಮಾ ಭವದೊಳ್ ತೊ ।
ಟ್ಟನಿತುಂ ವೃತ್ತಾಂತಮಂತರಂಗದೊಳಾಗಳ್ ॥

ಜನಿಯಿಸೆ ಮೃದುಮಧುರ ಗಭೀ।
ರ ನಿನದಮೆಸೆದುದು ಮಹಾದ್ಭುತಾಡಂಬರದಿಂ ॥ ೫೦ ॥

ದೆಸೆದೆಸೆಗೆ ಸುಧಾಪ್ರಸರಂ।
ಪಸರಿಸಿ ಭೋರ್ಗರೆದು ಕೂಡೆ ಕವಿದಪುದೆನಿಸಿ॥
ತ್ರಸದಳವಾಗಿರೆ ಕನ್ನೆಯ।
ಮಿಸುಗುವ ಮುಖಚಂದ್ರಚಂದ್ರಿಕಾವಾಕ್ಪ್ರಸರಂ ॥ ೫೧ ॥

ಹೃದ್ಯವ್ಯಾಕರಣಪ್ರಸನ್ನತರಪೂರ್ವಾಭ್ಯಾಸವಿನ್ಯಾಸ ತ।
ದ್ವಿದ್ಯಾಸಂಪದವಾಗಳಾಕ್ಷಣದೊಳಾದಾಶ್ಚರ್ಯಮುಪ್ಪನ್ನಮೇಂ।
ಸದ್ಯಂ ಸಾರ್ದುದೊ ತತ್ಕುಮಾರಿಕೆಗೆ ಸಯ್ಪಿಂ ಸಪ್ತಭಿರ್ಜಾಯತೇ।
ವಿದ್ಯಾಯೆಂಬುದು ತಪ್ಪದಾಯ್ತೆನೆ ತದೀಯಾಸ್ಥಾನಭೂಮಧ್ಯದೊಳ್ ॥ ೫೨ ॥

ಪ್ರತಿಭಾಸಂಸ್ಕೃತಿಯಿಂ ಸಲಕ್ಷಣತರಂಗೋಪಾಂಗದಿಂ ವಿಶ್ವವಿ।
ಶ್ರುತವರ್ಣಾರ್ಥದಿನರ್ಥದೃಷ್ಟಿಯಿನಳಂಕಾರೋಕ್ತಿಯಿಂ ನಿರ್ಣಯೋ।
ಚಿತವಿನ್ಯಾಸದಿನತ್ಯುದಾತ್ತರಸದಿಂದಾ ಕನ್ಯೆ ಸಾಕ್ಷಾತ್ಸರ।
ಸ್ವತಿ ತಾನೆಂಬಿನಮೇಂ ಪ್ರಭಾವಿಸಿದಳೋ ನಾನಾ ಕಳಾಳಾಪಮಂ ॥ ೫೩ ॥

ನೆರೆದಾ ರಾಜಸಭಾಂತರಾಳದೊಳುದಾತ್ತಾರ್ಥೋಕ್ತಿಯಿಂ ತನ್ನೊಳಾ।
ದೊರೆಯೆಂಬನ್ನೆಗಮುದ್ಗತಪ್ರಥಿತಶಬ್ದಾರ್ಥೋಕ್ತಿಯಿಂ ವ್ಯಕ್ತಮಾ।
ಗಿರೆ ವಕ್ಖಾಣಿಸಿ ತದ್ವಿದರ್ಪೊಗಟ್ದು ಬಾಃಪೆಂಬನ್ನೆಗಂ ತತ್ಪತಿಂ।
ವರೆ ವೇದಾದಿ ಕಳಾಕಳಾಪಮನಶೇಷಾಳಾಪದಿಂದೋದಿದಳ್ ॥ ೫೪ ॥

ಸಕಲವ್ಯಾಕರಣಾರ್ಥಶಾಸ್ತ್ರನಿಪುಣರ್ಮಾರ್ಕೊಂಡರಿಲ್ಲಾರ್ಕೆ ತಾ।
ರ್ಕಿಕರೊಟ್ಟೈಸಿದರಿಲ್ಲ ಸತ್ಕವಿಗಳಡ್ಡಂ ಬಂದರಿಲ್ಲಂತೆ ಭುಂ।

ಭುಕವಿಾ ಲೋಕದಳಾರೊಳಂ ಜನಿಯಿಸಿತ್ತಿಲ್ಲೆಂಬಿನಂ ವಿಪ್ರಕ ।
ನ್ಯಕೆ ವಿದ್ವಜ್ಜನದಿಂದಮುಂದು ಪಡೆದಳ್ ಪಾಂಡಿತ್ಯ ಸೌಂದರ್ಯಮಂ ॥ ೫೫ ॥

ಇದು ದಲ್ ಕೌತುಕಮಿಂತಿದದ್ಭುತಮಿದೊಂದಾಶ್ಚರ್ಯಮಿಾ ಬೋಧಮಿಾ ।
ಚದುರೀ ವಾಗ್ವಿಭವಪ್ರಪಂಚಮಬಳಾ ಸಂದೋಹದೊಳ್ ಮುನ್ನಮಾ ।
ಗದುದಿನ್ನೆಯ್ದದುದೀಗಳಿಲ್ಲದುದು ಪೇೞೀ ಕನ್ಯೆ ತಾನೆಂದು ಪು ।
ಟ್ಟಿದಳೆಂದೋದಿದಳೆಂದು ಕಲ್ತಳೊ ಕಳಾಕೌತೂಹಳಾಳಾಪಮಂ ॥ ೫೬ ॥

ವ॥ ಎಂದು ಸಭಾಸದರ್ಮೆಚ್ಚಿ ಬಿಚ್ಚಳಿಸಿ ಪೊಗೞ್ವಿನಮಾ ಕನ್ನೆ ವಾಯು ಭೂತಿಯಾದ ಭವದೊಳ್ ತಾಂ ಮುನ್ನೋದಿದೋದುಗಳನಿತುಮನತಿರುಚಿರಮ್ಮಪ್ಪುದು ಮಧುರವಚನರಚನೆಗಳಿನೋದಿ ವಾಕ್ಪ್ರಭಾವಮಂ ಪ್ರಕಟಿಸುವುದುಂ ಚಂದ್ರವಾಹನ ನರೇಂದ್ರನಾ ಮುನೀಂದ್ರರ ಮೊಗಮಂ ನೋಡಿ

ಜಗಮಱಿಯಲೀ ದ್ವಿಜನ್ಮನ ।
ಮಗಳಿಂತೀ ಕನ್ನೆ ಮುನ್ನಮೋದಿದ ವೇದಾ ॥
ದಿಗಳನೊಱಲ್ದೀಗಳುದಾ ।
ತ್ತ ಗೀತದಿಂದೋದಿದಂದಮಿದು ಬಿಸವಂದಂ ॥ ೫೭ ॥

ನೆನೆದೊಡೆ ವಿಸ್ಮಯಮಾದಪು ।
ದು ನಾಗಶರ್ಮಂಗೆವುಟ್ಟಿ ನಾಗಶ್ರೀ ತೊ ॥
ಟ್ಟನೆ ನಿಮ್ಮ ಮುಂದೆ ವಾಕ್ಶ್ರೀ ।
ಯೆನಿಸಿದ ತೆಱನೆನಗೆ ವಿಮಳಚಾರುಚರಿತ್ರಾ ॥ ೫೮ ॥

ಮನದೊಳ್ ಕೌತೂಹಳಂ ಪುಟ್ಟಿದಪುದಿದಱ ವೃತ್ತಾಂತದೊಂದಮಂ ನೀ ।
ಮೆನಗೀಗಳ್ ವ್ಯಕ್ತಮಾಗಲ್ ಬೆಸಸಿಮೆನೆ ಮುನೀಂದ್ರಾಭಿವಂದ್ಯಂ ಜಗದ್ವಂ ।

ದ್ಯನನಿಂದ್ಯಂ ಜ್ಞಾನಶೋಭಾಕರನಮಳಿನ ಚಾರಿತ್ರರತ್ನಾಕರಂ ಭ|
ವ್ಯನಿಧಾನಂ ಪಾಪಹೀನಂ ಪರಮಜಿನಮತಾಂಭೋಜಿನೀ ರಾಜಹಂಸಂ || ೫೯ ||

ಇದು ಸಮಸ್ತವಿನೇಯಜನವಿನುತ ಶ್ರೀವರ್ಧಮಾನಮುನೀಂದ್ರವಂದ್ಯ
ಪರಮಜಿನೇಂದ್ರಶ್ರೀಪಾದಪದ್ಮವರಪ್ರಸಾದೋತ್ಪನ್ನ ಪ್ರಸನ್ನ
ಸಹಜಕವೀಶ್ವರ ಶ್ರೀ ಶಾಂತಿನಾಥಪ್ರಣೀತಮಪ್ಪ
ಶ್ರೀ ಸುಕುಮಾರಚರಿತಪುರಾಣ
ದೊಳ್ ನಾಗಶ್ರೀಯ ಭವ
ಸ್ಮರಣ ವರ್ಣ್ಣನಂ
ಸಪ್ತಮಾಶ್ವಾಸಂ

# ಅಷ್ಟಮಾಶ್ವಾಸಂ

ಶ್ರೀಪತಿಯೆನೆ ನೆಗಟ್ದಂಗೆ ಮ
ಹೀಪತಿ ಬೆಸಗೊಂಡವಾಟ್ಕೆಯಿಂ ಪೇಟ್ದಿಂ ಸಂ
ಕ್ಷೇಪದಿನನೂನವಚನಾ
ಳಾಪದಿನಾಗಳ್ ಸರಸ್ವತೀ ಮುಖ ಮುಕುರಂ ||೧||

ವ|| ಈ ಕನ್ಯಾರತ್ನಮಿಾ ಭವಕ್ಕಾಱನೆಯ ಭವದೊಳೀಯಿರ್ದಗ್ನಿಭೂತಿ ರಿಷಿಯರಿಂ ಕಿಱಿಯಂ ವಾಯುಭೂತಿಯೆಂಬಂ ದ್ವಿಜಾತ್ಮಜನಿವರೊಡನೆಮ್ಮ ಸಮಿಾಪದೊಳ್ ಸಕಲಶಾಸ್ತ್ರಂಗಳನೋದಿದಿಂ ಬೞಿಯಮೆಮ್ಮೊಳಾದ ಮಾನಕಷಾಯದಿಂ ಬೆಳ್ಗತ್ತೆಯುಂ ಪೇಪಂದಿಯುಂ ನಾಯುಮಾಗಿ ಮತ್ತಮಿಾ ಚಂಪಾಪುರದೊಳ್ ಮಾದೆಂಗಕುಲದೊಳ್ ಜಾತ್ಯಂಧಕಿಯಾಗಿ ಪುಟ್ಟಿ ಬೆಳೆದೀ ವ್ರತಿಗಳ ಬೋಧನೆಯಿಂದ ಣುವ್ರತಂಗಳಂ ಕೈಕೊಂಡು ಬೞಿಕ್ಕ ಭೋಗಾಸಕ್ತೆಯಾಗಿ ನಿದಾನಂಗೆಯ್ದು ನಿಮ್ಮ ಪುರೋಹಿತನಪ್ಪ ನಾಗಶರ್ಮಂಗಂ ತ್ರಿವೇದಿಗಂ ಮಗಳಾಗಿ ಪುಟ್ಟಿದೊಡೆ ನಾಗರ್ಗೆ ಪರಸಿ ಪಡೆದೆಮೆಂದಜ್ಞಾನದಿಂ ನಾಗಶ್ರೀಯೆಂದು ಪೆಸರನಿಟ್ಟು ನಾಗರೆ ಕುಲದೈವಮಾಗೆ ಕೊಂಡಾಡುತ್ತುಮಿರ್ದೀಗಳೀ ನಾಗಶ್ರೀಯುಮಿಾ ಮುಮುಕ್ಷುಗಳನಿಂದಿಲ್ಲಿ ನಿರೀಕ್ಷಿಸುವುದುಂ ಕರ್ಮಕ್ಷಯೋಪಶಮದಿಂ ಜಾತಿಸ್ಮರೆಯಾಗಿ ತದ್ಭವಪ್ರತ್ಯಯದಿಂ ಭವಸ್ವರೂಪಮುಂ ಸದ್ಧರ್ಮಸ್ವರೂಪಮುಮಂ ಸವಿಸ್ತರಮೆಮ್ಮಲ್ಲಿ ಕೇಳ್ದು ತಿಳಿದು ಸಕಲಸತ್ತ್ವಹಿತಂಗಳಪ್ಪ ಪರಮಶ್ರಾವಕವ್ರತಂಗಳಂ ಕೈಕೊಂಡು ಮನೆಗೆವೋಪುದುಮಿಾ ವಿಪ್ರೋತ್ತಮಂ ನಾಮಪ್ಪೊಡೆ ವರ್ಣೋತ್ತಮರ್ ನಮಗತ್ತಲಾರುಮಿಲ್ಲಾ ವ್ರತಂಗಳನಾ ವ್ರತಿಗೆ ಮಗುಳೆ ಕೊಟ್ಟುಬರ್ಪಮೆಂದು ಮಗಳನೊಡಗೊಂಡಾಶ್ರಮಯಸ್ಥಾನದಿಂ ನಾಗಸ್ಥಾನಕ್ಕಾಗಿ ಬರ್ಪಾಗಳ್ ಪಂಚಮಹಾಪಾತಕಫಲದಿಂ ಪಂಚತ್ವಮಂ ಪೊರ್ದಿದ ಮನುಷ್ಯರಂ ಕಂಡು ತಂದೆಯಂ ಬೆಸಗೊಂಡು ಪಂಚಾಣುವ್ರತಂಗಳಂ ಪೇೞುತ್ತಮೆಮ್ಮಲ್ಲಿಗೆ ವಂದು ವಂದಿಸಿ ಕುಳ್ಳಿರ್ಪುದುಮಿಾ ನಾಗಶರ್ಮಂ ಸಿಗ್ಗಾಗಿ ಪೋಗೆ ನಿಮ್ಮನೊಡಗೊಂಡು ಬಂದೊಡೀ ಕೂಸು ತಾನಾಭವದೋದಿದೋದುಗಳೀಗಳ್ ಜಲಕ್ಕನಾದುವ

ಪ್ಪುದಱಿಂ ವೇದವೇದಾಂತಾದಿ ಸಮಸ್ತ ಶಾಸ್ತ್ರಗಳನೀಗಳಿಲ್ಲಿ ನಿರೂಪಣೆಗೆಯ್ದುಳಿವರ ವೃತ್ತಾಂತವಿಾಯುಂದವೆಂಬುದುಂ ನಿಟಿಳತಟಘಟಿತಕರಪುಟಕಮುಳಮುಕುಲಯುಕ್ತ ನಾಗಿ

ಪರಮಜಿನೇಶ್ವರ ತತ್ವ ।
ಸ್ವರೂಪಮಂ ವಿಗತತಾಪಮಂ ಮೋಕ್ಷಸುಖಾ ॥
ಕರಮಂ ಮುನಿ ನಮಗೀಗಳ್ ।
ನಿರೂಪಣಂ ಗೆಯ್ಯಿಮೆಂದು ಬಿನ್ನವಿಸುವುದುಂ ॥ ೨ ॥

ಕಿಱಿದಱೊಳಶೇಷತತ್ವಮ ।
ನಱಿವಂತಿರೆ ಸೂಕ್ತಮಾಗೆ ಮಿಥ್ಯಾತ್ವತಮಂ ॥
ಪಱಿಪಟ್ಟು ಮುಟ್ಟುಗೆಟ್ಟ
ಳ್ಕುಱ ಜನಪತಿಗಱಿವ ತೆಱದಿ ಮುನಿಪತಿ ನುಡಿದಂ ॥ ೩

ತರದಿಂ ಜೀವಮಜೀವಮಾಸ್ರವಮುಘವ್ಯಾಪಾರಬಂಧಂ ಸುಸಂ ।
ವರಮಾ ನಿರ್ಜರೆ ಮೋಕ್ಷಮೆಂದು ಸಲೆ ತತ್ವಂ ಸಪ್ತಭೇದಂ ಜಿನೇ ।
ಶ್ವರವಕ್ತ್ರಾಬ್ಜವಿನಿರ್ಗತಂ ಸಕಲಪಾಪಾಟೋಪತಾಪಾಪಹಂ ।
ಪರಮಾನಂತಸುಖೈಕಸಂಪದಕರಂ ತಾನಕ್ಕುಮುರ್ವೀಶ್ವರಾ ॥ ೪ ॥

ವ॥ ಅಲ್ಲಿ ಪರೋಕ್ಷಜ್ಞಾನಮೆನಿಸಿ ದ್ರವ್ಯಂಗಳೊಳ್ ಕೆಲವೆ ಪರ್ಯಾಯಂಗಳನೆ ಕೈಕೊಂಡನಿಂದ್ರಿಯೇಂದ್ರಿಯಜಮಾಗಿ ಬರ್ಹಾದ್ಯವಗ್ರಹಾದಿ ವಿಭೇದದಿಂ ಮೂನೂಱಮೂವತ್ತಾಱು ವಿಕಲ್ಪದಿಂ ನೆಱೆದು ನಿಂದಾಭಿನಿಬೋಧಕಜ್ಞಾನಮುಮಾಸ್ಥಿತಿಯೊಳಂಗಾಂಗ ಬಾಹ್ಯಭಾವಿತಾನಂತ ವಿಷಯದಿಂ ದ್ವ್ಯನೇಕದ್ವಾದಶವಿಕಲ್ಪಮಪ್ಪ ಶ್ರುತಜ್ಞಾನಮುಂ ವಿಕಳ ಪ್ರತ್ಯಕ್ಷದಿನದೊಂದು ವಿಸ್ತೀರ್ಣ್ಣಮಾಗಿ ಪುದ್ಗಲಮರ್ಯಾದೋಕ್ತಮೆನಿಸಿ ದೇವನಾರಕರ್ಗೆ ಭವಪ್ರತ್ಯಯಮಾಗಿ ಮನುಷ್ಯತಿರ್ಯಗ್ಜೀವಕ್ಕೆ ಕ್ಷಯೋಪಶಮನಿಮಿತ್ತಮಾಗಿ ಹೀಯಮಾನವರ್ಧಮಾನಾವಸ್ಥಿತಾನವಸ್ಥಿತಾನುಗಾಮ್ಯನನುಗಾಮಿಸ್ವರೂಪದಿಂ ಷಟ್ಪ್ರಕಾರಮಪ್ಪ ದೇಶಪರಮಸರ್ವಾವಧಿಜ್ಞಾನ

ಮುಂ ಪುದ್ಗಲಸಂಪ್ರಭೇದದಲು ಸರ್ವಾವಧಿಜ್ಞಾನಾಂತಿಮಭಾಗಮನೆ ಕೈಕೊಂಡು ನೃಕ್ಷೇತ್ರ ವಿಷಯದಿಂ ಪರಮನಃಸ್ಥಿತಾರ್ಥ ಗ್ರಹಣಧಾರಣಸಮರ್ಥ ಮನಃಪರಿವಿದ್ಯಾಮಂತ್ರ ಮಹಿತಗುಣದಿಂ ನೆಱೆದು ವಿಶುದ್ಧ್ಯಪ್ರತಿಪಾತಾಖ್ಯ ವಿಶೇಷದಿಂ ಋಜು ವಿಪುಲ ಮತಿವಿಕಲ್ಪದಿಂ ದ್ವಿಪ್ರಭೇದಮಪ್ಪ ಮನಃಪರ್ಯಯಜ್ಞಾನಮುಂ ಕ್ಷಾಯಿಕಮುಮೇಕಮುಮನಂತಮುಂ ತ್ರಿಕಾಲಸರ್ವಾರ್ಥಯುಗಪದವಭಾಸಮುಮಜ್ಞಾನಘಟಿತ ತಮಃ ಪಟಲ ವಿಘಟನಪಟುವುಂ ಘಾತಿಕರ್ಮ ಘಾತೋತ್ಪತ್ತಿ ಹೇತುವುಂ ಸಕಲಪ್ರತ್ಯಕ್ಷಮುಮಪ್ಪ ಸಕಲ ವಿಮಲ ಕೇವಲಜ್ಞಾನಮುಮೆಂಬೀ ಸಂಜ್ಞಾನಪಂಚಕಮುಂ ಮತ್ಯಜ್ಞಾನಂ ಶ್ರುತಜ್ಞಾನಂ ವಿಭಂಗಜ್ಞಾನಮುಮೆಂಬ ಅಜ್ಞಾನ ತ್ರಿತಯಮುಂ ಇಂತು ಸಂಜ್ಞಾನಾಜ್ಞಾನಭೇದಭಿನ್ನದಿನೆಂಟುತೆಱನಪ್ಪುದು ತಾಂ ಜ್ಞಾನೋಪಯೋಗಮೆಂಬುದು ಚಕ್ಷುರಚಕ್ಷುರವಧಿ ಕೇವಲದರ್ಶನಮೆಂದು ಚತುರ್ವಿಕಲ್ಪಮನುಳ್ಳುದು ದರ್ಶನೋಪಯೋಗಮೆಂಬುದು ಇಂತೀ ಜ್ಞಾನದರ್ಶನೋಪಯೋಗ ಲಕ್ಷಣಮಾಗೆ ಸುಕೃತದುಷ್ಕೃತಕರ್ಮೋಪಾರ್ಜಿತನುಂ ತತ್ಫಳಭಾಜನನುಂ ಮೂರ್ತಾಮೂರ್ತಲಕ್ಷಣನುಂ ಸ್ವಶರೀರಮಾತ್ರನುಂ ಸಂಹರಣವಿಸರ್ಪಣ ಧರ್ಮನುಮುತ್ಪಾದ ವ್ಯಯದ್ರವ್ಯಾತ್ಮಕನುಂ ಕರ್ಮನೋಕರ್ಮಾದಿ ಸಂಬಂಧನುಂ ಸ್ವಸಂವೇದ್ಯನುಮೂರ್ಧ್ವಗತಿಸ್ವಭಾವನಪ್ರಮಿತಗುಣನುಮಪ್ಪನಸಂಖ್ಯೇಯ ಪ್ರದೇಶನುಮನಂತಜ್ಞಾನಾದಿ ಗುಣನುಮನಂತಾನುಭವಭಾಗಿಯುಮನಾದ್ಯನಿಧನಸ್ವಭಾವಮಪ್ಪುದು ಜೀವನಾ ಜೀವನನಾವುಪಾಯದಿನುಪಲಕ್ಷಿಸಲ್ ಬರ್ಕುಮೆಂದೊಡೆ ಭಾವೋಪಲಕ್ಷಕಂ ಜೀವನೆಂಬುದು ಅವಾವುವೆಂದೊಡೆ ಔದಯಿಕಭಾವಂ ಔಪಶಮಿಕ ಭಾವಂ ಕ್ಷಾಯಿಕಭಾವಂ ಕ್ಷಾಯೋಪಶಮಿಕಭಾವಂ ಪಾರಿಣಾಮಿಕಭಾವಮೆಂದಿಂತು ಭಾವಮಯ್ದುತೆಱನಕ್ಕುಮಲ್ಲಿ

ಕ್ರಮದಿಂದಿರ್ತ್ತೆಱನಕ್ಕುಮೌಪಶಮಮೊಂಬತ್ತಕ್ಕುಮಾ ಕ್ಷಾಯಿಕ ।
ಕ್ರಮಮಷ್ಟಾದಶಮಾ ಕ್ಷಯೋಪಶಮಮಿರ್ಪತ್ತೊಂದು ಭೇದಂ ಗುಣಾ ।
ಗಮಮೌದೈಕಮೆ ಪಾರಿಣಾಮಿಕ ವಿಭೇದಂ ಮೂಱುಭೇದಂ ನೃಪೋ ।
ತ್ತಮ ನೀಂ ಭಾವಿಸು ಭಾವಿತಾತ್ಮನೆನಿಸಿರ್ದಾ ಪಂಚಭಾವಂಗಳಂ ॥ ೫೫ ॥

ಅಕ್ಕರ॥ ಉಪಶಮಭಾವಂ ಸಮ್ಯಕ್ತ್ವಂ ಚಾರಿತ್ರಮೆಂದಿವು ತಾವೌಪಶಮಿಕಭಾವದ
ವಿಕಲ್ಪಂ।
ವಿಪುಲಕ್ಷಾಯಿಕ ಸಮ್ಯಕ್ತ್ವಚಾರಿತ್ರ ಜ್ಞಾನ ದರ್ಶನ ಲಾಭ ಭೋಗೋಪಭೋಗ
ವೀರ್ಯಮಿಂತಿ ಭಾವಿಸಲು ಕ್ಷಾಯಿಕಭಾವವಿಕಲ್ಪಮಕ್ಕುಂ।
ಮಾಪ್ರಿಷಿಧರ ಭಾವದಿಂ ಭಾವಿಸು ನೀನಿದಂ ಜಿನತತ್ವಸದ್ಭಾವಮಂತರದಿಂ ವೇದತ
ಸಮ್ಯಕ್ತ್ವಮಂತೆ
ಸರಾಗಚಾರಿತ್ರಮುಂ ಮೇಲೆನಿಸಿ ನಿರುತಂ ಸಂಯಮಾಸಂಯಮಂ ಮತಿಶ್ರುತಾ
ವಧಿಮನಃ ಪರ್ಯ್ಯಯಮತ್ಯಜ್ಞಾನಂ।
ಪರಿವಿಭಂಗಶ್ರುತಾಜ್ಞಾನಂ ಚಕ್ಷುರಚಕ್ಷುರವಧಿಭೇದದರ್ಶನಮುಂ ದಾನಲಾಭ
ಭೋಗೋಪಭೋಗವೀರ್ಯಮೆಂದಿವು ಮಿಶ್ರಭಾವದವಿಕಲ್ಪಂ॥ (?)

ಗತಿಮೆಯ್ವೆತ್ತ ಕಷಾಯಲಿಂಗತತಿ ಮಿಥ್ಯಾದರ್ಶನ ಜ್ಞಾನಮು।
ಪ್ರತಿಮಾಸಂಯತೆ ತಾನಸಿದ್ಧತೆ ನಿತಾಂತಂ ಲೇಶ್ಯೆಯೆಂದಿರ್ಪತೊಂ
ದುತೆಱಂ ಕೋವಿದರಿರ್ದು ಭಾವಿಸುವೊಡಿನ್ನೌದಯ್ಕಭಾವಂ ವಿಚಾ।
ರತೆಯಿಂದಾರಯೆ ಪಾರಿಣಾಮಮದು ಜೀವಾಭವ್ಯಭವ್ಯತ್ರಯಂ ॥ ೬ ॥

ವ॥ ಇಂತೀ ಪೇೞ್ದ ಪಂಚಭಾವಂಗಳಿನುಪಲಕ್ಷಿಸೆಪಟ್ಟ ಜೀವಂ ಸಂಸಾರಿಯುಂ ಮುಕ್ತನುಮೆಂದೆರಡು ತೆಱನಕ್ಕುಮಾ ಸಂಸಾರಿಯುಂ ಸ್ಥಾವರತ್ರಸವಿಕಲ್ಪದಿಂ ದ್ವಿವಿಧಮಕ್ಕುಮಲ್ಲಿ ಸ್ಪರ್ಶಮೆಂದೇಕೇಂದ್ರಿಯದಿಂ ಪೃಥಿವ್ಯಪ್ತೇಜೋವಾಯುವನಸ್ಪತಿಕಾಯಿಕಮೆಂದು ಸೂಕ್ಷ್ಮಬಾದರ ಸ್ವರೂಪದಿಂ ಸ್ಥಾವರಪಂಚಪ್ರಕಾರಮಕ್ಕುಂ ಸ್ಪರ್ಶನ ರಸನ ಘ್ರಾಣ ಚಕ್ಷು ಶ್ರೋತ್ರೇಂದ್ರಿಯಂಗಳೇಕೈಕವೃದ್ಧಿಯಿಂ ಕ್ರಿಮಿಪಿಪೀಲಿಕಾಭ್ರಮರ ಮನಷ್ಯಾದಿ ವಿಭೇದಮಾಗಿ ದ್ವೀಂದ್ರಿಯಾದಿ ತ್ರಸಂಗಳ್ ದ್ವೀಂದ್ರಿಯತ್ರೀಂದ್ರಿಯ ಚತುರಿಂದ್ರಿಯಂಗಳುಂ ಪಂಚೇಂದ್ರಿಯಂಗಳುಂ ವಿಕಳೇಂದ್ರಿಯಂಗಳುಂ ಸಕಳೇಂದ್ರಿಯಂಗಳಕ್ಕುಂ ಆ ಪಂಚೇಂದ್ರಿಯಮುಂ ಸಂಜ್ಞಿಯಸಂಜ್ಞಿಯೆಂಬ ಭೇದದಿಂದಿತ್ತೆಱನಕ್ಕುಂ ಆಹಾರಶರೀರೇಂದ್ರಿಯೋಚ್ಛ್ವಾಸಭಾಷಾಮನಮೆಂಬ ಷಟ್ಪರ್ಯಾ

ಪ್ತಿಗಳ್ ಪಂಚಸ್ಥಾವರಕ್ಕಮಸಂಜ್ಞಿಗಂ ಚತುಃಪಂಚಮಾತ್ರಮಕ್ಕುಂ ಸಂಜ್ಞಿ ಜೀವಂ ಷಟ್ಪರ್ಯಾಪ್ತಕಮಕ್ಕುಂ ಪಂಚೇಂದ್ರಿಯಪ್ರಾಣಂ ಮನೋವಾಕ್ಕಾಯಬಲ ಪ್ರಾಣಮಾಯುಃಪ್ರಾಣಮುಮುಚ್ಛ್ವಾಸನಿಶ್ವಾಸಪ್ರಾಣಮುಮೆಂಬ ದಶಪ್ರಾಣಂಗಳೇ ಕೇಂದ್ರಿಯಾದಿಗಳ್ಗೆ ಚತುಷ್ಷಟ್ಸಪ್ತಾಷ್ಟನವದಶಪ್ರಾಣಪ್ರಮಾಣಮಕ್ಕುಮೆಂದು ನಿಶ್ಚಯಂಗೆಯ್ವುದು

ನೆಗಬ್ದಾಹಾರಂ ಭಯಮೊ ।
ಳ್ಪುಗೆಟ್ಟ ಮೈಥುನಪರಿಗ್ರಹಂಗಳ್ ಸಂಸಾ ॥
ರಿಗಳೊಳ್ ಸಾಮಾನ್ಯದಿನೆ ।
ಯ್ವುಗುಂ ನಿರಂತರಮಶೇಷವಸುಧಾಧೀಶಾ ॥ ೭ ॥

ಶೀತೋಷ್ಣವಿವೃತಸಂವೃತ ।
ಚೇತಾಚೇತಪ್ರಮಿಶ್ರಭೇದದೆ ನವಸಂ ॥
ಖ್ಯಾತಂ ತದ್ಯೋನಿಸಮು ।
ದ್ಭೂತಂ ಗರ್ಭೋಪಪಾದಸಮ್ಮೂರ್ಚ್ಛನೆಗಳ್ ॥ ೮ ॥

ಮಾತೇಂ ಜರಾಯುಜಾಂಡಜ ।
ಪೋತಂಗಳ್ ಗರ್ಭಸಂಭವಂ ದ್ಯಾನಿರಯೋ ॥
ದ್ಭೂತಮುಪಪಾದಜಂ ವಿ ।
ಖ್ಯಾತಂ ಸಮ್ಮೂರ್ಛಿತಂಗಳುಟಿದುವಶೇಷಂ ॥ ೯ ॥

ಸಕಳೋರ್ವೀಪತಿ ನೀಂ ಬಗೆ ।
ದು ಕೇಳನುಕ್ರಮದಿನಯ್ದುಭೇದದಿನೌದಾ ॥
ರಿಕವೈಕ್ರಿಯಕ[ಮಾ]ಹಾ ।
ರಕ ತೈಜಸಕಾರ್ಮಣಂಗಳಿವು ತನುವೆನಿಕುಂ ॥ ೧೦ ॥

ಮಾನವತಿರ್ಯಗ್ಜಾತಿಗೆ ।
ತಾನೌದಾರಿಕಮಮರ್ತ್ಯನಾರಕಯುಗ್ಮ ॥

ಸ್ಥಾನಕ್ಕೆ ವೈಕ್ರಿಯಾಂಕಂ ।
ತಾನಾಹಾರಂ ಪ್ರಮತ್ತಸಂಯತನೆಡೆಯೊಳ್ ॥ ೧೧ ॥

ಅನುಪಮ ತೈಜಸಕಾರ್ಮಣ ।
ತನುಗಳ್ ಜೀವನೊಳನಾದಿಸಂಬಂಧಂ ನೆ ॥
ಟ್ಟನೆ ತೈಜಸವೈಕ್ರಿಯಕಂ ।
ತನು ಋದ್ಧಿಪ್ರಾಪ್ತರೆಡೆಯೊಳಂ ಸಮನಿಸುಗುಂ ॥ ೧೨ ॥

ದೇವರೊಳಾಗಿರ್ಕುಂ ಪುಂ ।
ಸ್ತ್ರೀವೇದಂ ನಿರಯಜನಿತಸಮ್ಮೂರ್ಛಿತರೊಳ್ ॥
ಭಾವಿಸೆ ಷಂಡಕವೇದಂ ।
ತಾವುೞಿದವರೊಳ್ ತ್ರಿವೇದಮುಂ ಸರಿಭವಿಕಂ ॥ ೧೩ ॥

ಧೃತನಿರಯಜಾರ್ಯವರಚರ ।
ಮತನು ದಿವೋದ್ಭೂತನನಪವರ್ತ್ಯಾಯುಷ್ಯ ॥
ಸ್ಥಿತರುೞಿದ ಸಕಲತತ್ವ ।
ಪ್ರತತಿಗಳುಪಸಂಹೃತಾಪವರ್ತ್ಯಾಯುಷ್ಯರ್ ॥ ೧೪ ॥

ವ॥ ಮುಕ್ತಜೀವನಪ್ಪೊಡೇಕಪ್ರಕಾರನುಮನಾಕಾರನು[ಮ] ಶರೀರಾಕಾರದಿಂ ಕಿಂಚಿದೂನನುಂ ಅನುಪಮಾನನುಮವಾಙ್ಮಾನಸಗೋಚರನುಮನಸ್ಕನುಮನಂತ ಚತುಷ್ಟಯಾಸ್ಪದನುಮಷ್ಟಾದಶದೋಷವರ್ಜಿತನುಮಪುನರ್ಜಾತನುಮಕ್ಷಯನು ಮಕ್ಕುಮೆಂದು ಜೀವತತ್ವಮಂ ಸಮುಚ್ಚಯವಚನದಿಂ ಸವಿಸ್ತರಂ ಬೆಸಸಿ ಬೞಿಯೆಂ ಮೂರ್ತಸ್ವರೂಪದಿಂ ರಸಗಂಧವರ್ಣಶಬ್ದಬಂಧ ಸೂಕ್ಷ್ಮಸ್ಥೌಲ್ಯ ಸಂಸ್ಥಾನಭೇದ ತನುಃಚ್ಛಾಯಾತಪೋದ್ಯೋತವಂತಮಾಗಿ ಶರೀರವಾಙ್ಮನಃಪ್ರಾಣಾಪಾನ ಸುಖದುಃಖ ಜೀವಿತಮರಣೋಪಗ್ರಹಪ್ರಾಪ್ತಿಶಕ್ತಿಸಂಯುತಾಚೈತನ್ಯಮಪ್ಪುದಜೀವತತ್ವಮೆಂಬುದು

ಯೋಗತ್ರಿತಯನಿಯೋಗಸ ।
ಮಾಗಮ[ಮ]ದಾಸ್ರವಮಶುಭಶುಭಯೋಗಸಮಾ ॥

ಯೋಗದಿನಶುಭಶುಭಾಸ್ರವ ।
ಮಾಗಿ ಜಿನಾಗಮದೊಳಿರ್ತ್ತಿರ್ಜಿಂ ತಾನಕ್ಕುಂ ॥ ೧೫ ॥

ಜ್ಞಾನಿಗಳೊಳ್ ತತ್ವದೊಳಭಿ ।
ಮಾನಿಗಳೊಳ್ ಗುರುಗಳೊಳ್ ಸಮಾತ್ಸರ್ಯಮಪ ॥
ಧ್ಯಾನಮುಹರ್ಷಮವಿನಯಂ ।
ಜ್ಞಾನದೃಗಾವರಣದಾಸ್ರವಕ್ಕೆ ನಿಮಿತ್ತಂ ॥ ೧೬ ॥

ಕ್ಷಮೆಯುಂ ಕಾರುಣ್ಯಮುಮು ।
ತ್ತಮಮಧ್ಯಮಪಾತ್ರದಾನಮುಂ ನಿರುಪಮ ಶೌ ॥
ಚಮುಮಖಿಳಸಂಯಮಾಸಂ ।
ಯಮಮುಂ ಸದ್ವೇದ್ಯದಾಸ್ರವಂ ತಾನಕ್ಕುಂ ॥ ೧೭ ॥

ತಾಪಾಕ್ರಂದನ ಶೋಕ ಮ ।
ಹಾಪರಿದೇವನ ವಿಷಾದಮುನಮಿವನನ್ಯಾ ॥
ತ್ಮೋಪಗತವೆನಿಸಿ ಪಾಪಾ ।
ಟೋಪಾಶುಭವೇದನೀಯದಾಸ್ರವಮಕ್ಕುಂ ॥ ೧೮ ॥

ಪರಮಾತ್ಮಂ ಪರಮಾಗಮಂ ಪರಮಚಾತುರ್ವರ್ಣ್ಯಮಾರ್ಹಂತ್ಯಮು ।
ದ್ಧುರ ಸದ್ಧರ್ಮಮಿವಂ ತಿರಸ್ಕರಿಸೆ ಸಾರ್ಗುಂ ದೃಷ್ಟಿಮೋಹಾಸ್ರವಂ ।
ಖರಕೋಪಾದಿ ಕಷಾಯದುಬ್ಬರಿಕೆಯಿಂ ಚಾರಿತ್ರಮೋಹಾಸ್ರವಂ ।
ದೊರೆಕೊಳ್ಗುಂ ಸಮಸಂದ ಸತ್ವನಿಕುರುಂಬಕ್ಕೆಂಬುದಂ ನಂಬು ನೀಂ ॥ ೧೯ ॥

ಅತಿಸಾವದ್ಯಪರಿಗ್ರಹಪ್ರಚಯದಿಂ ಶ್ವಭ್ರಾಸ್ರವಂ ಸಾರ್ಗುಮ ।
ನ್ವಿತಮಾಯಾವಿಕೃತಿಪ್ರಪಂಚದೊದವಿಂ ತಿರ್ಯಗ್ಭವಾಯುಷ್ಯಮು ।
ದ್ಧೃತಮಕ್ಕುಂ ಲಘುಮೂರ್ಛೆಯಿಂ ಮೃದುಪರೀಣಾಮಸ್ವಭಾವೋದಿತೋ ।
ರ್ಜಿತಪಲ್ಗುತ್ಸದಿನಕ್ಕುಮನ್ವಿತಮನುಷ್ಯಾಯುಷ್ಯದೊಂದಾಸ್ರವಂ ॥ ೨೦ ॥

ತರದಿಂದ ಕಾಮನಿರ್ಜರೆ ।
ಸರಾಗಸಂಯಮಗುಣಂ ಸ್ವಭಾವಮೃದುತ್ವಂ ॥
ಪರಿವರ್ತಿಪ ಬಾಳತಪ ।
ಶ್ಚರಿತ್ರಮಿವು ದಿವಿಜರಾಯುಗಾಸ್ರವಮಕ್ಕುಂ ॥ ೨೧ ॥

ಯೋಗದ ಕುಟಿಲತೆ ತಾನಶು ।
ಭಾಗಮುಮಪ್ಪಶುಭನಾಮಮಂ ಯೋಗಸಮಾ ॥
ಯೋಗರುಜುತ್ವಂ ಶುಭನಾ ।
ಮಾಗಮುಮಂ ಜಿನಮತೋಕ್ತಿಯಿಂ ಜನಿಯಿಸುಗುಂ ॥ ೨೨ ॥

ಅಕ್ಕರ॥ ಪರಮದರ್ಶನವಿಶುದ್ಧಿ ಸದ್ವಿನಯಸಂಪನ್ನತೆ ಸಂಶುದ್ಧಶೀಲವ್ರತಂ ।
ವರತಪೋಮಾರ್ಗತ್ಯಾಗಂ ಸಾಧುಸಮಾಚಾರಂ ಚಾತುರ್ವರ್ಣ್ಯಂಗಳೊಳ್
ವೈಯ್ಯಾಪೃತ್ಯಂ ।
ಮರುಹದಾಚಾರ್ಯಶ್ರುತ ಬಹುಶ್ರುತಭಕ್ತಿಸಂವೇಗ ಸಂಜ್ಞಾನಮಾವಶ್ಯಕಂ
ಸ್ಥಿರಧರ್ಮವಾತ್ಸಲ್ಯಂ ಧರ್ಮಪ್ರಭಾವನೆ ತೀರ್ಥಕೃನ್ನಾಮಕಾಸ್ರವಕಾರಣಂ ॥೨೩॥

ತನಗಿಲ್ಲದಂತುಟಂ ತಾ ।
ನೆ ನೆಗಳ್ಚುವ ಪರಗುಣಂಗಳಂ ಮುಚ್ಚುವ ತ ॥
ನ್ನನೆ ಪೊಗಳ್ವ ಲೋಗರಂ ಪಟಿ ।
ವ ನೀಚನೊಳ್ ನೀಚಗೋತ್ರದಾಸ್ರವಮಕ್ಕುಂ ॥ ೨೪ ॥

ಸ್ವಗುಣಪ್ರಚ್ಛಾದನಮ ।
ನ್ಯಗುಣಾವಿಷ್ಕರಣಮಾತ್ಮದೂಷಣಮನ್ಯೋ ॥
ಷಗಮ ಪುರಸ್ಕಾರಮಪಾ ।
ರಗುಣಗಣಂಗುಚ್ಚಗೋತ್ರದಾಸ್ರವಮಕ್ಕುಂ ॥ ೨೫ ॥

ಪಲತೆಱದಿಂ ಲೋಗದರ್ಾ ।
ನಲಾಭಭೋಗೋಪಭೋಗವೀರ್ಯಾದಿಗಳಂ ॥

ಸಲಿಸುವೆಡೆಗೆಡೆಗೆವಾಯ್ದುಂ ।
ಬೞಿಸಂದೊಂಗಂತರಾಯಮನುಬಂಧಿಸುಗುಂ ॥ ೨೬ ॥

ವ॥ ಎಂದಾಸ್ರವತತ್ವಮಂ ಸ್ವರೂಪದಿಂ ಪೇೞೆ ಕೇಳ್ದು

ಕ್ರಮದಿಂ ಮಿಥ್ಯಾತ್ವಮುಸಂ ।
ಯಮಂ ಪ್ರಮಾದಂ ಕಷಾಯಯೋಗಂಗಳು ॥
ಕ್ರಮಹೇತುವಾಗಿ ಜೀವನೊ ।
ಳಮರ್ಗುಂ ಬಂಧಂ ತಮಂಧದುರಿತಸ್ಕಂದಂ ॥ ೨೭ ॥

ವ॥ ಅಂತು ಜೀವನೊಳ್ ಕ್ಷೀರನೀರನ್ಯಾಯಮಾಗಿ ಕರ್ಮಯೋಗ್ಯಂಗಳಪ್ಪ ಪುದ್ಗಲಂಗಳೊಳ್ ಪರಸ್ಪರಪ್ರದೇಶೋಪಸೃಷ್ಟಿಯಿಂ ಸಮಸಂದು ಪರಿಣಮಿಸುವ ಬಂಧಂ ಪ್ರಕೃತಿಸ್ಥಿತ್ಯನುಭಾಗಪ್ರದೇಶಪ್ರವಿಭಾಗದಿಂ ಚತುರ್ವಿಧಮಕ್ಕುಮಲ್ಲಿ ಮೂಲ ಪ್ರಕೃತಿಗಳೆಂಟುಮಂ ಬಾದರಸ್ವರೂಪದಿಂ ನೂಱನಾಲ್ವತ್ತೆಂಟು ವಿಕಲ್ಪಮಾದುತ್ತರ ಪ್ರಕೃತಿಗಳುಮನೊಳಕೊಂಡನುಬಂಧಿಸುವ ಬಂಧಂ ಪ್ರಕೃತಿಬಂಧಮೆಂಬುದಕ್ಕುಂ

ಅಕ್ಕರ॥ ಜ್ಞಾನದರ್ಶನಾವರಣವೇದ್ಯಾಂತರಾಯಂಗಳೊಳಾಮೂವತ್ತು ಕೋಟಾಕೋಟಿ ।
ತಾನೆಪ್ಪತ್ತುಕೋಟಿಕೋಟಿಸ್ಥಿತಿ ಮೋಹನೀಯದೊಳೊಂದಿ ಸಂಬಂಧಿಸುಗುಂ ।
ಜೈನಮತದೊಳಿಪ್ಪತ್ತುಕೋಟಿಕೋಟಿ ನಾಮಗೋತ್ರಂಗಳೊಳ್ ಸಾಗರೋಪಮಂ ।
ನೀನಿದಂ ನಂಬು ಮೂವತ್ತಮೂಱಾಯುಷ್ಕರ್ಮದೊಳುತ್ಕೃಷ್ಟಸ್ಥಿತಿಯೆನಿಕ್ಕುಂ ॥

ಮಿಕ್ಕಿರ್ದ ವೇದನೀಯದೊ ।
ಳಕ್ಕುಂ ಪನ್ನೆರಡುಮುಹೂರ್ತಮೆಂಟುಮುಹೂರ್ತಂ ॥
ಲೆಕ್ಕಕ್ಕೆ ನಾಮಗೋತ್ರದೊ ।
ಳಕ್ಕುಂ ಪೆಱವಱೊಳನುತ್ತರಾಂತಮುಹೂರ್ತಂ ॥ ೨೮ ॥

ಪುದಿದ ಶಿಥಿಲಪರಿಣಾಮುದೊ ।
ಳೊದವಿದ ದುರಿತಾನುಗತಮುದನುಭಾಗಮೆನಿ ॥
ಪ್ಪುದು ಶರ್ಕರಾದಿಕಿಂಪಾ ।
ಕದುರ್ವಿಪಾಕಪ್ರಭಾವಶಕ್ತಿಪ್ರತಿಮಂ ॥ ೩೦ ॥

ಕ್ಷಿತಿರಸಮಂ ರವಿದ್ಯುತಿ ನಿಜದ್ಯುತಿಯಿಂ ತೆಗೆವಂತೆ ನೋೞ್ಪೊಡ ।
ನ್ವಿತಮೆನೆ ಕಾಯ್ಪುಗುಂಡು ಜಲಮಂ ಸ್ಥಲದಿಂ ತೆಗೆವಂತೆ ಜೀವನ ।
ಪ್ರತಿಹತಕರ್ಮಯೋಗ್ಯಬಹುಪುದ್ಗಲಮಂ ಸಕಲಪ್ರದೇಶಸಂ ।
ಗತಿಯಿನಸಾರತಂ ತೆಗೆಯುತಿರ್ಪ ನೆಗೞ್ದಿ ಚತುರ್ಥಬಂಧನಂ ॥ ೩೧ ॥

ವ॥ ಎಂದು ಬಂಧತತ್ವಮಂ ಸಂಬಂಧಿಸಿ

ಜಿನಪತಿಮತದಿಂದಂ ಯೋ ।
ಗನಿರೋಧಂ ತನ್ನೊಳೆಸೆಯೆ ಕರ್ಮಾಸ್ರವಮಂ ॥
ಜನಿಯಿಸಲೀಸದೆ ಸದ್ಗುಣ ।
ದಿನಂತವಂ ತಗೆವುದದುವೆ ಸಂವರಮಕ್ಕುಂ ॥ ೩೨ ॥

ಕೃಪೆಯಿಂ ಚಾರುಚರಿತ್ರದಿಂ ಸಮಿತಿಯಿಂ ಸದ್ಧರ್ಮದಿಂ ಗುಪ್ತಿಯಿಂ ।
ತಪದಿಂ ನಿರ್ಜರೆಯಕ್ಕುಮೌಪಶಮಿಕಂ ತನ್ಮಿಶ್ರಮೌದಯ್ಕವೆಂ ।
ಬ ಪೃಥಗ್ಭಾವದ ಮಿಕ್ಕಭವ್ಯತೆಯ ಕೇಡಿಂದಕ್ಕುಮುಕ್ಕ್ಷಣ ಮೋ ।
ಕ್ಷಪದಂ ಮುಕ್ತಿಪದಂ ನಿರಾಮಯಪದಂ ನಿರ್ವಾಣಸೌಖ್ಯಾಸ್ಪದಂ ॥ ೩೩ ॥

ಇದು ಸಿದ್ಧಾಂತೋರುನೀರಾಕರಜನಿತಮಿದಾಭೀಳದುಸ್ಸಾರಸಂಸಾ ।
ರದುರಂಕ್ಷಿತ್ಯುಗ್ರದಾವಪ್ರಶಮನಕರಣಂ ಪ್ರೀಣಿತಪ್ರಾಣಿ ತಾನೆಂ ।
ಬುದನಾಗಳ್ ಯೋಗಿನಾಥಾನನಕಮಲವಿನಿರ್ಮುಕ್ತಮಂ ಶ್ರೋತ್ರಸತ್ಪಾ ।
ತ್ರದೆ ಪೀರ್ದಂ ತತ್ವಪೀಯೂಷಮನುದಿತಮಹೋತ್ಸಾಹದಿಂ ಚಂದ್ರವಾಹಂ(?)॥೩೪॥

ಆಗಳ್ ತತ್ವಾರ್ಥಸದ್ಭಾವಮನನುನಯದಿಂ ಕೇಳ್ದು ಕೈಕೊಳ್ವುದುಂ ಸಂ।
ವೇಗಂ ಕೈಗಣ್ಮೆ ಸಮ್ಯಗ್ನಯನವಿಭವಮಂ ತಾಳ್ದಿ ತದ್ವೇಗದೊಳ್ ನಿ।
ರ್ವೇಗಂ ತನ್ನಂತರಂಗಕ್ಕೊಡರಿಸೆ ಸಮತಾಭಾವದಿಂ ಸರ್ವಸಂಗ।
ತ್ಯಾಗಕ್ಕುದ್ಯುಕ್ತನಾದಂ ಮುದವೊದವೆ ಮಹೋದಾರಗಂಭೀರನಾದಂ ॥ ೩೫ ॥

ಮುನಿಚರಣಕಮಲದೊಳ್ ನಿಜ।
ವಿನತಶಿಖಪದ್ಮವಿನುತಲೀಲಾಳಕಭೃಂ ॥
ಗನಿಕಾಯಮೆಱಗಿ ತುಱುಗಿರೆ।
ವಿನಯಾನ್ವಿತನಾಗಿ ತನ್ನೃಪಂ ತತ್ಕ್ಷಣದಿಂ ॥ ೩೬ ॥

ವಿಷಮವಿಷಸದೃಶವಿಷಯಾ।
ಮಿಷಕಾಂಕ್ಷೆಯೆ ತಿಣ್ಣನಾಗೆ ಮತಿಗೆಟ್ಟು ಮಳೀ ॥
ಮಸನಾದೆನಿನ್ನೆಗಂ ನಿ।
ರ್ವಿಷನಾಗಿಪುದೆನ್ನನುರುತಪಃಪ್ರತಿವಿಷದಿಂ ॥ ೩೭ ॥

ಎಂದು ನಿಜಾತ್ಮಜಂಗೆ ಜಿತಶತ್ರುಗೆ ರಾಜ್ಯಮನಿತ್ತು ಚಂದ್ರಿಕಾ।
ನಂದನನಾಗಳಂತೆ ತಱಿಸಂದು ಮನೋವಚನಾಂಗಶುದ್ಧಿಯಿಂ।
ಸಂದಿಸಿ ಶಲ್ಯದಂಡಮನಡಂಗಿಸಿ ಗೌರವಮಂ ಕಟಿಲ್ಚಿ ಜೀ।
ಯೆಂದು ಸಭಾಸದರ್ಪೊಗಟೆ ಕೊಂಡನಖಂಡಿತ ಜೈನದೀಕ್ಷೆಯಂ ॥ ೩೮ ॥

ಪುರಜನಮುಂ ಪರಿಜನಮುಂ।
ನೆರೆದು ಮನಂಗೊಂಡು ಕೂರ್ತು ಕೀರ್ತಿಸೆ ಧರಣೀ ॥
ಶ್ವರರಯ್ನೂರ್ವರ್ಚಂಪಾ।
ಪುರವರನೊಡನಂದು ದೀಕ್ಷೆಯಂ ಕೈಕೊಂಡರ್ ॥ ೩೯ ॥

ಮುನ್ನಿನ ತನ್ನ ಜನ್ಮನಿವಹಂ ತದುಮಾಡೆ ಪದಾರ್ಥನಿಶ್ಚಯಂ।
ತನ್ನ ಮನಕ್ಕೆ ತೀಡೆ ಖಳಸಂಸರಣಕ್ಕೆ ವಿರಕ್ತೆಯಾಗಿ ವಿ।

ದ್ವನ್ನಿಕರಂ ಕರಂ ಮನದೆಗೊಳ್ವಿನವೊಂದಿದಘಂ ಸುರುಳ್ವಿನಂ ।
ಕನ್ನೆಯುಮಾ ಮುನೀಶ್ವರರ ಪಕ್ಕದೆ ತಾಳ್ದಿದಳಂದು ದೀಕ್ಷೆಯಂ ॥ ೪೦ ॥

ನಾಗಶ್ರೀ ಜಿನದೀಕ್ಷಿತೆ ।
ಯಾಗಲೊಡಂ ನಾಗಶರ್ಮನುಂ ಪರಮತಪಃ ॥
ಶ್ರೀಗೆ ಬಸಮಾದನಾರ ।
ಯ್ವಾಗಳವಾಙ್ಮನಸಗೋಚರಂ ಪರಿಣಾಮಂ ॥ ೪೧ ॥

ವಂಶಸ್ಥ॥ ವಿವಿಕ್ತಪಾ[1]ಣಿ[1]ಗ್ರಹನಾದಧೀಶನೊಳ್ ।
ಭವಾಬ್ಧಿಯಂ ದಾಂಟುವೆ ಮತ್ತನೂಜೆಯೊಳ್ ।
ಕವಲ್ತ ಮೋಹಂ ತದುಮಾಡೆ ಚಿತ್ತಮಂ ।
ತ್ರಿವೇದಿಯುಂ ತಾಳ್ದಿದಳಂದು ದೀಕ್ಷೆಯಂ ॥ ೪೨ ॥

ವ॥ ಮತ್ತಮಲ್ಲಿ ಕೆಲರ್ಮಿಥ್ಯಾತ್ವಮಂ ಪತ್ತುವಿಟ್ಟು ಸಮ್ಯಕ್ತ್ವಪೂರ್ವಕಮಣುವ್ರತಂಗಳಂ ಕೈಕೊಂಡು ದೃಢವ್ರತರಾದರಿಂತೀ ಮುನೀಶ್ವರರಲ್ಲಿ ಧರ್ಮಪ್ರಭಾವನೆಯಂ ಮಾಡಿ ಮುನಿನಿಕಾಯಂ ಬೆರಸು ಮತ್ತಮಾ ವಾಸುಪೂಜ್ಯ ಭಟ್ಟಾರಕರ ಪರಿನಿರ್ವಾಣಕ್ಷೇತ್ರಮನೆಯ್ದೆವಂದು

ಪರಮಾನಂತಗುಣಪ್ರಣೂತಪರಿನಿರ್ವಾಣೋರ್ವಿಯಂ ಘೋರಸಂ ।
ಸರಣಾಂಬೋಧಿ[2]ಪರಾ[2]ಯಣಪ್ರಥಿತಕಲ್ಯಾಣೋರ್ವಿಯಂ ಮುಕ್ತಿಸಂ ।
ಭ[3]ರ[3]ಮಂ ಭಕ್ತಿಯಿನಂದು ವಂದಿಸಲೊಡಂ ಶ್ರೀಸೂರ್ಯಮಿತ್ರವ್ರತೀ ।
ಶ್ವರನೊಳ್ ಪುಟ್ಟಿದುದಾಗಳಪ್ರತಿಹತಜ್ಞಾನಂ ಮನಃಪರ್ಯಯಂ ॥ ೪೩ ॥

ಅಭಿವಿನುತಮನಃಪರ್ಯಯ ।
ವಿಭೂತಿ ದೊರೆಕೊಂಡುದೆಂಬುದಾವುದು ಚೋದ್ಯಂ ॥

---

1. ದಿ (ಗ) 2. ನಿತಾ (ಗ) 3. ವ (ಕ)

ಶುಭಭಾವನೆಯಿಂ ಕೇವಲ ।
ವಿಭೂತಿ ದೊರೆಕೊಳ್ಗುಮೆಂದೊಡಿದು ಪಿರಿದಾಯ್ತೆ ॥ ೪೪ ॥

ಸತತಂ ನಿಶ್ಚಳಶುದ್ಧಭಾವನೆಗಳಂ ಭಾವಾತ್ಮಕಂ ತಾಳ್ದಿ ಬು ।
ದ್ಧಿತಪೋವಿಕ್ರಿಯುಮೌಷಧಂ ರಸಬಳಾಕ್ಷೀಣಾಭಿಧಾನೋರ್ಜಿತೋ ।
ರ್ಜಿತಸಪ್ತರ್ಧಿಗಳುಂ ಕ್ರಮಕ್ರಮದಿನಾ ವರ್ಣೀಶ್ವರಂಗಾದುವ ।
ನ್ವಿತಸದ್ಧ್ಯಾನಮದೇನನಾಗಿಸದೊ ಸನ್ಮಾರ್ಗಪ್ರಭಾವೋದಯಂ ॥ ೪೫ ॥

ಆಕ್ಷಣದೊಳಗ್ನಿಭೂತಿ ಮು ।
ಮುಕ್ಷುಗೆ ಮೂಜಿನೆಯ ದಿವ್ಯಸರ್ವಾವಧಿ ಪು ॥
ಣ್ಯಕ್ಷೇತ್ರ ಶುಭಸ್ಥಾನ ಸ ।
ಮಕ್ಷದೊಳಾದುದು ವಿಶುದ್ಧಿಯಿಂದಾಗದುದೇಂ ॥ ೪೬ ॥

ವ॥ ಅಂತು ಸಮ್ಯಜ್ಞಾನಲಬ್ಧಿಯಿನಲ್ಲಿಂ ತಳೆದು ಧರ್ಮೋಪದೇಶಾರ್ಥದಿಂ ಧರ್ಮಕ್ಷೇತ್ರಂಗಳಂ ಸಮುದಾಯಸಹಿತಂ ವಿಹಾರಿಸುತ್ತುಂ ಬಂದು ಮಗಧದೇಶದ ರಾಜಗೃಹಪುರದ ಬಹಿರ್ಭಾಗದ ಮನೋಹರೋದ್ಯಾನದೊಳಾ ಮುನಿಕುಂಜರಂ ಮುನಿಯೂಥಪರಿವೃತನಾಗಿರ್ಪುದುಮಾಪ್ರಸ್ತಾವದೊಳ್ ತದಾಗಮನಕಾರ್ಯಮಂ ತದುದ್ಯಾನಪಾಲಕನಪ್ಪ ರಿಷಿನಿವೇದಕಂ ತತ್ಪುರಾಧೀಶ್ವರನಪ್ಪ ಸುಬಳಮಹಾರಾಜಂಗೆ ಬಿನ್ನಪಂಗೆಯ್ವುದುಮಾ ಧರಿತ್ರೀನಾಥನತ್ಯಂತಹರುಷಾಂತರಂಗನಾಗಿ ಸಿಂಹಾಸನದಿಂದಿೞಿದು ಮುಂದನೇೞಡಿಯಂ ನಡೆದು

ಅವರಿರ್ದದೆಸೆಗೆ ಪೊಡೆವ ।
ಟ್ಟು ವಿವಿಧಮಣಿಭೂಷಣೋತ್ಕರಂಗಳನೊಸೆದಿಂ ॥
ತವಯುವದಿಂದಾಗಳ್ ಋಷಿ ।
ನಿವೇದಕಂಗಿತ್ತನಂಗಚಿತ್ತಮನರಸಂ ॥ ೪೭ ॥

ವ॥ ಅಂತು ಋಷಿನಿವೇದಕಂಗಂಗಚಿತ್ತಮಂ ತುಷ್ಟಿದಾನಮನಿತ್ತು ಬೞಿಯಮಾನಂದದಿನಾನಂದಭೇರಿಯಂ ಪೊಯ್ಸಿದಾಗಳ್

ಅವನೀಶಂ ಭಕ್ತಿಯಿಂ ಶ್ರೀಮುನಿಚರಣಸರೋಜಾತಮಂ ಕಾಣಲತ್ಯು।
ತ್ಸವದಿಂ ಪೋದಪ್ಪನೀಂ ಬರ್ಪುದು ತಡೆದಿರವೇಡೆಂದು ನಿರ್ವ್ಯಾಜದಿಂ ಸಾ।
ಱುವವೊಲ್ ಭೋರೆಂಬಿನಂ ಪೊಣ್ಮಿದುದಖಿಲದಿಶಾರಂಧ್ರಸಂದೋಹಮಂ ತೀ।
ವುವಿನಂ ಸಾನಂದಮಂ ಪುಟ್ಟಿಸೆ ಪುರದೊಳಗಾನಂದಭೇರೀನಿನಾದಂ ॥ ೪೮ ॥

ವ॥ ಆಗಳ್ ಸುಬಳಧರಾಧೀಶ್ವರಂ ಮಂಗಳಪ್ರಸಾಧನಂ ಗೆಯ್ದು ನಾನಾವಿಧ ಪೂಜಾಪುರಸ್ಸರಂ ಸುಪ್ರಭಾದೇವಿವೆರಸು ಸಮಸ್ತಸೇನಾಸಮೇತನಾಗಿ ಮುನ್ನೆ ಪೇೞ್ದ ವತ್ಸವಿಷಯಾಧಿಪತಿಯಪ್ಪತಿಬಳನಾತ್ಮೀಯಬಂಧುತ್ವ ಸಂಬಂಧದಿಂ ತನ್ನಲ್ಲಿಗೆ ವಂದಿರ್ದೊಡಾತನುಮನೊಡಗೊಂಡು ರಾಜಗೃಹಮಂ ಪೊಱಮಟ್ಟು ಪಟ್ಟಮಾರ್ಗಮಂ ಬಿಡಿದು ಪಾದಮಾರ್ಗದಿಂ ಸನ್ಮಾರ್ಗಮಾರ್ಗಿಗಳನೆಯ್ದೆವಂದು ದೀಪ್ತತಪಃ ಪ್ರಭಾವದಿನಾತ್ಯಂತಿಕರೂಪಪರಾವರ್ತನೋಪಲಬ್ಧಿಯಿಂ ವಿಶುದ್ಧಸ್ಫಟಿಕಮಣಿಮಯಧರಾವರಾಂತರ್ಗತಸಹಸ್ರಕಿರಣದೇದೀಪ್ಯಮಾನಪ್ರಭಾಭಾಸುರಗಾತ್ರಂ ಚತುರ್ಜ್ಞಾನನೇತ್ರರಂ ಭೋಂಕನೆ ಕಂಡು ರಹರಹಪರಿಣಾಮಪರಿಣತನಾಗಿ ಸಮುದಾಯಮಂ ಬಂದಿಸಿ ಸಮುಚಿತೋದ್ದೇಶದಾಸನದೊಳ್ ಕುಳ್ಳಿರ್ದು ಮುಕುಳೀಕೃತಕರಕಮಲಯುಗಲನಾಗಿ

ಮುನಿಪತಿ ನಿಜಚರಣಾಳೋ।
ಕನಮಾತ್ರದೆ ಮನದೊಳಾದಮಾನುಂ ಸ್ನೇಹಂ॥
ಜನಿಯಿಸಿದಪುದೇಕಾರಣ।
ಮೆನಗಿದನಱಿಪುವುದುಗಾಧಬೋಧಪಯೋಧೀ ॥ ೪೯ ॥

ಎನೆ ಮುನಿಪತಿ ನೀನೆನಗರ।
ಸನೆಯಾದುದಱಿಂದೆನಗತಿಸ್ನೇಹಭರಂ॥
ಮನದೊಳ್ ಪುಟ್ಟಿದುದೆನೆ ಕೇ।
ಳ್ದು ನೃಪತಿ ಬೆಱಗಾಗಿ ವಿಸ್ಮಯಾಕುಳಚಿತ್ತಂ ॥ ೫೦ ॥

ಶ್ರೀಮದಭಿವಿನುತ ಭವ್ಯ।
ಸ್ವಾಮಿಯೆ ನೀಂ ಬಗೆದು ನೋಡೆ ಕುತ್ಸಿತಮರ್ತ್ಯ॥

ಸ್ವಾಮಿಯೆ ನಾಂ ನಿಮಗೆ ಕುಲ ।
ಸ್ವಾಮಿಯೆನಾದಂದಮೇನು ಭುವನಸ್ವಾಮಿ ॥ ೫೧ ॥

ವ॥ ಎಂಬುದುಮಾ ಮುನಿನಾಯಕಂ ಮಗಧನಾಯಕನ ಮೊಗಮಂ ನೋಡಿ

ಕ್ಷಿತಿಪತಿ ಸೂರ್ಯಮಿತ್ರನೆನಿಳಾಮರೆನೆಂಬ ಭವದೀಯ ಮಂತ್ರಿಯೆಂ ।
ವಿತತಮರೀಚಿವೇಚಕಿತನೂತ್ನ ವಿರಾಜಿತ ರತ್ನಮುದ್ರಿಕಾ ।
ವ್ಯತಿಕರದಿಂ ತಪಕ್ಕೆ ತಱಿಸಂದೆನನಾರತಮೆಂದು ಪೂರ್ವಸೂ ।
ಚಿತನಯಮಾರ್ಗದಿಂ ತಿಳಿಪಿದಂ ಮುನಿನಾಥನಿಳಾಧಿನಾಥನಂ ॥ ೫೨ ॥

ವ॥ ಆಗಳದುವೆ ನಿರ್ವೇಗಕಾರಣಮಾಗೆ ರಾಜ್ಯಶ್ರೀಗೆ ವಿರಕ್ತನುಂ ಮುಕ್ತಿ ಶ್ರೀಗನುರಕ್ತನುಮಾಗಿ ತನ್ನ ಮಗಂ ಮಘವಂಗೆ ರಾಜ್ಯಪಟ್ಟಮಂ ಕಟ್ಟಿ ಸರ್ವಸಂಗ ಪರಿತ್ಯಾಗಂ ಗೆಯ್ದು

ತೊಡರ್ದಿರ್ದ ಮೋಹಪಾಶದ ।
ತೊಡರಂ ಪಱಿಪಡಿಸಿ ಬಿಡಿಸಿ ಮಗಧಾಧಿಪನಾ ॥
ಗಡೆ ಪರಮಜೈನದೀಕ್ಷೆಗೆ ।
ತಡೆಯದೆ ಮೆಯ್ವಂದನೇಕೆ ತಡೆಗುಮೊ ಭವ್ಯಂ ॥ ೫೩ ॥

ನಯಗುಪ್ತನಿಷ್ಟಶರ್ಮಂ ।
ಜಯಂತನೆನೆ ನೆಗಟ್ದಮೂವರುಂ ಮಂತ್ರಿಗಳುಂ ॥
ಪ್ರಿಯಲಲನೆ ಸುಪ್ರಭಾದೇ ।
ವಿಯುಮಾಂತರ್ ಜೈನದೀಕ್ಷೆಯಂ ತತ್ಕ್ಷಣದೊಳ್ ॥ ೫೪ ॥

ಎಮಗಿರ್ಪುದು ಸೂಟಿಲ್ತೆಂ ।
ದು ಮಕ್ಕಳಂ ನಿಱಿಸಿ ನೆಲೆಗಳೊಳ್ ಸ್ವಾಮಿಯ ಚಂ ॥
ದಮೆ ಚಂದಮೆಂಬುದಂ ನಿರ್ಣ ।
ಯಮಾಡಿ ಕೆಲರಲ್ಲಿ ಸುಬಳನಾದುದನಾದರ್ ॥ ೫೫ ॥

ವ॥ ಆಗಳಾವ್ಯತಿಕರದೊಳತಿಬಳಮಹಾರಾಜನುಮತಿನಿರ್ವೇಗಪರಾಯಣನಾಗಿ

ಶಠವಿರಹಿತಾಂತರಂಗಂ ।
ಕಠೋರಸಂಸಾರಭೋಗವೈರಾಗ್ಯಪರಂ ॥
ಕಠಿನಬಲಕರ್ಮಭೂರುಹ ।
ಕುಠಾರಸನ್ನಿಧಿಯೊಳಮಳದೀಕ್ಷೆಯನಾಂತಂ ॥ ೫೬ ॥

ನೂರ್ವರ್ ನಿಜಸುತರಂ ಸಾ ।
ಸಿರ್ವರ್ ನೃಪಸುತರುಮಾಗಳೊದವಿದ ಪಿರಿದುಂ ॥
ನಿರ್ವೇಗದಿಂದಮಂದು ತ ।
ದುರ್ವೀಶ್ವರನೊಡನೆ ದೀಕ್ಷೆಯಂ ಕೈಕೊಂಡರ್ ॥ ೫೭ ॥

ಶ್ರೀಯುಂ ಜವ್ವನಮುಂ ಮನೋಜಸುಖಮುಂ ಸೌಂದರ್ಯಮುಂ ಶೌರ್ಯಮುಂ
ಮಾಯಂ ಭಾವಿಸುವಂದಪಾಯಮೆನುತುಂ ನಿರ್ವಾಣನಿಶ್ರೇಯಸ ।
ಶ್ರೀಯೊಳ್ ಶಾಶ್ವತದೊಳ್ ಸುಖಾಸ್ಪದದೊಳಿರ್ಪುದ್ಯೋಗದಿಂದಂ ತಪಃ ।
ಶ್ರೀಯೊಳ್ ಕೂಡಿದುದೊಂದು ಪೆಂಪತಿಬಳಂಗಕ್ಕುಂ ಪೆಱರ್ಗಕ್ಕುಮೇ ॥ ೫೮ ॥

ವ॥ ಅಂತಲ್ಲಿಂ ತಳರ್ದು ವಿಹರಣಕ್ರಮದಿಂ ವಾರಣಾಸೀಪುರ[ದ]ದೂರಾಂತರಾವಾಸನೊಳಶೋಕವನಕ್ಕೆವಂದು ಋಷಿಸಮುದಾಯಮುಂ ಸ್ವಾಧ್ಯಾಯೋಪಾಧ್ಯಾಯಪದನಿಷ್ಠಿತಾರ್ಥನುಂ ಸಮಸ್ತಾಗಮಪದಾರ್ಥಾವಧಾರಣಗುಣಸಮೇತನುಮಪ್ಪಗ್ನಿಭೂತಿ ಸಂಯತಂಗೆ ಸಮರ್ಪಣಂಗೆಯ್ದು ಸೂರ್ಯಮಿತ್ರಭಟ್ಟಾರಕರಾವನಾಂತರಾಳದೊಳ್ ವಿಶಾಲಮಪ್ಪುದೊಂದಶೋಕಾನೋಕಹದ ಮೊದಲೊಳ್ ನಿರ್ಜಂತುಕಪ್ರದೇಶದೊಳಿರ್ದ ಶಿಳಾಪಟ್ಟಕದ ಮೇಲೆ ಪೂರ್ವಾಭಿಮುಖನಾಗಿ

ಎರಡುಂ ಮಡಂಗಳೆಡೆ ನಾ ।
ಲ್ವೆರಳುಂಗುಷ್ಠಂಗಳೆರಡಱಿಡೆಯೊರ್ಗೇಣಾ ॥
ಗಿರೆ ತನ್ಮುನೀಂದ್ರನನುಪಮ ।
ಸುರರಾಜಾದ್ರೀಂದ್ರದಂದದಿಂದಂ ನಿಂದಂ ॥ ೫೯ ॥

ಯೋಗಸ್ಥಿತಿಯಿಂ ಪ್ರತಿಮಾ ।
ಯೋಗದೊಳತ್ಯಂತಬಾಹ್ಯಸಾಮಗ್ರಿಯೊಳಾ ॥
ಯೋಗೀಶ್ವರನಿಂ ಪೊಣ್ಮಿದು ।
ದಾಗಳೆ ಶಾಂತರಸಮಾವನಾಂತದೊಳೆತ್ತಂ ॥ ೬೦ ॥

ಉರಗಂಗಳ್ ಗಿಡಿಗಂಗಳಿರ್ದೆಡೆಗಳೊಳ್ ಬಂದಿರ್ದುವಾನಂದದಿಂ ।
ಹರಿಣಂಗಳ್ ನಲಿದಾಡುತಿರ್ದವು ಕರಂ ವ್ಯಾಘ್ರಂಗಳಂ ಪೊರ್ದಿ ಕೇ ।
ಸರಿಗಳ್ ಮತ್ತಗಜೇಂದ್ರದತ್ತ ಜಳಮಂ ಕೊಂಡುಂಡುವಾರಯ್ವೊಡ ।
ಚ್ಚರಿಯುಂ ಪಾವನಮಾಯ್ತು ತನ್ಮುನಿತಪೋಮಾಹಾತ್ಮ್ಯದಿಂದಾ ವನಂ ॥ ೬೧ ॥

ಚರಿಯಿಪ ಖಗಮೃಗಕುಳಮಾ ।
ಪರಮಮುನೀಶ್ವರತಪಃಪ್ರಭಾವದಿನತ್ಯಾ ॥
ದರಮಂ ತಾಳ್ದಿ ಪರಸ್ಪರ ।
ವಿರೋಧಮಂ ಬಿಸುಟವೇಂ ಮಹಾತ್ಮನೊ ಮುನಿಪಂ ॥ ೬೨ ॥

ವ॥ ಆಗಳಾ ಮುಮುಕ್ಷುಪತಿಯುಂ ಮೋಕ್ಷಪದದೊಳ್ ಮನಮಿಟ್ಟಧ್ಯಾತ್ಮ ಧ್ಯಾನಾಧೀನನನಿತ್ಯಾದಿ ದ್ವಾದಶಾನುಪ್ರೇಕ್ಷೆಗಳೊಳನುಪ್ರೇಕ್ಷೆಗೆಯ್ಯುತ್ತುಮಾಜ್ಞಾಪಾಯವಿಪಾಕಸಂಸ್ಥಾನವಿಚಯಮೆಂಬ ನಾಲ್ಕುಂ ತೆಱದ ಧರ್ಮಧ್ಯಾನಮಂ ಧ್ಯಾನಿಸುತ್ತುಮತಿವಿಶುದ್ಧಲೇಶ್ಯಾತ್ಮಕನಧಃಪ್ರವೃತ್ತಾಪೂರ್ವನಿವೃತ್ತಿಪರಿಣಾಮತ್ರಿತಯದಿನನಂತಾನುಬಂಧಿಕ್ರೋಧಮಾನಮಾಯಾಲೋಭಕಷಾಯಚತುಷ್ಕಂ ಮಿಥ್ಯಾತ್ವಸಮ್ಯಗ್ಮಿಥ್ಯಾತ್ವಸಮ್ಯಕ್ತ್ವಪ್ರಕೃತಿಯೆಂಬ ದರ್ಶನಮೋಹನೀಯತ್ರಯಮುಮಂ ಬೇಱಬೇಱೆ ಪರಿವಿಡಿಯಿಂ ಪಡಲ್ವಡಿಸಿ ತದೀಯ ಸಪ್ತಪ್ರಕೃತಿಕ್ಷಯದಿಂ ಕ್ಷಾಯಿಕಸಮ್ಯಕ್ತ್ವಮಂ ಪಡೆದು ತದನಂತರಮಂತರ್ಮುಹೂರ್ತಕಾಲಂ ಪ್ರಮತ್ತಾಪ್ರಮತ್ತಗುಣಸ್ಥಾನಪರಾವರ್ತನಶತಸಹಸ್ರದಿಂ ಕ್ಷಪಕಶ್ರೇಣ್ಯಾರೋಹಣಾಭಿಮುಖಂ ಯಥಾಪ್ರಯೋಗಸಮಯಪ್ರತಿಸಮಯಂಗಳನಂತಗುಣಹಾನಿರೂಪನಿರ್ಜರಾವಿಧಿಯಿನಾಯುಃಕರ್ಮಮುೞಿಯಲುೞಿದ ಕರ್ಮಂಗಳ ಪ್ರಕೃತಿಸ್ಥಿತ್ಯನುಭಾಗಂಗಳಂ ಕಟಿಲ್ಚಿ ಕಳೆಯುತ್ತುಂ ಅನಂತಗುಣಶಕ್ತಿಕಚೈತ್ಯೈಕಪರಿಣಾಮಮಪೂರ್ವಕರಣಗುಣಸ್ಥಾನನಿಷ್ಠಾಂತಂ ತತ್ಸ

ಮಯದೊಳನಿವೃತ್ತಿಬಾದರಸಾಂಪರಾಯಕ್ಷಪಕಗುಣಸ್ಥಾನಸ್ಥಿತನಾಗಿ ಬೞಿಯಮಂತರ್ಮುಹೂರ್ತಾಂತರದೊಳ್ ನಿದ್ರಾನಿದ್ರಾದಿ ಷೋಡಶಪ್ರಕೃತಿಗಳುಮನಪ್ರತ್ಯಾಖ್ಯಾನಕ್ರೋಧಮಾನಮಾಯಾಲೋಭಮೆಂಬೆಂಟುಂ ಕಷಾಯಮುಮಂ ನವನೋಕಷಾಯಮುಮಂ ಸಂಜ್ವಲನಕ್ರೋಧಮಾನಮಾಯಾತ್ರಯಮುಮನೆಡೆಯುಡುಗದೆ ಕಿಡಿಸಿ ಸಾಮಾಯಿಕಚ್ಛೇದೋಪಸ್ಥಾಪನಾಪರಿಹಾರವಿಶುದ್ಧಿಚಾರಿತ್ರಾನುಗತಾನಿವೃತ್ತಿಬಾದರಸಾಂಪರಾಯಗುಣಸ್ಥಾನನಿವೃತ್ತನಾಗಿ ಕಿಱಿದು ಬೇಗದಿಂ ಸೂಕ್ಷ್ಮಸಾಂಪರಾಯಚಾರಿತ್ರಸಂಪನ್ನಂ ಸೂಕ್ಷ್ಮಸಾಂಪರಾಯಗುಣಸ್ಥಾನಕ್ಷಪಕಂ ಯಥೋಕ್ತಪರಿಣಾಮದಿಂ ಸೂಕ್ಷ್ಮಲೋಭಮಂ ನೆಱೆಯೆ ಪಱಿಪಡಿಸಿ ಯಥಾಖ್ಯಾತಚಾರಿತ್ರಸಂಪನ್ನನಾಗಿ ಪೃಥಕ್ತ್ವವಿತರ್ಕವೀಚಾರಮೆಂಬ ಪ್ರಥಮಶುಕ್ಲಧ್ಯಾನಪರಿಣತಿಯಿಂ ಕ್ಷೀಣಕಷಾಯವೀತರಾಗಛದ್ಮಸ್ಥಗುಣಸ್ಥಾನವ್ಯವಸ್ಥಿತನಾಗಿ ಬೞಿಯಮಂತರ್ಮುಹೂರ್ತದಿನೇಕತ್ವವಿತರ್ಕವೀಚಾರದ್ವಿತೀಯಶುಕ್ಲಧ್ಯಾನದಿಂ ಬಹುತರಾಸ್ರವಸಂವರಕರ್ಮನಿರ್ಜರನಾಗಿ ತದುಪಾಂತ್ಯ ಚರಮಸಮಯದೊಳ್ ಜ್ಞಾನಾವರಣಪಂಚಕಮುಮಂ ದರ್ಶನಾವರಣಚತುಷ್ಕಮುಮಂತರಾಯಪಂಚಕಮುಮಂ ನಿರ್ಮೂಲಮಪ್ಪಂತೊರ್ಮೊದಲೊಳೆ ಕಿಡಿಸಿದಾಗಳ್

ಖ್ಯಾತಿ ಧರಿತ್ರಿಗಾಗೆ ಕುಮತಾರ್ಕ್ಷಗಣಂಗಳಡಂಗಿ ಪಿಂಗೆ ತ ।
ದ್ಘಾತಿತಮಸ್ತಮಂ ಬೆದಱಿ ಪೋಗೆ ವಿನೇಯಜನಾಂಬುಜಾಕರ ।
ವ್ರಾತಮಲಂಪಿನಿಂದಲರೆ ಕೇವಲಬೋಧದಿನೇಶಬಿಂಬಮು ।
ದ್ಯೋತಿಸಿತಾಗಳಾಕ್ಷಣದೊಳಾ ಮುನಿನಾಥಮಹೋದಯಾದ್ರಿಯೊಳ್ ॥ ೬೨ ॥

ವ॥ ಆ ಪ್ರಸ್ತಾವದೊಳ್

ಪ್ರೀತಿಮಿಗೆ ಶಂಖಪಟಹಮಿ ।
ನೂತೋದ್ಧುರಸಿಂಹಘಂಟಿಕಾನಿಸ್ವನಸಂ ॥
ಕೇತದೆ ಭಾವನಭೌಮ ।
ಜ್ಯೋತಿಷವೈಮಾನಿಕಾಮರರ್ನೆರೆತಂದರ್ ॥ ೬೩ ॥

ರೋದೋಂತರ್ಭಾಗಮೆಲ್ಲಂ ಮಣಿಮಯರುಚಿಯಿಂ ಚಿತ್ರಸಂಕಾಶಮಾದ।
ತ್ತಾದಂ ದಿಗ್ಭಾಗಮೆಲ್ಲಂ ಪಟಹರವದಿನೆತ್ತೆತ್ತಮಾವಿದ್ಧಮಾದ।
ತ್ತಾದಿವ್ಯಸ್ತ್ರೀನಟೀನರ್ತನದೊಳೆ ಗಗನಾಭೋಗಮೆಲ್ಲಂ ಕರಂ ಚೆ।
ಲ್ವಾದತ್ತೆಂಬಂದದೇಂ ಬಂದುದೊ ಚಟುಳತೆಯಿಂ ದೇವದೇವೀನಿಕಾಯಂ ॥ ೬೪ ॥

ಅಂಚಿರಮಲ್ಲದೆ ಬೆಳಗುವ।
ಚಂಚದ್ಭೂಷಣಮಣಿಪ್ರಭಾಪ್ರಚುರತೆಯಿಂ॥
ಸಂಚಳಿಸಿ ಪೊಳೆವ ಮಿಂಚಿನ।
ಗೊಂಚಲ್ ಬರ್ಪಂತೆ ಬಂದರಮರಾಂಗನೆಯರ್ ॥ ೬೫ ॥

ವ॥ ಇಂತಸುರನಾಗವಿದ್ಯುತ್ಸುಪರ್ಣಾಗ್ನಿವಾತಸ್ತನಿತೋದಧಿದ್ವೀಪದಿಕ್ಕುಮಾರಭೇದದಿಂ ದಶಭೇದಮಪ್ಪ ಭವನವಾಸಿಗರುಂ ಕಿನ್ನರಕಿಂಪುರುಷಮಹೋರಗಗಂಧರ್ವಯಕ್ಷರಾಕ್ಷಸಭೂತಪಿಶಾಚಾಭಿಧಾನದಿನಷ್ಟವಿಧರಪ್ಪ ವಾನವ್ಯಂತರರುಂ ಚಂದ್ರಾದಿತ್ಯರೆಂಬಿರ್ಬರ್ಜ್ಯೋತಿಷ್ಕರುಂ ಸೌಧರ್ಮೇಶಾನಸನತ್ಕುಮಾರಮಾಹೇಂದ್ರಬ್ರಹ್ಮಬ್ರಹ್ಮೋತ್ತರಲಾಂತವಕಾಪಿಷ್ಠಶುಕ್ರಮಹಾಶುಕ್ರಶತಾರಸಹಸ್ರಾರಾನತಪ್ರಾಣತಾರಣಾಚ್ಯುತವಿಕಲ್ಪದಿಂ ದ್ವಾದಶವಿಕಲ್ಪಮಪ್ಪ ಕಲ್ಪವಾಸಿಕಾಮರೇಂದ್ರರುಮಂತು ಮೂವತ್ತಿರ್ವರುಂ ಚತುರ್ನಿಕಾಯ ದೇವನಾಯಕರುಮೆಲ್ಲಮೊಂದಾಗಿ ಹಸ್ತ್ಯಶ್ವರಥಪದಾತಿವೃಷಭಗಂಧರ್ವನರ್ತಕಪ್ರಭೃತಿ ಸಪ್ತಾನೀಕಸಮೇತರಾಗಿ ಗಗನತಳಮನಲಂಕರಿಸಿ ಬಂದು ದೂರೋತ್ಸಾರಿತವಾಹನರಾಗಿ ಸೂರ್ಯಮಿತ್ರಜಿನೇಂದ್ರನಂ ತ್ರಿಃಪ್ರದಕ್ಷಿಣಂಗೆಯ್ದು ಭಕ್ತಿಭರವಿನಮಿತೋತ್ತಮಾಂಗನಿಬಿಡನಿಬದ್ಧಾಂಜಳಿಗಳಾಗಿ

ಪದ್ಧಳಿ ॥ ಜಯಜಯ ಭುವನತ್ರಯಪರಮದೇವ।
ದೇವೇಂದ್ರಾಭ್ಯರ್ಚಿತಚರಣಕಮಲ॥
ಕಮಲವಿರಹಿತನಿರುಪಮದೇಹ।
ದೇಹಾಶ್ರಿತಶುಭಲಕ್ಷಣವಿನೂತ॥

ನೂತನಸಂಗತಕೈವಲ್ಯಬೋಧ ।
ಬೋಧಪ್ರಕಾಶವಸ್ತುಸ್ವರೂಪ ॥
ರೂಪಾತಿಶಯಾನ್ವಿತವಿತತವಿಭವ ।
ಭವನಿವಹಪಟಳನಿರ್ಮುಕ್ತಜೀವ ॥
ಜೀವಾಜೀವಾದಿಪದಾರ್ಥನಿಳಯ ।
ಲಯವರ್ಜಿತಗುಣಮಣಿಗಣವಿಭೂಷ ॥
ಭೂಷಾದಿರಹಿತಸೌಂದರ್ಯಸಹಿತ ।
ವಿನಿಹಿತವಿಶ್ರುತಪರಮಸಮಯ ॥
ಮಯಜನ್ಮಜರಾಮಯ ಭಯವಿನಾಶ ।
ನಾಶೀಕೃತವಿಷಯಕಷಾಯನಿಕರ ॥
ಕರಣಾಪಗಮಧ್ಯಾನೋಪಯೋಗ ।
ಯೋಗೀಶ್ವರವಂದಿತಪಾದಪೀಠ ॥
ಪೀಠಪ್ರವಿರಾಜಿತಗಗನಗಮನ ।
ಮನಸಿಜಘನದರ್ಪೋದ್ಧುರವಿದೂರ ॥
ದೂರಸ್ಥಿತದುಸ್ತರದೋಷಸರ್ವ ।
ಸರ್ವಸರ್ವಜಿನೇಶ್ವರವೀತರಾಗ ॥
ರಾಗಾನುಗತಾನತಭವ್ಯಲೋಕ ।
ಲೋಕಾಂತ ವ್ಯಾಪ್ತಯಶಃ ಪ್ರಸಿದ್ಧ ॥
ಸಿದ್ಧಾತ್ಮೈಶ್ವರ್ಯವಿಶುದ್ಧಬುದ್ಧ ।
ಬದ್ಧಾದ್ಯಧಿಗತಪ್ರಾವೀಣ್ಯಪರಮ ॥
ರಮಣೀಯಮೋಕ್ಷಲಕ್ಷ್ಮೀನಿವಾಸ ।
ವಾಸವಕೃತವಿದ್ಯಾತಿಶಯವಿಸರ ॥
ಶರಣಾ ಗೆಮಗುಗ್ರಕೃತಾಂತವಿಜಯ ॥ ೬೬ ॥

ಕಿವಿಗಳ್ ನಿನ್ನ ಮೃದೂಕ್ತಿಯಂ ಬಯಸಿ ಕೇಳುತ್ತಿರ್ಕೆ ಕಣ್ಗಳ್ ಮಹೋ
ತ್ಸವದಿಂ ನಿನ್ನನೆ ನೋಡುತಿರ್ಕೆ ಸಲೆ ಕೈಗಳ್ ನಿನ್ನ ಪಾದಾರವಿಂ
ದಮನೋತರ್ಚಿಸುತಿರ್ಕೆ ಸಂದ ಮನವೆಂದುಂ ನಿನ್ನ ದಿವ್ಯಸ್ವರೂ
ಪಮನಾರಾಧಿಸುತಿರ್ಕೆ ವಿಶ್ರುತವಿನೇಯಸ್ವಾರ್ಥಚಿಂತಾಮಣೀ || ೬೭ ||

ವ| ಎಂದನೇಕಸ್ತುತಿಗಳಿಂ ಜಗತ್ರಯಸ್ವಾಮಿಯಂ ಸ್ತುತಿಯಿಸಿ ದಿವ್ಯದ್ರವ್ಯಾರ್ಚನೆಗಳಿನರ್ಚಿಸಿದಾಗಳ್

ವಿಬುಧಪತಿನಿವಹವಂದಿತ
ನಿಬಿಡಪದಾಂಬುರುಹನಂ ಸಮುತ್ತೀರ್ಣಭವ
ಪ್ರಬಲಾರ್ಣವನಂ ಕೈವ
ಲ್ಯಬೋಧಬೋಧಿತವಿನೇಯಜನನಂ ಜಿನನಂ || ೬೮ ||

ಅಭಿವಿನುತಭಕ್ತಿಯಿಂದ
ಗ್ನಿಭೂತಿವೊದಲಾದಮುನಿಪರುಂ ನಾಗಶ್ರೀ
ಪ್ರಭೃತಿ ಸಮಸ್ತಾರ್ಜಿಕೆಯರು
ಮಭೀಕ್ಷ್ಣಪರಿಣಾಮಶುದ್ಧಿಯಿಂ ವಂದಿಸಿದರ್ || ೬೯ ||

ವ| ತದನಂತರಮಾ ಜಿನೇಶ್ವರನನಂತಚತುಷ್ಟಯೈಶ್ವರ್ಯಸಮೇತನುಂ ಸಮಪ್ರಸಿದ್ಧನಖಕೇಶತ್ವವಿರಾಜಮಾನನುಂ ಚತುರಾಸ್ಯನುಮಚ್ಛಾಯನುಮಕ್ಷಿಸ್ಪಂದಮಪೇತನುಂ ಭುಕ್ತ್ಯುಪಸರ್ಗಾದಿ ದೋಷವಿರಹಿತನುಂ ದೇವಮಾನವಸಭಾಪರಿವೃತನುಂ ಸುರಕುಮಾರಕರತಳಕಳಿತನವಸುಧಾಧವಳೈಕಾತಪತ್ರಚಾರುಚಾಮರಚತುಷ್ಟಯಭ್ರಾಜಿತನುಂ ದಿವಿಜಪಟುಪಟಹವಿವಿಧವಾದ್ಯ ನಿನದಬಧಿರಿತ ನಿಜಸಭಾಂತರಾಳನುಂ ನಿಳಿಂಪನಿವಹಸ್ತುತಜಯಜಯಧ್ವನಿಸ್ತನಿತ ಸಕಳದಿಗಂತರಾಳನುಂ ಕುಸುಮಾಸಾರತಾರಕಿತಗಗನತಳವಿಲಸಿತನುಂ ಸಿಂಹಾಸನಾಸೀನನುಂ ಗಗನಗಮನಮಾಗಿ

ಜಸಮಂ ತಾಳ್ದಿರ್ದ ಕರ್ನಾಟಕ ಖಸ ಕರಹಾಟಾಂಗ ಕಾಶ್ಮೀರ ಸೌರಾಷ್ಟ್ರ ಸುರಾಷ್ಟ್ರಾವಂತಿ ವಂಗ ದ್ರವಿಡ ಮಗಧ ಪಾಂಚಾಳ ಬಾಹ್ಲೀಕ ನೇಪಾಳ ಸಂವತ್ಸಾಭೀರ ಕಚ್ಛಪ್ರಭೃತಿ ವಿವಿಧ ದೇಶಂಗಳೊಳ್ ಕೂಡೆ ವಿಭ್ರಾಜಿಸಿದಂ ಸನ್ಮಾರ್ಗಸಾರಂ ಪರಮಜಿನಮತಾಂಭೋಜಿನೀರಾಜಹಂಸಂ ॥ (?)

ಇದು ಸಮಸ್ತವಿನೇಯಜನವಿನುತ ಶ್ರೀವರ್ಧಮಾನಮುನೀಂದ್ರ
ವಂದ್ಯ ಪರಮಜಿನೇಂದ್ರ ಶ್ರೀಪಾದಪದ್ಮವರಪ್ರಸಾದೋ
ತ್ಪನ್ನ ಸಹಜಕವೀಶ್ವರ ಶ್ರೀಶಾಂತಿನಾಥ ಪ್ರ
ಣೀತಮಪ್ಪ ಶ್ರೀಸುಕುಮಾರಸ್ವಾಮಿ
ಚರಿತ ಪುರಾಣದೊಳ್
ಸೂರ್ಯಮಿತ್ರಾಚಾರ್ಯ
ಕೇವಲಜ್ಞಾನಪ್ರಭಾವ
ವರ್ಣನಂ
ಅಷ್ಟಮಾಶ್ವಾಸಂ ॥

---

# ೯. ನವಮಾಶ್ವಾಸಂ

ಶ್ರೀಧರ್ಮಾಮೃತವರ್ಷಮ
ನೀ ಧಾತ್ರೀತಳದ ಭವ್ಯಸಸ್ಯಕಮವ್ಯಾ
ಬಾಧಂ ಕಱೆದಂ ಕೇವಲ
ಬೋಧನಿಧಾನಂ ಸರಸ್ವತೀಮುಖಮುಕುರಂ ॥ ೧ ॥

ವ॥ ಇಂತು ಸಕಲವಿನೇಯಜನಸಮಾರ್ಜಿತೋರ್ಜಿತಾಗಣ್ಯಪುಣ್ಯಸಂಚಾರ ಪ್ರೇರಣೆಯಿಂ ಧರ್ಮಕ್ಷೇತ್ರಂಗಳೊಳ್ ಸುಕೃತಜನಾಶಯ ಕುಶೇಶಯಂಗಳಂ ದಿವ್ಯವಚನದಿನಲರ್ಚುತ್ತುಮುದಗ್ರಮಂದಿರಶಿಖರಿಶಿಖರದೊಳ್ ಪ್ರತಿಮಾಯೋಗಂ ನಿಂದು ಸೂಕ್ಷ್ಮಕಾಯಯೋಗಂ ಸೂಕ್ಷ್ಮಕ್ರಿಯಾಪ್ರತಿಪಾತಿಯೆಂಬ ಚರಮಶುಕ್ಲ ಧ್ಯಾನದಿಂಯಥಾವಸ್ಥಿತವಿಶುದ್ಧಧ್ಯಾನಪರಿಣತಿಯಿಂ ದಂಡಕವಾಟಪ್ರಕರಲೋಕಪೂರಣ ಕ್ರಿಯೆಗಳಂ ಸಮಯಪ್ರತಿಸಮಯಂಗಳಿಂ ಮಾಡಿ ಸರ್ವಬಂಧಾಸ್ರವನಿರೋಧದಿನ ಯೋಗಿಸ್ಥಾನಮಂ ಪೊರ್ದಿ ಸಮುಚ್ಛಿನ್ನಕ್ರಿಯಾನಿವೃತ್ತಿಧ್ಯಾನಪರಿಣತಿಯಿನಘಾತಿ ಚತುಷ್ಕಶುಷ್ಕೇಂಧನಪಾವಕನಾಗಲೊಡಂ

ರಿಪುನೃಪಕುಲ [1][ಸಂ]ಹರನ
[ಪ್ಪ][1]ಪುರುಷನಂ ವಿಜಯಲಕ್ಷ್ಮಿ ಕೈಕೊಳ್ವವೊಲಂ
ದಪಗತದುರಿತಾರಾತಿ
ಪ್ರಪಂಚನಂ ಮೋಕ್ಷಲಕ್ಷ್ಮಿ ತಾಂ ಕೈಕೊಂಡಳ್ ॥ ೨ ॥

ಆಗಳ್ ಸೌಧರ್ಮಕಲ್ಪೇಶ್ವರನನುಪಮನಿರ್ವಾಣಕಲ್ಯಾಣಕಾರ್ಯೋ
ದ್ಯೋಗಕ್ಕಾನಂದದಿಂದಂ ದಿವಿಜಪರಿವೃತಂ ಬಂದು ಸದ್ಭಕ್ತಿಯಿಂದಂ
ರಾಗಂ ಕೈಗಣ್ಮೆಪೊಣ್ಮುತ್ತಿರೆ ಸುರಸುಮನೋದೀಪಧೂಪಂಗಳಿಂದಂ
ಬೇಗಂ ಕೈಗಯ್ಯೊಳೊಲ್ದರ್ಚಿಸಿ ಬೞಿಕೆ ನಿಜಾವಾಸದತ್ತಣ್ಗೆವೋದಂ ॥ ೩ ॥

---

ಹರನಂ ಮಾ (ಕ.ಗ)

ವ|| ಆ ಪ್ರಸ್ತಾವದೊಳ್

ಆನಮ್ರಾಮರನಗ್ನಿಭೂತಿಮುನಿರಾಜೇಂದ್ರಂ ತದುರ್ವೀಧರ
ಸ್ಥಾನಪ್ರಸ್ಥಿತನಪ್ರಮತ್ತಗುಣಸಂಸ್ಥಾನಸ್ಥಿತಂ ನಿರ್ಮಲ
ಧ್ಯಾನಂ ಘಾತಿಗಳಂ ಕಲಿಲ್ಚಿ ನಯದಿಂದಂ ಪೊರ್ದಿದಂ ಕೇವಲ
ಜ್ಞಾನಾಧಿಷ್ಠಿತನಾಗಿ ಮುಕ್ತಿವನಿತಾಪೀನಸ್ತನಸ್ಥಾನಮಂ || ೪ ||

ವ|| ಇತ್ತಲಾ ನಾಗಶ್ರೀಯುಂ ತನ್ನಿರೂಪಿತ ಪರಮತಪಃ ಶ್ರೀಯಂ ತಾಳ್ದಿ

ವರಬಾಹ್ಯಾಭ್ಯಂತರಮೆಂ
ಬೆರಡುಂ ತೆಱನಪ್ಪ ತಪಮನುನಲ್ಕುಱಿಯೊಳಮುಳ್ಳಿ
ತ್ತರವೋಲೊಡನೆ ನಡಪಿದಳ್
ಧರಾತಳಂ ಕೂರ್ತು ಕೀರ್ತಿಸುತ್ತಿರ್ಪಿನೆಗಂ || ೫ ||

ಶುಭಲಕ್ಷಣೆ ರತ್ನತ್ರಯ
ವಿಭೂಷಣಾಲಂಕೃತಾಂಗಿಯಾಗಿ ನಭೂತೋ
ನಭವಿಷ್ಯತಿಯೆನಿಪ ತಪಃ
ಪ್ರಭಾವದಿಂ ನೆಗಟ್ದಳಂತು ನೆಗಟಲ್ವೇಡಾ || ೬ ||

ತನುಲತೆಯುಂ [1]ಪ್ರು[1]ತ್ತಡರ್ದ
ತ್ತೆನೆ ಮುಳವಿಡಿದಡರೆಗೊಂಡು ತೀವಿರ್ದುದಱಿಂ
ವಿಸಯಾನ್ವಿತೆ ತಪ್ಪದೆ ಮುಱ
ಕಿಸ ಲೆಪ್ಪದ ಪೆಣ್ಣಜೋಹಮೆಂಬಂತಿರ್ದಳ್ || ೭ ||

ತಳೆದನಶನಾದಿ ತಪದಿಂ
ಕಳೇವರಂ ಬಡಬಡಾಗಿ ಗಿಡಿಗಿಡಿಜಂತ್ರಂ
ಮಿಳಿಮಿಳಿಗಣ್ಗಳಿನಲ್ ನೋಂ
ತಳಂತು ನೋಂನದೆ ಸುಖಕ್ಕೆ ಬಯುಸಿದೊಡುಂಟೇ || ೮ ||

---

1. ಪ್ರು (ಕ)

ಸಮಿತಿಬ್ರಾತಮನಪ್ಪುಕೆಯ್ದು ದೊರೆವೆತ್ತಾವಶ್ಯಕಾನೀಕದೊಳ್
ಸಮಸಂದಿಂದ್ರಿಯದರ್ಪಮಂ ಕಿಡಿಸಿ ತೀವ್ರಕ್ಷುತ್ಪಿಪಾಸಾಪ್ರಪಂ
ಚಮನೊಟ್ಟೈಸಿ ಮಹಾವ್ರತಪ್ರಕರದೊಳ್ ತಳ್ತೊಪ್ಪುವತ್ಯುದ್ಘ ಸಂ
ಯಮ ಸದ್ಭಾವ ತಪಃಪ್ರಭಾವ ಮಹಿಮಾವಿರ್ಭಾವಮಂ ತಾಳ್ದಿದಳ್ ॥ ೯ ॥

ರಾಗದ್ವೇಷಾದಿದೋಷಾಂತರಮನುಪಮರತ್ನತ್ರಯ ಶ್ರೀನಿಧಾನಂ
ಯೋಗೋದ್ಯೋಗಪ್ರಯೋಗಾಲಯಮಘಹರಣೋಪಾಯಮತ್ಯಂತಮುರ್ವೀ
ಭಾಗಪ್ರಸ್ತುತ್ಯಮೆಂದಲ್ಲದೆ ಬಹುವಚನಾಳಾಪದೊಂದಂದದಿಂದಾ
ನಾಗಶ್ರೀನಾಮಧೇಯಾರ್ಜಿಕೆಯ ತಪಮನೇವಣ್ಣಿಪಂ ಬಣ್ಣಿಪಾತಂ ॥ ೧೦ ॥

ವ॥ ಇಂತುಗ್ರೋಗ್ರತಪಶ್ಚರಣನಿರತೆಯಾಗಿ ಮೂಲೋತ್ತರಗುಣಂಗಳೊಳು ತ್ತರೋತ್ತರಂ ನೆಗಳುತ್ತಂ ಜಿನಗುಣಸಂಪತ್ತಿಮೊದಲಾದ ನೋಂಪಿಗಳಂ ನೋನುತ್ತಂ ನಿಜಾಯುರವಧಿ ಪದಿನಾಲ್ಕುವರಿಸಮುಮೇಳುತಿಂಗಳುಮಯ್ದುದಿವಸಮುಂಟೆನಲ್ ಆಷಾಢಬಹುಳಪಾಡಿವದೊಳಾಚಾವ್ಲವರ್ಧನಮೆಂಬ ನೋಂಪಿಯಂ ನೋನಲುದ್ಯುಕ್ತೆಯಾದಳೆಂತೆನೆ

ಮನವೊಲ್ದಿರ್ಪುಪವಾಸವೊಂದು ದೊರೆವೆತ್ತಾಚಾವ್ಲದೊಳ್ ಪಾರಣಾ
ದಿನಮೊಂ[1][ದಂತು][1]ಪವಾಸಮೊಂದಶನ[2][ದಿಂ][2]ದೊಂದಗ್ಗಳಂ ಪೆರ್ಚೆ ನೆ
ಟ್ಟನೆ ಪತ್ತೊಂಬತುನೂಱತೊಂಬತುದಿನಂಗಳ್ಪೋದೊಡಾಚಾವ್ಲವ
ರ್ಧನಮೊಂದಕ್ಕುಮವಿಪ್ಪತಯ್ದು ನೆಱ[3]ದಂದಕ್ಕುಂ ತದುದ್ಯಾಪನಂ ॥ ೧೧ ॥

ನೆಗಳುತ್ತಿರ್ದುಪವಾಸವಾಸರಮನೆಲ್ಲಂ ನೋಡೆ ಬಾಣಾದ್ರಿವಾ
ರ್ಧಿಗಳಾಗಿರ್ಕುಮವರ್ಕೆ ಪತ್ತುಮಡಿಯಕ್ಕುಂ ಪಾರಣಾವಾಸರಾ
ಳಿಗಳಿಂತಿರ್ತ್ತೆಱನಪ್ಪ ಪುಣ್ಯದಿನಮಂ ಸಮ್ಮಿಶ್ರಮಂ ಮಾಡೆ ಸಂ
ಖ್ಯೆಗಳಿಂ ಸಾರ್ಧಚತುರ್ದಶಾಬ್ದಯುತ ಪಂಚಾಹಃಪ್ರಭಂ ಭಾವಿಸಲ್ ॥ ೧೨ ॥

1. ದಲ್ತು (ಕ. ಗ) 2. ನೊಂ (ಕ. ಗ)

ಭುವನಜನಸ್ತುತ್ಯಂ ದಿವಿ
ಜವಂದನೀಯಂ ಮುನೀಂದ್ರಸೇವ್ಯಂ ಭವ್ಯ
ಸ್ತವನೀಯಮೆನಿಸಿದಾಚಾ
ಮ್ಲವರ್ಧನಂ ಪುಣ್ಯವರ್ಧನಂ ಕೇವಲಮೇ ॥ ೧೩ ॥

ವಿನುತಾನಂತಸುಖಾಭಿವರ್ಧನಮನವ್ಯಾಬಾಧಸೌಖ್ಯಾಭಿವ
ರ್ಧನಮುಂ ವಿಶ್ವಯಶಃಪ್ರವರ್ಧನಮನುದ್ಯದ್ಭಾಗ್ಯಸೌಭಾಗ್ಯವ
ರ್ಧನಮುಂ ರೂಪವಿಲಾಸವರ್ಧನಮನಾರ್ಯರ್ಪ್ರಸ್ತುತಾಚಾಮ್ಲವ
ರ್ಧನಮುಂ ನೋಂತಳಚಿಂತ್ಯಮಾಗೆ ಪೆಱರಿಂತಾರ್ ನೋಂತರೆಂಬನ್ನೆಗಂ ॥ ೧೪ ॥

ವ॥ ಅಂತು ಪದಿನಾಲ್ಕುವರಿಸಮಾಱುತಿಂಗಳುಮಯ್ದುದಿವಸಕ್ಕೆ ಪರಿಸಮಾ
ಪ್ತಿಗೆ ಸಲ್ವಾಚಾಮ್ಲವರ್ಧನಮೆಂಬ ತಪವನಾಚರಿಸಿ ತನಗೆ ಪರಮಾಯುಷ್ಯಮುಂದಿಂ
ಗೊಂದುತಿಂಗಳಪ್ಪುದಂ ಮುನ್ನಱಿವಳಪ್ಪುದಱಿಂ ಸಲ್ಲೇಖನೆಯುಂ ಪೂಣ್ದು ಚತು
ರ್ವಿಧಾಹಾರಶರೀರವ್ಯಾಪಾರನಿವೃತ್ತಿಯಿಂ ಸನ್ಯಸನವಿಧಿಯಿಂ

ಪೃಥ್ವಿ॥ ಅರಲ್ದ ಮುಖಪದ್ಮಮುಂ ನಿಬಿಡಬದ್ಧಪರ್ಯಂಕದೊಳ್
ಮರಲ್ದ ಕರಪಲ್ಲವದ್ವಿತಯಮುಂ ಬೆಡಂಗಪ್ಪಿನಂ ನಿರಂ
ತರವಿಶೋಧಿ ಕೂಡಿರೆ ಚತುರ್ವಿಧಾರಾಧನಾ
ಪುರಸ್ಸರತೆಯಿಂ ಸಮಾಧಿವಿಧಿಗೇಂ ಮನಂದಂದಳೋ ॥ ೧೫ ॥

ಅರೆಮುಗಿದಿರ್ದ ಜಾನಿಸುವ ಕಣ್ಮಲರಾಪ್ತಪದಾರ್ಥತತ್ವಮಂ
ಸ್ಮರಿಯಿಪ ಚಿತ್ತಮೊಳ್ಪುಗಿಡದೋದುವ ನಾಲಗೆ ಮುನ್ನಮಿರ್ದ ಬಿ
ತ್ತರದಿನದೆತ್ತಲುಂ ತಳರದಾಸನಮಿಂದ್ರನರೇಂದ್ರವಂದ್ಯನಂ
ಪರಮಜಿನೇಂದ್ರನಂ ಬಗೆವ ಭಾವಮಚಾಲ್ಯಮಶಲ್ಯ ಭಾವೆಯಾ ॥ ೧೬ ॥

ಪದುಳಿಕೆಗುಂದದಿರ್ದ ಪಳಿತಂಕದ ಚೆಲ್ವು ಸಡಿಲ್ದುದಿಲ್ಲ ಕ
ರ್ಮದ ಬಿಗಿಪೊಯ್ಯನೊಯ್ಯನೆ ಸಡಿಲ್ದುದು ನಿಶ್ಚಳ ಯೋಗಭಾವಮುಂ

ಬೆದಱಿದುದಿಲ್ಲ ಶಲ್ಯಮದಗಾರವದಂಡಕಷಾಯ ಸಂಕುಲಂ
ಬೆದಱಿದುದಿಂತು ಕೂಡಿದ ಸಮಾಧಿಯೊಳಲ್ಲದೆ ಸಯ್ಪು ಸಾರ್ಗುಮೇ ॥ ೧೭ ॥

ವ॥ ಅಂತೇಕಮಾಸಪರ್ಯವಸಾನಂಬರಮೇಕಸ್ಥಿತಿಯಿಂ ಸಮತಾಸಂಭಾವನೆಯಿಂ ಭಕ್ತಪ್ರತ್ಯಾಖ್ಯಾನವಿಧಿಯಿಂ ರತ್ನತ್ರಯಮನಾರಾಧಿಸಿ ಚರಮಸಮಯದೊಳಾತ್ಮೀಯ ಶರೀರಭಾರಪರಿಚ್ಯುತಿಯಾಗಿ ಸ್ತ್ರೀತ್ವಮಂ ಪತ್ತುವಿಟ್ಟು ಪದಿನಾಱನೆಯಚ್ಯುತಕಲ್ಪದೊಳ್ ಇಂದ್ರನೀಲಮಣಿಕುಟ್ಟಿಮತಳವಿರಾಜಮಾನದೊಳುತ್ತುಂಗ ಮಣಿಮಯಸ್ತಂಭಸಂಭೃತದೊಳತಿಸುರಚಿರಪ್ರವಾಳಜಾಳಾಂತರವಿರಾಜಮಾನತಳದೊಳನೂನಮರಕತರತ್ನಭಿತ್ತಿವಿಭ್ರಾಜದೊಳಾಲಂಬಮಾನಮುಕ್ತಾದಾಮಲಂಬೂಷಭೂಷಿತದೊಳನುಪ[ಮಪವ]ಮಾನವಶಲುಳಿತಕೇತುಮಾಳಾಸಮುಲ್ಲಾಸಿತದೊಳತ್ಯಂತಸುರಭಿಗಂಧಬಂಧುರನಮೇರುಮಂದಾರಪಾರಿಜಾತಪ್ರಸೂನಪ್ರಸರಪರಿರಂಜಿತಪ್ರಾಂಗಣದೊಳಭಿನವಾನೂನಕಾಳಾಗರುಧೂಪಧೂಮೋದ್ದಾಮಾಕೃತ್ರಿಮಸ್ವಭಾವರಮಣೀಯಪದ್ಮಗುಲ್ಮವಿಮಾನದುಪಪಾತಭವನದೊಳಪ್ರತಿಹತಪಂಚರತ್ನಪ್ರಭಾವಿಭ್ರಮಭ್ರಾಜಿಯಪ್ಪ ದಿವ್ಯತಲ್ಪತಳದ ಪೊರೆಯೊಳ್ ರಾಗರಸಮಯದೊಳ್ ಪೊರೆದು

ಮಣಿಮಯಚಿತ್ರಭಿತ್ತಿಗಳ ದೀಪ್ತಿಗಳೊಳ್ ನಿಜದೇಹದೀಪ್ತಿಗಳ್
ಸೆಣಸಿ ಪಳಂಚಿ ಸಂಚಳಿಸೆ ಕಣ್ಗೆಸೆಯುತ್ತಿರೆ ದಿವ್ಯವಸ್ತ್ರಭೂ
ಷಣಮಣಿಮಾಳೆಗಳ್ನೆಱೆದು ತನ್ನೊಡವುಟ್ಟಿರೆ ಬೇಗವೇಗಮಾ
ಕ್ಷಣದೊಳೆ ಜವ್ವನಂ ನೆಱೆಯೆ ನೆಟ್ಟನೆ ತೊಟ್ಟನೆ ಬಂದು ಪುಟ್ಟಿದಂ ॥ ೧೮ ॥

ತೆಱೆಯದೆ ಮುಚ್ಚಿದ ಪಡಿಗಳ್
ತೆಱೆದುವು ನೆಱೆ ಮೋಕ್ಷಗೃಹದ ಸೌಖ್ಯದ ಪಡಿಗಳ್
ತೆಱೆದವನೆನೆ ದಿವದ ಪಡಿಗಳ್
ತೆಱೆದುವದೇನರಿದೆ ಜೈನಪದಸೇವನೆಯಿಂ ॥ ೧೯ ॥

ಸುರಕುಸುಮಾಸಾರದ ಬೆ
ಳ್ಸರಿ ಸುರಿದುದು ಸುರಸಮಸ್ತಮಂದಿರಮಂ ಭೋ
ರ್ಗರೆದ್ಮದು ಸುರದುಂದುಭಿಗಳ್
ಮೊರೆದುವು ಸುರಭವನದೊಳಗೆ ಸುರನುದಯಿಪುದುಂ ॥ ೨೦ ॥

ಮಿಸುಗುವ ರತ್ನತೋರಣಗಣಂಗಳನೂನವಿಮಾನದೊಳ್ತಗು
ಳ್ದಿಸೆದವು ಜೀಯನಂದಜಯಮಂಗಳವರ್ಧನನಾದಮಾದಮಂ
ದೆಸೆದುದು ಸುತ್ತಲುಂ ಗುಡಿಯ ದಾಂಗುಡಿಗಳ್ ಮಿಳಿರ್ದಾಡುವಂತೆ ಕ
ಣ್ಗೆಸೆದವು ತತ್ಸುರೋತ್ತಮನ ಪುಣ್ಯಮನೊಯ್ಯನೆ ಸೂಚಿಪಂತೆವೋಲ್ ॥ ೨೧ ॥

ಕೂಡಿದುದಂದು ಬಂದು ಪರಿವಾರನಿಳಿಂಪನಿಕಾಯಮುಣ್ಮಿಯಿಂ
ದಾಡಿದುದಂದು ಬಂದು ವಿವಿಧಾಮರಸಂಕುಲವೋಜೆಗೊಳ್ವಿನಂ
ಪಾಡಿದುದಂದು ಬಂದು ಸುರವೃಂದವೊಡಂಬಡೆ ಮಂದಮಂದದಿಂ
ತೀಡಿದುದಂದು ಬಂದು ಸತತೋತ್ಸವಕಾರಣದಿಂ ಸಮೀರಣಂ ॥ ೨೨ ॥

ವ॥ ಇಂತಾ ದಿವಿಜಲೋಕದ ವಿವಿಧವಾದ್ಯಲಯಂಗಳೊಳೆಱಗಿ ತುಱುಗಿ ಬಂದಾಡುವ ದೇವಾಂಗನೆಯರುಮಂ ಪರಮ ಜಿನರಾಜ ರಾಜಿತಾತಿಸ್ತವಂಗಳಂ ಪ್ರಸ್ತುತಂಗೆಯ್ದು ಬರ್ಪ್ಪವರುಮನಮೃತಧಾರಾಸಾರಮೃದುಮಧುರಲಲಿತನಾದದೊಡಂಬಟ್ಟು ಸುರಜನಂಗಳನುಱೆ ಸೆಱೆವಿಡಿದು ಪಾಡುವ ಗಂಧರ್ವಗೀರ್ವಾಣರುಮಂ ಅನೇಕಭಂಗಿಸಂಗತಭೃಂಗಾರಕನಕಕಳಶಮಣಿದರ್ಪಣ ಚಾರುಚಾಮರಾತಪತ್ರಪ್ರಭೃತಿ ಮಂಗಳೋಪಕರಣಂಗಳಂ ಮುಂದಿಟ್ಟು ಸೇಸಿಕ್ಕಲೆಂದು ನಿಂದ ಬೃಂದಾರಕಸುಂದರೀಬೃಂದಮುಮನತಿಪ್ರಮೋದದಿಂ ನೆರೆದೋಲಗಿಸಲೆಂದು ಬಂದ ಪರಿವಾರದೇವಿಯರುಮಂ ಕಾಮರಾಗರಸಸಾಮ್ರಾಜ್ಯಸರ್ವಸ್ವಭೂತೆಯರಾಗಿ ಬಂದಿರ್ದಚ್ಚರಸಿಯರುಮಂ ಭೋಂಕನೆ ಕಂಡು

ಆನೆತ್ತೀ ಲೋಕಮೆತ್ತೀ ಪಟುಪಟಹಜಯಾರಾವಮೆತ್ತೀ ವಿಮಾನಂ
ತಾನೆತ್ತೀ ನೂತ್ನರತ್ನಾಭರಣನಿವಹಮೆತ್ತೀ ಲಸನ್ಮಂದ್ರಗೀತಾ
ನೂನಪ್ರಧ್ವಾನಮೆತ್ತೀ ಯುವತಿನಿಚಯಮೆತ್ತೆಂಬಿನಂ ಬಂದು ಪುಟ್ಟಿ
ತ್ತಾ ನಾಕೇಂದ್ರಂಗೆ ನಿರ್ವ್ಯಾಕುಲಮಮಳಭವಪ್ರತ್ಯಯಜ್ಞಾನಮಾಗಳ್ ॥ ೨೩ ॥

ವ॥ ಅಂತು ಪುಟ್ಟಿದ ಭವಪ್ರತ್ಯಯಜ್ಞಾನದಿನತೀತಭವವೃತ್ತಾಂತಮೆಲ್ಲಮಂ
ವಿಸ್ತರಮಱಿದು

ಇದು ದಿವ್ಯಾಮರಲೋಕಮೆನ್ನ ನಿಳಯಂ ತಾನೀ ವಿಮಾನಂ ಸಮಂ
ತಿದು ಬೃಂದಾರಕಬೃಂದಮಂಗಜಪತಾಕಾನೀಕದಂತೊಪ್ಪಿ ತೋ
ರ್ಪುದು ದೇವೀನಿಕುರುಂಬಮಿಂತಿದು ಸುರಶ್ರೀಸುಂದರಂ ತಪ್ಪದ
ಪ್ಪುದಿದೆಲ್ಲಂ ಪೆಱತೇಂ ಮದೀಯ ಕೃತಪುಣ್ಯಪ್ರಾಪ್ತಮವ್ಯಾಕುಲಂ ॥ ೨೪ ॥

ವ॥ ಎಂದು ತನ್ನೊಳೆ ಬಗೆವನ್ನೆಗಂ ವಿವಿಧಮಣಿಮಯಪಟಳಿಕಾನೇಕ ಪರಿ
ಪೂರ್ಣ್ಣವಿಚಿತ್ರವಸ್ತ್ರಾಭರಣಾನುಲೇಪನಮಾಲ್ಯಾದಿ ಮಾಂಗಲ್ಯದ್ರವ್ಯಂಗಳುಮಂ
ಮಹತ್ತರದೇವಿಯರ್ ಕೊಂಡುಬಂದು ಮುಂದಿಟ್ಟು ಪೊಡೆವಟ್ಟು

ವೃ॥ ದಿವಿಜಪ್ರಸ್ತುತಮಪ್ಪ ಕಲ್ಪಮಿದೆ ದಲ್ತಾನಚ್ಯುತಂ ಪದ್ಮಗು
ಲ್ಮವಿಮಾನಂ ನೆಗೞ್ದೀವಿಮಾನಮಮರೀಸಂದೋಹಮಿಾ ವ್ಯೋಮಮಿಂ
ತಿವರೆಲ್ಲಂ ಪರಿವಾರದೇವರೊಳಪೊಕ್ಕೀ ತೋರ್ಪವರ್ ದೇವ ಬ
ರ್ಪವರೀ ರೂಪವಿಲಾಸವಿಭ್ರಮಸಮೇತರ್ ನಿನ್ನ ಮಾದೇವಿಯರ್ ॥ ೨೫ ॥

ಈ ನೆಗೞ್ದ ಪದ್ಮಗುಲ್ಮವಿ
ಮಾನಕ್ಕಧಿನಾಥನಯ್ ಸುರೇಶ್ವರಸಮಸಾಮಾ
ನಿಕನಯ್ ಪೆಸರಿಂದಂ ನೀ
ನನುಪಮತೇಜನಪ್ಪ ಪದ್ಮಪ್ರಭನಯ್ ॥ ೨೬ ॥

ಇದೆ ಸಾರಂ ಸ್ವರ್ಗಸೌಖ್ಯಕ್ಕಿದೆ ದಿವಿಜಸುಖಕ್ಕಾಗರಂ ಭಾವಿಸಲ್ಕಿಂ
ತಿದೆ ದಿವ್ಯಶ್ರೀವಿಲಾಸಾಲಯುವಿದೆ ಸುರಭೋಗೋಪಭೋಗಾಸ್ಪದಂ ಮ
ತ್ತಿದಱಿಂ ಮೇಗಿಲ್ಲ ಕಲ್ಪಂ ಬಗೆವೊಡಿದು ಭವದ್ಭಾಗ್ಯದಿಂ ಸಾರ್ಚಿಬಂದಿ
ರ್ದುದು ಕೈಕೊಂಡಿಂತಿದಂ ಪಾಲಿಸುವುದು ಪೆಱತೇನಟ್ಟಿಯಿಂ ಪುಣ್ಯಮೂರ್ತೀ ॥೨೭॥

ವ॥ ಎಂದು ಬಿನ್ನಪಂಗೆಯ್ವುದುಮಾ ದೇವಂ ದೇವಲೋಕಪ್ರಾಪ್ತಿಯೊಳ
ನಂತಸಂತೋಷಾಮೃತಾಬ್ಧಿವಿಳಾಸ [ಸ]ಮುಚ್ಚಳಿತೋದಾರ ಪೂರ ಸವನ ಪಾವನ
ಮಾನಸನಾಗಿ

ಜಿನರ ಪದಸೇವೆಯಿಂದಂ
ಮುನೀಂದ್ರರುಪದೇಶದಿಂದಮಿಂತೀ ವಿಭವಂ
ಜನಿಯಿಸಿದುದೀಗಳಲ್ಲದೊ
ಡನುಪಮುಸುರವಿಭವಮೆನಗೆ ವಿಷಯಮೊ ಪೊಲನೋ ॥ ೨೮ ॥

ವ॥ ಎಂದಾ ದೇವಂ ದೇವನಿಕಾಯುಂ ಬೆರಸು

ಅಮರಾವಾಸದೊಳುಳ್ಳ ದಿವ್ಯಮಣಿಸಂಘಾತಂಗಳಂ ದಿವ್ಯವ
ಸ್ತ್ರಮನೋರಂತಿರೆ ಕೊಂಡು ಪೋಗಿ ಜಿನಚೈತ್ಯವ್ರಾತಮಂ ಸುಪ್ರಭೂ
ತಮನತ್ಯಂತವಿನೂತಮಂ ತ್ರಿಭುವನಪ್ರಖ್ಯಾತಮಂ ಲೋಕಪೂಜ್ಯ
ಮನಾನಂದದಿನಾಗಳರ್ಚಿಸಿದನಾ ಪದ್ಮಪ್ರಭಂ ಸುಪ್ರಭಂ ॥ ೨೯ ॥

ಅಮರವ್ರಾತಸಮೇತನಂತೆ ಬೞಿಯುಂ ಶ್ರೀಸೂರ್ಯಮಿತ್ರಾಗ್ನಿಭೂ
ತಿಮುನೀಂದ್ರೋಪಕೃತಂಗಳಂ ನೆನೆದು ತನ್ನಿರ್ವಾಣಭೂಮಿಪ್ರದೇ
ಶಮನಾನಮ್ರಸುರಾಸುರೋರಗಪವಿತ್ರೋದ್ದೇಶಮಂ ಭಕ್ತಿಯಿಂ
ದಮೊಱಲ್ದರ್ಚಿಸಿದಂ ಮಹಾತ್ಮನಮಳಂ ದ್ರವ್ಯಾರ್ಚನಾನೀಕದಿಂ ॥ ೩೦ ॥

ಅಂತು ಮುನೀಶ್ವರೋಪಕೃತಮಂ ಮನದೊಳ್ ನೆನೆದಗ್ರಮಂದಿರೋ
ಪಾಂತಮನೆಯ್ದೆವಂದು ಪರಿನಿರ್ವೃತಿಭೂಮಿಯನಾ ಸುರೋತ್ತಮಂ

ಸಂತಸದಿಂದೆ ಭಕ್ತಿವೆರಸಾಗಳೆ ಪೂಜಿಸಿ ಲೇಸುಗೆಯ್ವನಿ
ನ್ನಂತುಟೆ ತನ್ಮುನೀಂದ್ರಕೃತಮಂ ಮಱೆದಂದು ಕೃತಘ್ನನಾಗನೇ || ೩೧ ||

ವ|| ಅಂತಪರಿಮಿತಭಕ್ತಿಯಿನನೇಕಾರ್ಚನೆಗಳಿನರ್ಚಿಸಿ ದೇವಲೋಕಕ್ಕೆ ವಂದು ಚತುಸ್ಸಹಸ್ರಸಾಮಾನಿಕಸಮೇತನುಂ ತತ್ಪ್ರಮಾಣಾಂಗರಕ್ಷತ್ರಿದಶಾನೀಕನುಂ ತ್ರಯಸ್ತ್ರಿಂಶತ್ಪರಿಮಿತದಿವಿಜಗಣಪರಿವೃತನುಂ ಚತುಷ್ಟಯಾಭಿಷ್ಟುತಪ್ರಧಾನಲೋಕಪಾಳಾಭಿರಾಮನುಂ ನಾನಾಪ್ರಕಾರಪಾರಿಷದಪ್ರಕೀರ್ಣ್ಣಕಾಭಿಯೋಗ್ಯಕಿಲ್ಬಿಷಿಕಾನೀಕವ್ಯಾಕೀರ್ಣ್ಣನುಮಂತರ್ಮಧ್ಯಬಾಹ್ಯತ್ರಿಃಪ್ರಕಾರಪರಿಷತ್ಪ್ರಕಾಶಕರನಾಗಿ ಪರಮೈಶ್ವರ್ಯಸ[ಂಪ]ನ್ನನಾದನದಲ್ಲದೆಯುಂ

ಪ್ರಿಯದಿವಿಜಾಂಗನೆಯರ್ ನಿಃ
ಕ್ರಿಯಸಂಭವೆಯಪ್ಪವರ್ಗೆ ಎಣ್ಬರ್ಮಾದೇ
ವಿಯರೆಣ್ಬರ್ನಚ್ಚಿನ ದೇ
ವಿಯರಾ ಪದ್ಮಪ್ರಭಂಗೆ ಮೂವತ್ತಿರ್ವರ್ || ೩೨ ||

ಅಮರನ ದೇಹೋಚ್ಛ್ರಿತಿ ಮೂ
ಱು ಮೊೞಂ ಪರಮಾಯುವಿಪ್ಪತ್ತೆರಡು ಸಮುದ್ರೋ
ಪಮಮನಿತೆ ಸಹಸ್ರಾಬ್ದ
ಕ್ಕಮೃತಾಹಾರಮನೆ ನೆನೆದು ತಣಿವಂ ಮನದೊಳ್ || ೩೩ ||

ಸುರಭಿಪರಿಮಳಸುಗಂಧೋ
ತ್ಕರಮಂ ಪನ್ನೊಂದುತಿಂಗಳಿಂಗೊರ್ಮೆ ಮನೋ
ಹರಮಾಗಿರೆ ನಸು ಸುಯ್ವಂ
ನಿರುಪಮಮಹಿಮಾಪ್ರಭಾವನಂತಾ ದೇವಂ || ೩೪ ||

ವ|| ಮತ್ತಮಣಿಮಾದ್ಯಷ್ಟಗುಣಸ್ವಭಾವಸಹಿತನುಂ ಶೋಕಾತಂಕಸಂಕ್ಲೇಶಭಯಜರಾಲಸ್ಯಾಕ್ಷೇಪಸ್ಪಂದನನಿದ್ರಾದಿದೋಷವಿರಹಿತನುಂ ವ್ಯಪೇತತನೂರುಹಶ್ಮಶ್ರು

ಕೇಶರೋಮನಖನುಂ ಮನಃಪ್ರವೀಚಾರಸಾರೋದಾರಸುಖನುಂ ಸಹಜಸುರಭಿಪರಿಮಳಾಮೋದಗಂಧಬಂಧುರತಾಸಮುತ್ಪನ್ನನುಂ ಸಕಲಶುಭಲಕ್ಷಣೋಪಲಕ್ಷಿತಾಕ್ಷೂಣಶರೀರಸಂಪನ್ನನುಂ ನಿರವಶೇಷನಿರಸ್ತಧಾತುಮಳಕಳಂಕಕಳೇವರನುಂ ಸುರಾಂಗನಾಪಾಂಗನೀಳನೀರೇರುಹವಿಕಸನಶಶಾಂಕನುಮಾಗಿ

ದಿವಿಜಸ್ತ್ರೀಜಘನಾಭಿರಾಮರಶನಂ ದೇವಾಂಗನಾಪಾಂಗಕೈ
ರವಚಂದ್ರಂ ಸುರಕಾಮಿನೀಸ್ತನತಟಾಳಂಕಾರಹಾರಂ ನಿಳಿಂ
ಪವಧೂವಕ್ತ್ರಸರೋಜಮಿತ್ರನೆನೆ ಚಿತ್ತೋದ್ಯತ್ಪ್ರವೀಚಾರಸಾ
ರವಿನೋದಂಗಳಿನಂದದೇಂ ನಲಿದನೋ ಕಲ್ಪಾಮರಂ ಕಲ್ಪದೊಳ್ ॥ ೩೫ ॥

ಚಾರುಸುರಾಂಗನಾರತಿಸುಖಾಮೃತಸೇಚನೆಗೆಂದು ಕಾಯಮಂ
ಪೋರಿಸಿ ನೋಟದೊಳ್ತೊಡರ್ದು ಶಬ್ದಮನಾಲಿಸಿ ಜೀವ ಜೀವಸಂ
ಪೋ ರುಚಿಯಲ್ಲಮೆಂದದನಧಃಕರಿಪಂದದಿನೇಂ ಮನಃಪ್ರವೀ
ಚಾರಸುಖಾಂಬುನಿಧಿಯೊಳ್ ನಲಿದಾಡಿದನಾ ಸುರೋತ್ತಮಂ ॥ ೩೬ ॥

ಹರಿವೆಸಗೆಯ್ವರಚ್ಚರಸೆಯರ್ಬಗೆದಾಗಳೆ ಕೂರ್ತು ಬರ್ಪರ
ಚ್ಚರಸೆಯರಿಚ್ಛೆಯಂ ಸಲಿಸಿ ಮೆಚ್ಚಿದೋಲಗಿಸುತ್ತುಮಿರ್ಪರ
ಚ್ಚರಸೆಯರಿಂಬುಕೆಯ್ದೊಲಿಸಿ ಚಿತ್ತದೊಳಗ್ಗಲಿಸುತ್ತುಮಿರ್ಪರ
ಚ್ಚರಸೆಯರೆಂದೊಡೇವೊಗಳ್ವುದೊ ದಿವಿಜೇಂದ್ರನ ದಿವ್ಯಲೀಲೆಯಂ ॥ ೩೭ ॥

ತ್ರೈಲೋಕ್ಯನಾಥನೋಲಗ
ಸಾಲೆಯೊಳಮರೇಂದ್ರನೊಡನೆ ರಾಗೋದಯದಿಂ
ತೋಳು ತೊಡೆ ಸೋಂಕಿ ಕುಳ್ಳಿ
ರ್ದೋಲಗಿಸುತ್ತಿರ್ಪನಚ್ಯುತಿಯಿಂ ಜಿನಪತಿಯಂ ॥ ೩೮ ॥

ಓರೊರ್ಮೆ ರತ್ನಮುದ್ರಿಕೆ
ಯಾರಯೆ ಕೇಯೂರದೊಳ್ ಪಳಂಚಲೆಯೆ ಮಹೋ

ದಾರತೆಯಿನಚ್ಯುತೇಂದ್ರನೊ
ಳೋರಾಸನಮಿರ್ದನಮರನಾಸ್ಥಾಯಿಕೆಯೊಳ್ ॥ ೩೯ ॥

ಕನಕಾದ್ರೀಂದ್ರನಿಕುಂಜರಂಜಿತವನಕ್ಕೋರೋರ್ವೆ ಗೋತ್ರಾಚಲಾ
ಭಿನುತಾನೂನಮಹಾಸರೋರುಹವನಕ್ಕೋರೋರ್ವೆ ನೀಹಾರತಾ
ರನಗೋಪತ್ಯಕ ಕಲ್ಪಭೂರುಹವನಕ್ಕೋರೋರ್ವೆ ಲೀಲಾವಿಲೋ
ಕನದಿಂ ಮಾಣದೆ ಪೋಗಿ ಪೊಟ್ಟುಗಳೆವಂ ನಿಚ್ಚಂ ನಿಳಿಂಪೋತ್ತಮಂ ॥ ೪೦ ॥

ಹಿಮವತ್ಕುಕ್ಷಿಳದೊಳ್ ಮಂದರಮಹಿಧರದೊಳ್ ಶಾಲ್ಮಲೀಚೈತ್ಯಜಂಬೂ
ದ್ರುಮದೊಳ್ ವಕ್ಷಾರದೊಳ್ ಕುಂಡಳಗಿರಿವರದೊಳ್ ಮಾನುಷಾದ್ರೀಂದ್ರದೊಳ್ ತಾ
ರಮಹೀಧ್ರೋಪಾಂತ್ಯದೊಳ್ಸಂತತಮಮರನಿಕಾಯಾನ್ವಿತಂ ವಿಶ್ರುತಾಕೃ
ತ್ರಿಮಚೈತ್ಯಾವಾಸಪೂಜೋತ್ಸವದಿನಗಲನಲ್ಲಿಂದಮೆಂದುಂ ಸುರೇಂದ್ರಂ ॥ ೪೧ ॥

ಸಲೆ ದೇವಾಗಮಮೆತ್ತಲತ್ತಲೆ ಸುಧರ್ಮಕ್ಷೇತ್ರದೊಳ್ಪೆತ್ತಲ
ತ್ತಲೆ ಯೋಗೀಶ್ವರರೆತ್ತಲತ್ತಲೆ ಪದಾರ್ಥಾಳಂಬದಿಂದೆತ್ತಲ
ತ್ತಲೆ ತೀರ್ಥಾವಳಿಯೆತ್ತಲತ್ತಲೆ ಜಿನಶ್ರೀಗೇಹಮುಂತೆತ್ತಲ
ತ್ತಲೆ ಜೈನೋತ್ಸವದಿಂದೆ ಪೋದುದೆ ವಿನೋದಂ ತತ್ಸುರಂಗೆತ್ತಲುಂ ॥ ೪೨ ॥

ಮುದದಿಂ ನಾನಾವಿನೋದಂಗಳಿನೊದವಿದ ಸಂಪ್ರೀತಿಯಿಂ ಮೂಡಿಮುಟ್ಕಾ
ಡಿದನೆತ್ತಂ ನೀಡುವೋಲಾಡಿದನವಗಹನಂ ಮಾಡಿದಂ ರಾಗದಿಂದೀಂ
ಟಿದನೋರಂತೀಸಿದಂ ದೊಮ್ಮಳಿಸಿ ತುಳುಕುನೀರಾಡಿದಂ ದೋಣಿಯಿಂದೇ
ಱಿದನೆಂಬಂತಾ ಸುರೇಂದ್ರಂ ದಿವಿಜಸುಖಸುಧಾಂಭೋಧಿಯೊಳ್ ಪದ್ಮತೇಜಂ ॥೪೩॥

ಅನುಪಮ ದಿವ್ಯ ಸೇವ್ಯ ವಿಭವಂ ದೊರೆವೆತ್ತ ವಿನೋದವೃತ್ತಿಯಿಂ
ಜನಿಯಿಸೆ ಚೆಲ್ವುವೆತ್ತೆಸೆವ ಗಾಡಿ ಮನೋಹರಮಾಗಿ ಸಂತತಂ
ಮನಸಿಜರಾಗಮಂ ಸಲಿಸೆ ಕುಂದದ ನಿಪ್ಪೊಸತಪ್ಪ ಜವ್ವನಂ
ತನಗೆ ವಿಳಾಸಮಂ ಪಡೆಯೆ ಭೋಗಿಸಿದಂ ಸುರಲೋಕ ಭೋಗಮಂ ॥ ೪೪ ॥

ವ॥ ಅನ್ನೆಗಮಿತ್ತಲೀ ಭರತಕ್ಷೇತ್ರದವಂತೀವಿಷಯದ ಮಧ್ಯಪ್ರದೇಶಮ
ನಳನಂಕರಿಸಿ

ಮಾನವಲೋಕದೊಳ್ ಪುರಮಿದರ್ಕೆಣೆಯಾವುದೆನಿಪ್ಪ ಕೀರ್ತಿಯಂ
ತಾನೊಳಕೊಂಡು ನೋೞ್ಪರ ಮನಂಗಳನಿಟ್ಟುಳಿಗೊಂಡು ಚೆಲ್ವಿನು
ದ್ದಾನಿಯನಾಂತು ಕಣ್ಗೆ ಕರಮೊಪ್ಪುಗುಮೂರ್ಜಿತರಾಜಧಾನಿಯು
ಜ್ಜೇನಿ ಧರಾಂಗನಾವದನಮಂಗಳದರ್ಪಣಮಿಂತಿದೆಂಬಿನಂ ॥ ೪೫ ॥

ಆಪುರದ ಪೊಱವೊೞಲ್ ಸಿ
ಕ್ಷಿಪ ವಸಂತಾಗಮನಕ್ಕೆ ತಾನಾಗಮ
ಮೇಂ ಪರಿಭಾವಿಸೆ ಕಾಮಂ
ಕಾಪೆನೆ ಕರಮೊಪ್ಪಿ ತೋರ್ಪುದುದ್ಯಾನವನಂ (?) ॥ ೪೬ ॥

ತುಱುಗಿ ತಳಿರ್ತಶೋಕೆ ಪೊಸಗೊಂಚಲೊಳಂಚಿರಮಲ್ಲದೆಯ್ದೆ ಕಿ
ಕ್ಕಿಱಿಗಿಱಿದಿರ್ದ ಮಾವು ಫಳಭಾರದಿನುರ್ವಿಗಗುರ್ವು ಪರ್ವೆ ತ
ಕ್ಕೆಱಗಿದ ಬಾೞೆ ಪಣ್ಗೊನೆಗಳಿಂ ಗೊನೆಗೊಂಡ ಕವುಂಗು ಕಾಯ್ಗಳಿಂ
ತುಱುಗಿದ ತೆಂಗು ಶೋಭಿಪುದನಂಗನ ಮಂಗಳಗೇಹಮೆಂಬಿನಂ ॥ ೪೭ ॥

ಅಸುಕೆಯ ಕೆಂಪು ಪಾದರಿಯ ಕಂಪು ಪಯೋಜಲಸತ್ಸರೋವರ
ಪ್ರಸರದ ತಣ್ಪು ಸಂಪಗೆಯ ನುಣ್ಪು ಲತಾಗೃಹದೊಳ್ಪು ಮಲ್ಲಿಕಾ
ಕುಸುಮದ ಬೆಳ್ಪು ಮಾವಿನ ಪಸುರ್ಪು ಮದಾಳಿಯ ಕರ್ಪು ಕೂಡೆ ಕ
ಣ್ಗೆಸೆವೆಲೆವಳ್ಳಿಯಾಗರದಗುರ್ವು ತಮಾಳದ ಸುರ್ಪು ಸುತ್ತಲುಂ ॥ ೪೮ ॥

ಮೊರೆವ ಮದಾಳಿ ಸಂಭ್ರಮದೆ ಕೂಗುವ ಕೋಗಿಲೆಯಲ್ಲಿ ಬಿಚ್ಚತಂ
*[1]ಬಳಸುವ (?) ಜಕ್ಕವಕ್ಕಿ ನಯದಿಂ ನಲಿದಾಡುವ ರಾಜಹಂಸೆ ಸು
ಸ್ವರದಿನನಾರತಂ ಬೆದಱಿದೋದುವ ಕೀರನಿಕಾಯಮಾ ವನಾಂ
ತರದೊಳಗೊರ್ಮೆಯುಂ ಮಱೆದು ಮಾಣವು ಮನ್ಮಥನಾಜ್ಞೆಯೆಂಬಿನಂ ॥ ೪೯ ॥

---

1. *[ಚಿರ] ಸುವ (?)

ಪೃಥ್ವಿ|| ಅಮೇಯ ಕನಕಾಬ್ಜಪಿಂಜರಪರಾಗಮಂ ಗಾತ್ರದೊಳ್
ತೆಮೞ್ದ ಕೊಳದಿಂ ಕೊಳಕ್ಕೆಱಗುತಿರ್ಪ ವಿಭ್ರಾಜಿತ
ಭ್ರಮದ್ಭ್ರಮರಸಂಕುಳಂ ಬನದೊಳೞ್ತಿಯಿಂದಾಡುತಿ
ರ್ಪ ಮನ್ಮಥನ ಪೊನ್ನ ಬಟ್ಟುಗಳ ಪೋಲ್ವೆಯಂ ಪುಟ್ಟಿಕುಂ || ೫೦ ||

ಪಿರಿಯ ಪ[1][ರಿ][1]ವುಗಳ ಸುತ್ತಿದ
ಪರಿಕಾಲ್ಗಳ ತುಱುಗಿದಣ್ಣಗಳ ತೀವಿದ ಪೊ
ಕ್ಕರಣೆಗಳ ನೆಱೆದ ಕೆಱೆಗಳ
ಸರೋವರಂಗಳ ಬೆಡಂಗಗುಂದಲೆ ಪುರದೊಳ್ || ೫೧ ||

ಪ್ರಬಳಫಳಭಾರದಿಂ ಕೂ
ಡಿ ಬಳ್ಳಿ ತೆನೆ ನೆಲನನಲೆಯೆ ಪವನನ ಹತಿಯಿಂ
ದೆ ಬೆಡಂಗುವೆತ್ತು ನೆಱೆ ಬೀ
ಗಿ ಬೆಳೆದುವು ಮಗಮಗಿಪ ಗಂಧಶಾಲಿವನಂಗಳ್ || ೫೨ ||

ಕಳಮೆವನಕ್ಕಾಗಿ ತೆಱಿಂ
ಬೊಳೆವ ಬಕಂ ಸುೞಿವ ಸೋಗೆ ಜಡಿವರಗಿಳಿಗಳ್
ವಿಲಸಿತ ರವದಿಂ ಪಾಂಥ ಪ್ರ
ಬಲಮನೋರಥವಿಘಾತಮಂ ಮಾಡುತ್ತುಂ (?) || ೫೩ ||

ವನಜಾತಾಸ್ಯೆ ರಥಾಂಗಯುಗ್ಮಕುಚೆ ನೀರೇಜಾಕ್ಷಿ ಸದ್‌ಹಂಸಗಾ
ಮಿನಿ ರಾಜತ್ಕಳಕಂಠನಿಸ್ವನೆ ಕಳಾಪಿ ಪ್ರಾಂಶುಧಮ್ಮಿಲ್ಲೆಯೆಂ
ಬ ನಿಜಾಕಾರಮನುಂಟುಮಾಡಿ ಮುದದಿಂ ಕೆಯ್‌ಗಾವ ಪಾಮರಿಯಾ
ವನವಂ ನೋೞ್ಪಜನಕ್ಕೆ ಮಿಕ್ಕವನಲಕ್ಷ್ಮೀಭ್ರಾಂತಿಯಂ ಮಾಡುವಳ್ || ೫೪ ||

---

1. ರ (ಕ).

ಮನಸಿಜನಾಯುಧ ನಿಲಯಂ
ಮನಸಿಜನ ಸಮಗ್ರರಾಜ್ಯಲಕ್ಷ್ಮೀಸದನಂ
ಮನಸಿಜನ ಜಯ[ನ]ಸಾಲೆಯು
ಮೆನೆ ಸೊಗಯಿಸುವುವು ಮನೋಹರೇಕ್ಷುವನಂಗಳ್ || ೫೫ ||

ತರತರದಿಂ ತೆರಳೆ ರಸಂ
ನಿರಂತರೋದ್ಯತ್ಪ್ರಸನ್ನಮತಿಯಿಂದಂ ಗಾ
ಣರತಂಡದಂಡದಿಂದಂ
ಮೊರೆವುವು ಗಾಣಂಗಳಿಕ್ಷುವಾಟಾಂತರದೊಳ್ || ೫೬ ||

ನಗರಂ ವಿಶ್ವಾವನೀಚಕ್ರದೊಳನುಸಮಗಾಂಭೀರ್ಯದಿಂ ನೂತ್ನರತ್ನಾ
ಳಿಗಳಿಂದಂ ಪೆರ್ಮೆಯಿಂ ನೋಡುವೊಡೆನಗೆ....ಗದಂತಾಮಿಗಿಲ್ ತಾಂ
ಮಿಗಿಲೆಂಬಾಕ್ಷೇಪದಿಂ ಮೂವಳಸು ವಳಸಿ ಸುತ್ತಿರ್ದದಂಬೋಧಿಯೆಂಬಂ
ತೆ ಗಭೀರಾರಾವದಿಂ ಸಲ್ವೊರೆವವೊಲೆಸೆಗುಂ ಸುತ್ತಿ ಪಾನೀಯಖೇಯಂ || ೫೭ ||

ಸಾರಮೆನಲ್ ತರಂ ತರದಿನೊಪ್ಪುವ ಪೊಂಗಳಸಂಗಳಿಂದಳಂ
ಕಾರ ಸಹಸ್ರಕೂಟನಿಕುರುಂಬದಿನಪ್ರತಿಮಂಗಳಪ್ಪ ರೂ
ವಾರದಿನಾರುಮಂ ಬಗೆಗೊಳಲ್ಪರಿಶೋಭಿಸ ಮಂಟಪಂಗಳಿಂ
ನೇರಿದವಾದ ಗರ್ಭಗೃಹದಿಂ ಜಿನರಾಜಗೃಹಂಗಳೊಪ್ಪುಗುಂ || ೫೮ ||

ಜಿನಪೂಜಾತಿಶಯಕ್ರಿಯಾಘಟಿತ ಘಂಟಾರಾವದಿಂ ನರ್ತಕೀ
ಜನವೈಚಿತ್ರ್ಯಲಯಕ್ಕೆ ಲಕ್ಕೆ ತೆಜಿದಿಂದಂ ಪೊಯ್ವ ನಾನಾನಕ
ಧ್ವನಿಯಿಂ ಮಂಗಳವಂದಿಮಾಗಧಜಯಪ್ರಧ್ವಾನದಿಂ ಶಂಖನಿ
ಸ್ವನದಿಂದತ್ತಲುಮಿತ್ತಲುಂ ಸೊಗಯಿಕುಂ ತಾನೆತ್ತಲುಂ ಸುತ್ತಲುಂ || ೫೯ ||

ಪವಣಜಿಯಲ್ ಬಾರದು ಲ
ಕ್ಕೆ ವಳಿ [1][ಯಿ][1]ಕೆಯು ಕೋಟಿವಳ [1][ಯಿ][1] ಗೆಯು ? ಪರದರ ಲೆ

1. ಇ (ಕ).

ಕ್ಕವನೆಂದೊಡುೞಿದ ಪರದರ
ಪವಣಂ ಮೇರೆಯುಮನಱಿವರಾರಾ ಪುರದೊಳ್ ॥ ೬೦ ॥

ಸಾರವಣೆ ಮಳಯಜಂ ಕ
ರ್ಪೂರರಜಂ ರಂಗವಲ್ಲಿ ಸಲೆಪೊಂದಳಿರ್ಗಳ್
ತೋರಣಮೆನೆ ಕರಮೆಸೆವುವು
ವಾರಾಂಗನೆಯರ ನಿವಾಸದೊಳಗುಂ ಪೊಱಗುಂ ॥ ೬೧ ॥

ಸುತ್ತುಂಗುರುಳಂತರದೊ
ತ್ತುತ್ತುಂ ದೆಸೆದೆಸೆಯೊಳಲೆವ ಕಣ್ಮಲರ್ಗಳಿನು
ನ್ಮತ್ತಗಜಗಮನೆಯರ್ ಬಂ
ದೊತ್ತಿಗೆ ನಿಲ್ವರ್ ಶಾಲದೊಂದಂಗಣದೊಳ್ ॥ ೬೨ ॥

ಸರಳಾಳಾಪಂಗಳಿಂ [1]ಜತ್ತಿ[1]ಸುವ ಬಗೆಗೆಲಲ್ಕೆಂದು ಕೂರ್ತಿಚ್ಚೆ ಬೆಚ್ಚಂ
ತಿರೆ ಮುಚ್ಚಂ ಮೆಚ್ಚಿದೊಂದದೊಳೆ ಸಲಿಪ ನಾನಾವಿನೋದಂಗಳಂ ಚಿ
ತ್ರರತಕ್ರೀಡಾವಿನೋದಂಗಳೊಳೆ ಮೆಱೆವ ಕೂಟಂಗಳಿಂ ಕೂಡಿ ಲಾವ
ಣ್ಯರಸಂ ತಳ್ಳಂಕುಗುಟ್ಟುತ್ತಿರೆ ಕರಮೆಸೆಗುಂ ವಾರನಾರೀಕದಂಬಂ ॥ ೬೩ ॥

ಮುಳಿಗೆಯು ಮಾಳಿಗೆಯು ಮನಂ
ಗೊಳಿಸುವ ನಾನಾಪ್ರಕಾರದಂಗಡಿಯುಂ ಬೆಡಂ
ಗೊಳಕೊಂಡ ಸೂಳೆಗೇರಿಯು
ವಿಳಾಸದಿಂದೆಂತು ನೋೞ್ಪಡಂ ರಮಣೀಯಂ ॥ ೬೪ ॥

ವರರತ್ನಕನಕಮಯು ವಿ
ಸ್ಫುರಿತಪ್ರೋತ್ತುಂಗತೋರಣಪ್ರಾಕಾರಂ
ನರನಾಥಭವನಮನುಪಮ
ಪುರಾಂಗನಾವದನತಿಳಕಮೆಂಬಂತಿರ್ಕ್ಕುಂ ॥ ೬೫ ॥

---

1 ಜೊತ್ತ (?)

ಸೊಗಯಿಪ ಭೋಗಾವತಿಗಂ
ಮಿಗಿಲಮರಾವತಿಗಮಿದುವೆ ಮೇಲೆನಿಸುವುದೀ
ಜಗದೊಳ್ ನಿರಂತರಂ ಭೋ
ಗಿಗಳಿಂದಂ ವಿಬುಧರಿಂದಮು[1]ಜ್ಜೇ[1]ನಿಪುರಂ ॥ ೧೬ ॥

ನಿರುಪಮಮುಮತರ್ಕ್ಯಮದ್ಭುತ
ಕರಮತಿಶಯಮೆಂದು ಮಾಣದೊಲ್ಲದೆ ಪೊಗೆನೆ (?)
ನರನಾವಂ ಬಣ್ಣಿಪನಾ
ಪುರಮಂ ಬಣ್ಣಿಸುವೊಡುರಗಪತಿಯುಂ ನೆಱೆಯಂ ॥ ೧೭ ॥

ಆದನಾಳ್ವನಧಿಕರಿಪುನೃಪ
ಮದವನ್ಮಾತಂಗಕುಂಭದಳಮಥನಂ ದು
ರ್ಮದವಿಜಯನಿಶಿತನಿಸ್ತ್ರಿಂ
ಶದಕ್ಷಗಜವೈರಿವಿಶ್ರುತಂ ವೃಷಭಾಂಕಂ (?) ॥ ೧೮ ॥

ಸದಮಳಚರಿತದಿನುದ್ಧಾ
ತದೋಷದಿಂದತ್ಯುದಾತ್ತನಿತ್ಯೋದಯಸಂ
ಪದದಿನೆಳೆಗಿರ್ವರೆನರೆಂ (?)
ಬುದನೆನಿಸಿ ನೆಗೞ್ತೆವೆತ್ತನಾ ಧರಣೀಶಂ ॥ ೧೯ ॥

ಸಕಳಾಳಾಪಂ ಕುವಳಯ
ವಿಕಸನಕರನಖಿಳಸತ್ವಸೌಮ್ಯಂ ಭಾಸ್ವ
ತ್ಪ್ರಕಟಯಶನಿಳಿಸಿದಂ ವಿಶ
ದಕಾಂತಿಯಿಂದಂ ಶಶಾಂಕನಂ ವೃಷಭಾಂಕಂ ॥ ೨೦ ॥

---

1. ಜೊ (?)

ಲಾಟ ಕಳಿಂಗ ವಂಗ ಕರಹಾಟ ತುರುಷ್ಕ ವರಾಳ ಚೋಳ ಕ
ರ್ನಾಟ ಸುರಾಷ್ಟ್ರ ವತ್ಸ ಭರು[1]ವತ್ಸ[1]ಸುಕೋಶಲಮಾದಿಯಾದ ದೇ
ಶಾಟವಿಕಾಧಿಪರ್ಮಲೆಯು ನಿಲ್ಲದೆ ಕಪ್ಪಮನಿತ್ತು ನಿರ್ಜಿತಾ
ಘಾಟಧರಿತ್ರಿಯೊಳ್ ನೆಲಸುವರ್ ವೃಷಭಾಂಕನಿದೇಂ ಪ್ರತಾಪಿಯೋ ‖ ೭೧ ‖

ಮುಳಿವ ಮುಳಿಪರ್ಕಳಕ್ಕೆಮು
ಬಲಿದ ಬಳಾನ್ವಿತ ಮಹೀಪರಕ್ಕೆಮು ಚಲಮಂ
ತೊಲಗಿಸಿ ವೃಷಭಾಂಕಂ ಕಾ
ಲೊಳಾಂತುದಂ ತಲೆಯೊಳಾಂತು ಬೆಸಕೆಯ್ಯದರಾರ್ ‖ ೭೨ ‖

ಪೆಸರಂ ಕೇಳ್ದಳ್ಕಿಬೆಳ್ಕತ್ತುದು ಪರಧರಣೀಮಂಡಲಂ ಗಂಡುಗೆಟ್ಟಾ
ಳ್ವಿಸನಂ ಪೂಣ್ದತ್ತು ಶೌರ್ಯೋನ್ನತಿಗಗಿದಸುಹೃನ್ಮಂಡಳಂ ಮೆಲ್ಪನಾವ
ರ್ಜಿಸಿದೊಂದಾಜ್ಞಾವಿಶೇಷಕ್ಕೆಳಸಿದುದು ಸುಹೃನ್ಮಂಡಳಂ ಸಂತಮಿಂತಾ
ದೆಸಕಂ ಕಯ್ಗಣ್ಮೆ ತದ್ಭೂಪತಿಗಖಿಳಧರಾಚಕ್ರಮಾಯ್ತೇಕಚಕ್ರಂ ‖ ೭೩ ‖

ಆ ವೃಷಭಾಂಕವಲ್ಲಭನ ವಲ್ಲಭೆ ಸಲ್ಲಲಿತಪ್ರವಾಳದಂ
ತಾವರಣಾನುರಂಜಿತೆ ಚಕೋರಚಳೇಕ್ಷಣರಾಮೆ ಪಂಕಜ
ಶ್ರೀವದನೋಪಶೋಭಿತೆ ಲತಾಲಲಿತಾಂಗವಿಲಾಸೆ ಲಕ್ಷ್ಮಣಾ
ದೇವಿ ಮನೋಜರಾಜವನದೇವಿಯೆನಿಪ್ಪಿನಮೊಪ್ಪಿ ತೋಱುವಳ್ ‖ ೭೪ ‖

ತನಿಗಂಪುಂ ಚಂಪಕಂ ವಿಸ್ಫುರಿತವದನಮುಂ ಪಂಕಜಂ ತುಂಗವೃತ್ತ
ಸ್ತನಮುಂ ಚಕ್ರಾಹ್ವಯುಗ್ಮಂ ತರಳನಯನಮುಂ ಪದ್ಮಪತ್ರಂ ಸಮುದ್ಯ
ತ್ತನುವಂ ಭಾಸ್ವಲ್ಲತಾವಲ್ಲರಿ ತದನುಗತಾಕಾರಮುಪ್ಪಂತಿರಾರಾ
ಧನೆಗೆಯ್ವಾ ಪೋಲ್ವೆಯುಂ ತಾಳ್ದಿದುವೆನಿಸಿದ ಸಂಪತ್ತಿಯುಂ ಕಾಂತೆ ಪೆತ್ತಳ್ ‖ ೭೫ ‖

---

1. ಕಚ್ಛ (?)

ವ॥ ಮತ್ತಮಾ ನರೇಂದ್ರನಪರಿಮಿತಪರಿಜನನುಮನುಪಮತುರಂಗಸಂಘಾತಸಮೇತನುಂ ಅಕ್ಷೂಣಲಕ್ಷಣೋಪೇತಭದ್ರಗಜರಾಜಿವಿರಾಜಿತನುಂ ಅನೂನಲಕ್ಷ್ಮೀವಿಲಾಸನುಂ ಅರಾತಿಮಂಡಲಪ್ರಾಂತಪ್ರಳಯಾನಳನುಮಚಿಂತ್ಯಸಾಹಸನುಮರ್ಥಿಸಂಘಾತಚಾತಕಪ್ರೀತಿಕರಣಾಗ್ರಿಮಬಳಾಹಕನುಮಸದೃಶವಿಶೇಷಭಾಸುರಜಿನೇಂದ್ರಶಾಸನೋದ್ಭಾಸಿಯುಮೆನಿಸಿ ಮಹಾಮುಕುಟಬದ್ಧಪದವಿಪ್ರತಿಬದ್ಧಸಕಲಸಾಮ್ರಾಜ್ಯವಿಭೂತಿಯನಳಂಕರಿಸಿ

ದ್ವಿಷದುರ್ವೀಪಾಲಸೈನ್ಯಾಂಬುಧಿವಿದಹನಕರೌರ್ವಾನಲೋಗ್ರಪ್ರತಾಪಂ
ಧಿಷಣಪ್ರಾರಬ್ಧಸಂಗೀತಕನನುಪಮಸಂಪ್ರಾಪ್ತಸಾಮ್ರಾಜ್ಯರಾಜ್ಯಾ
ಭಿಷವಂ ಸಂಸೇವಿರಾಜನ್ಯಕಮುಕುಟಮಣಿಪ್ರಜ್ವಲನ್ಮ್ಯೋಮಚಕ್ರಂ
ವೃಷಭಾಂಕಂ ಶಾಂತನುಜ್ಜೇಸಿಯೊಳರಸುಗೆಯ್ಯುತ್ತಿರ್ದನುತ್ಸಾಹದಿಂದಂ ॥ ೭೬ ॥

ವ॥ ಆ ವಿಶ್ವವಿಶ್ವಂಭರಾಧೀಶ್ವರಂಗೆ ಪರಮವಿಶ್ವಾಸಿ ಪ್ರಧಾನಶ್ರೇಷ್ಠಿಪದವಿಭೂತಿಯಂ ತಳೆದು

ಎರಡಿಭಮನೇಱಿ ಕಾರ್ತ
ಸ್ವರದೆರಡುಂ ಕೆಲದೊಳಿರೆ ನಿಷಾದಿಗಳೋರೊ
ರ್ವರ ರೂಪುಗಾಣದಿರ್ಪ
ರ್ಥರಾಸಿಗಧಿನಾಥನೆನಿಸಿ ದಿವ್ಯಾನ್ವಯದೊಳ್ ॥ ೭೭ ॥

ವ॥ ಮಹಾಪ್ರಸಿದ್ಧವೈಶ್ಯಾನ್ವಯೋದಾತ್ತನಪ್ಪಿಂದ್ರದತ್ತನೆಂಬ ಪ್ರಧಾನಶ್ರೇಷ್ಠಿಗಮಾತನ ಮನೋರಮೆ ಶೀಲವತಿಯೆನಿಸಿದ ಗುಣವತಿಗಂ

ವಿಗಳಿತಕಳಂಕ ಜಿನಪದ
ಯುಗಸರಸಿಜಮಧುಕರಂ ವಿನೇಯ ನಿಧಾನಂ
ಸುಗುಣಾಳಂಕೃತಗಾತ್ರಂ
ನೆಗಟ್ತೆವೆತ್ತಿರ್ದ ಸೂರದತ್ತಂ ಪುತ್ರಂ ॥ ೭೮ ॥

ವಿಬುಧಜನಾಧಾರಂ ವಂ
ದಿಬ್ಬಂದಕಲ್ಪದ್ರುಮಂ ಮಹೋದಾರಗುಣ
ಸ್ತಬಕನೆನಿಸಿರ್ದು ಧನದೊಳ್
ಕುಬೇರನೆನೆ ನೆಗಟ್ದನಾ ವಣಿಕ್ಕುಲತಿಲಕಂ ॥ ೭೯ ॥

ಪರಮದಯಾಮೂರ್ತಿ ಮನೋ
ಹರಮೂರ್ತಿ ಸುಧರ್ಮಮೂರ್ತಿಯೆಂದಿವು ತನ್ನೊಳ್
ನೆರೆದೇಕಮೂರ್ತಿಯಾದಂ
ತಿರೆಸೆದನಾ ಪುತ್ರಮೂರ್ತಿ ಧಾತ್ರೀತಳದೊಳ್ ॥ ೮೦ ॥

ಕ್ಷಯಮದಗುಣನಾಗಿಯುಮ
ಕ್ಷಯದಾನಾನೂನವಿಭವನಿಭ್ಯಾನ್ವಯನಾ
ಗಿಯುಮತ್ಯುದಾತ್ತವಂಶ
ಪ್ರಿಯನಂತಾ ಸೂರದತ್ತನಸದೃಶಚಿತ್ತಂ ॥ ೮೧ ॥

ಕ್ಷಿತಿತಳದಂತೆ ರಸಾಶ್ರಯ
ನತರ್ಕ್ಯಸುಕವೀಂದ್ರಬೃಂದದಂತೆ ವಿಶೇಷಾ
ನ್ವಿತನಂಬರದಂತೆ ಸದಾ
ವ್ರತನಂಬುಧಿಯಂತೆ ಪರಮಗಂಭೀರಗುಣಂ ॥ ೮೨ ॥

ವಿಧೃತಕಳಾಕಳಾಪನಿಧಿಯಾಗಿ ಶಶಾಂಕನವೊಲ್ ಕಳಂಕಮಿ
ಲ್ಲದೆ ಸತತಂ ಬುಧಾವಸಥನಾಗಿ ದಿನಾಧಿಪನಂತೆ ತೀವ್ರನ
ಲ್ಲದೆ ಬಹುರತ್ನರಾಶಿಪರಿಶೋಭಿತಸಂಪದನಾಗಿ ವಾರ್ಧಿಯಂ
ದದೆ ಕಲುಷಾಶಯಪ್ರಕೃತಿಯಲ್ಲದೆ ಸಂದನಿಳಾತಳಾಗ್ರದೊಳ್ ॥ ೮೩॥

ಎನಿತೊಳವು ಸಾರವಸ್ತುಗ
ಳೆನಿತೊಳವುನ್ಮದಗಜಂಗಳೆನಿತೊಳವು ತುರಂ

ಗನಿಕಾಯುಮೆಂದು ಪವಣಿಸು
ವನಾವನಾ ವೈಶ್ಯಕುಲನ ಧನಸಂಕುಲಮಂ ॥ ೮೪ ॥

ಅನಿವಿರಿದವಂತಿ ಮಾಳವ
ಮನಾಳ್ವ ವೃಷಭಾಂಕನೃಪನ ಬಾೞ್ಕೆಯ ಸಿರಿಯಾ
ತನ ದಿವಸದ ಭೋಗದನಿತಿ
ಲ್ಲೆನೆ ಪರದನ ಪಿರಿಯ ಸಿರಿಯುನಱಿಯೆಂ ಪೊಗೞಲ್ ॥ ೮೫ ॥

ವ॥ ಮತ್ತಮಾ ಪುರದೊಳ್ ತದೀಯ ಕುಳಶೀಳ ಲಕ್ಷ್ಮೀಸಮಾನಸಂಪನ್ನನಪ್ಪ ರಾಜಪ್ರಧಾನಶ್ರೇಷ್ಠಿ ಸುಭದ್ರಂಗಂ ಸರ್ವಯಶೆಗಂ ಪುಟ್ಟಿದ ಯಶೋಭದ್ರಕುಮಾರನಿಂ ನೇರ್ಗಿಱಿಯಳ್

ತನಗೆ ಕುಲಲಲನೆ ರೂಪವ
ತಿ ನೆಗೞ್ದಲಾವಣ್ಯವತಿ ವಿಲಾಸವತಿ ಯಶೋ
ವನಿತೆಗೆ ಸವತಿದಲೆಂಬುದ
ನೆನಿಸಿ ಯಶೋಭದ್ರೆ ಮನಮನುಱೆ ಸೆಱೆವಿಡಿದಳ್ ॥ ೮೬ ॥

ವಿನುತಕಪೋಳಂ ದರ್ಪಣ
ಮೆನೆ ಮೊಲೆಗಳ್ ಕನಕಕಳಶಮೆನೆ ಪೊಳೆವಲರ್ಗ
ಣ್ಣನುಪಮ ಚಮರಜಮೆನೆ ಮದ
ನನ ಮಂಗಳರಾಜ್ಯಲಕ್ಷ್ಮಿಯೆನೆ ಸೊಗಯಿಸುವಳ್ ॥ ೮೭ ॥

ಲಲಿತೆಯ ಮುಖೇಂದುಬಿಂಬದ
ಬೆಳಗಿನೊಳಿರದಗಿದು ಪೆಱತೆಗೆದು ತಮೋ
ಬಳಮಿರ್ದುದೆಂಬಿನಂ ಕ
ಣ್ಗೊಳಿಸುಗುಮಾಕೆಯ ವಿನೀಳಕಬರೀಭಾರಂ ॥ ೮೮ ॥

ಅಗಲದೆ ರೇಖಾತ್ರಯದಿಂ
ದಗಲದ ಪೊಗರ್ವಟ್ಟಬಂಧುರಚ್ಛವಿಯಿಂ ಕಂ

ಬುಗಳಂ ನಗುವಂತಿರೆ ಕಂ
ಬುಗಳಂ ಕರಮೆಸೆಗುಮಾ ವಣಿಕ್ಪತಿಸತಿಯಾ ‖ ೮೯ ‖

ಮೊಗಮುಂ ತಾವರೆಗೆತ್ತು ಕಣ್ಮಲರ್ಗಳಂ ನೀಲೋತ್ಪಲಂಗೆತ್ತು ಸೆ
ಳ್ಳುಗುರಂ ಕೇದಗೆಗೆತ್ತು ಹಸ್ತತಳಮುಂ ಸತ್ಪಲ್ಲವಂಗೆತ್ತು ತ
ನ್ಮೃಗಶಾಬಾಕ್ಷಿಯುನಿಂತು ಮನ್ಮಥವನಶ್ರೀಗೆತ್ತು ಭೃಂಗಂಗಳೋ
ಲಗಿಸುತ್ತಿರ್ದಪುವೆಂಬಿನಂ ಸೊಗಯಿಕುಂ ನೀಳಾಳಕಂ ಕಾಂತೆಯಾ ‖ ೯೦ ‖

ಶತಪತ್ರಬ್ರಾತದುರ್ಕೊಡೆದುದು ಜಯಮಾಯ್ತುಂಗಜನ್ಮಂಗೆ ನೇತ್ರಾ
ಸಿತನೀರೇಜಾತಮಾನಂದದೊಳಲರ್ದಪುವೀ ಬಾಳಿಕಾ ವಕ್ತ್ರ ಚಂದ್ರ
ದ್ಯುತಿಯಿಂದಂತಾಗಿ ಮತ್ತಂ ಪಗಲುಮೆಸೆವುದಿನ್ನೇವೆನೆಂದೆಂದು ಶೀತ
ದ್ಯುತಿ ನಿಚ್ಚಂ ಕಂದುತುಂ ಕುಂದುತುಮುದಯಿಪನೆಂಬುಕ್ತಿಗಾ ಕಾಂತೆ ಪೋಲ್ತಳ್‖೯೧

ಪ್ರಿಯೆಯ ಮುಖಚಂದ್ರಬಿಂಬಂ
ದಯಿತಾವಿಲೋಚನವಿನೀಳನೀರೇಜಮುನಲ
ರ್ಚಿಯುಮೇನೊ ತತ್ಪ್ರಿಯಾನನ
ಪಯೋಜಮಂ ಕುಟ್ಮಳೀಕೃತಂ ಮಾಡಿದುದೇ ‖ ೯೨ ‖

ಕಾಮಾಬ್ಧಿವೇಳೆ ಕಾಮಿನಿ
ಕಾಮಲತಾಲಲಿತಕುಸುಮಮಂಜರಿ ಪೆಱದೇಂ
ಕಾಮಗಜರಾಜಮದಲೇ
ಖಾಮಂಡಲಲಕ್ಷ್ಮಿಯೆನಿಸಿ ಕಾಮಿನಿ ನೆಗೞ್ದಳ್ ‖ ೯೩ ‖

ಅಳಕಾನೀಕಮನಿಂದ್ರನೀಳಮುಗುರಂ ವಜ್ರಂ ಲಸದ್ದಂತಮಂ
ವಿಲಸನ್ಮೌಕ್ತಿಕಮೋಷ್ಠಮಂ ಪವಳಮಂಗಚ್ಛಾಯೆಯಂ ಪಚ್ಚೆ ನಿ
ಶ್ಚಳಮಾರಾಧಿಸಿ ಪೋಲ್ತುವೆಂದಿರದೆ ಪೇೞ್ ನೀಳಾದಿ ಪಾಷಾಣ ಸಂ
ಕುಲದೊಳ್ ದುರ್ವಿದರಂತು ಪೋಲಿಸುವೆನೇ ರೂಪಂ ಯಶೋಭದ್ರೆಯಾ ‖ ೯೪ ‖

ಇದು ಪುರುಷರತ್ನಮನುಪಮ
ಮಿದು ವನಿತಾನೂತ್ನರತ್ನಮಿಂತೀ ಎರಡುಂ
ಸದೃಶಾರ್ಥಮಾದುವೆಂಬಿನ
ಮುದಿತೋದಿತಮಾದುದವರೊಳನುರಾಗಗುಣಂ ॥ ೯೫ ॥

ಜನಿತಾನುರಾಗ ನಾನಾ
ವಿನೋದಕೇಳೀವಿಲಾಸಲೀಲೋತ್ಸವದಿಂ
ಮನಸಿಜ ಸುಖಾಮೃತಾಸ್ವಾ
ದನದೊಳ್ ಮನವೊಸೆದು ಕೂಡಿ ತಣ್ಣನೆ ತಣಿದರ್ ॥ ೯೬ ॥

ವ॥ ಇಂತನ್ಯೋನ್ಯಪ್ರಣಯ ಸಂಜಾತಸಂಪತ್ಪರಂಪರಾ ಪರಿಗತವಾಗಿ ನಿಳಿಂಪದಂಪತಿಯನೆ ಪೋಲ್ವ ತದ್ದಂಪತಿಗಳ್ಗಪಾರಸಂಸಾರಸುಖಾನುಭವವಿಭವಂಗಳಿಂ ಕೆಲವುಕಾಲಂ ಸಲ್ವುದುಮೊಂದುದಿವಸಂ

ನೆಱೆಯೆ ಬಸಮುಱಿದು ಚಿಂತಿಸಿ
ಮಱುಗಿ ಯಶೋಭದ್ರೆ ಮಕ್ಕಳಿಲ್ಲದೆ ನೋವಿಂ
ಪಱಿದು ಬಿಸುಟ್ಟೆಳಲತೆವೋಲ್
ಕಱಂಗಿ ಕಡುಗಂದಿಕುಂದಿ [1]ತೆರಮುರದಿರ್ದಳ್[1] ॥ ೯೭ ॥

ಸಲೆ ವಂಧ್ಯಾಲಯದಂತಿರೆ
ಪಲಕಾಲಂ ಪುಷ್ಪವತಿಯೆನಾದಪೆನೆಂದುಂ
ಫಲವತಿಯಾದಪೆನಿಲ್ಲೆಂ
ದು ಲತಾಲಲಿತಾಂಗಿ ಬಾಡಿ ಪಾಡಱಿದೆಂಗುಂ ॥ ೯೮ ॥

ಕಿಱುನಗೆ ಲೋಳೆವಾಯ್ ತೊದಳದೊಂದಿದ ನಾಲಗೆ ಚಿನ್ನ ಪೂಗಳೊಳ್
ತುಱುಗಿದ ಚಿನ್ನ ಕೆಂಜೆಡೆ ತಳರ್ನಡೆ ಮುದ್ದುವೊಗಂ ಪೊರಳ್ವ ಮುಂ

1. ಕರಮುಱಿದಿರ್ದಳ್ (?)

ಜೆಱಗು ಕಿವುಟ್ಚಿಪೀರ್ವ ವೊಲೆ ದಟ್ಟಡಿಯೊಳ್ಪರಿದೋಡುವಂಗಣಂ
ನೆಱ[3] ತನಗೊಪ್ಪುವರ್ಭಕನನೊರ್ವನ ನಾಂ ಪಡೆವುದದಾವುದೋ ॥ ೯೯ ॥

ಆಡುವ ನಲಿದಾಡುವ ನಡೆ
ನೋಡುವ ಕೊರಲಪ್ಪಿಕೊಳ್ವ ಭಕ್ಷ್ಯಾದಿಗಳಂ
ಬೇಡುವ ಮಕ್ಕಳ ಬಾಳ
ಕ್ರೀಡೆಗಳಂ ನೋಡುತಿರ್ಪುದೊಂದಿರವಲ್ತೇ ॥ ೧೦೦ ॥

ಎನಿತೊಳವು ಬಾಲಕೇಳಿಗ
ಳನಿತಱೊಳಂ ಮುದ್ದುವಡೆದು ಮನೆಯಂಗಣದೊಳ್
ಮನಮೊಸೆದಾಡುವ ಮಕ್ಕಳ
ವಿನೋದಮಂ ಕಾಣ್ಬ ದಿವಸಮೆಂದಾದಪುದೋ ॥ ೧೦೧ ॥

ಶುಕಪಿಕಸಾರಿಕಾದಿ ವಿಹಗಂಗಳನಾಂ ಸೆಱ[3]ಗೆಯ್ದೆನೋ ಶಿಶು
ಪ್ರಕರಮನೇನಗಲ್ಚಿದೆನೊ ಧರ್ಮಮನೇಂ ಪೞಿಕೆಯ್ದೆನೋ ಗುಣಾ
ಧಿಕರನವಜ್ಞೆಗೆಯ್ದೆನೊ ಜಿನೇಶ್ವರಪೂಜೆಗೆ ವಿಘ್ನಮಾದೆನೋ
ಸುಕೃತಿಗೆ ನೋನೆನೋ ತನಯರಿಲ್ಲದದಾವುದೊ ಕರ್ಮಬಂಧನಂ ॥ ೧೦೨ ॥

ತನುಜಾತೋದಯಮಪ್ಪ ಪುಣ್ಯದಿನಮಂ ಮೆಯ್ವೆರ್ಚಿ ಕಾಣಲ್ಕೆ ನೋ
ನೆನೊ ಗೇಹಾಂಗಣದೊಳ್ ತಳರ್ನಡೆವುದಂ ಕಣ್ಣಾರ ನೋಡಲ್ಕೆ ನೋ
ನೆನೊ ಸಯ್ಪಿಂ ತೊದಳೊಳ್ಪುದಳ್ದ ನುಡಿಯಂ ಪಾರೈಸಿ ಕೇಳಲ್ಕೆ ನೋ
ನೆನೊ ವಂಧ್ಯಾಸತಿಯಾಗಿ[1][ಮಾಯ್ದೆ][1]ಪಿರಿದುಂ ದುಃಖಕ್ಕಿದೇಂ ನೋಂತೆನೋ ॥೧೦೩॥

ಸಮಸಂದ ತನ್ನ ಸಂತತಿ
ಗೆ ಮಕ್ಕಳುಳ್ಳವಳೆ ಬಲ್ದುಬಾಳ್ವಳ್ [2][ಕ್ಷಿ][2]ತಿಯೊಳ್
ಸಮಸಂದೆಸೆಗುಮೆ ಸಂತತಿ
ಗೆ ಮಕ್ಕಳಿಲ್ಲದಳ ಬದರ್ದೇಂ ಬಾೞಿದುದೇಂ ॥ ೧೦೪ ॥

---

1. ಮಯ್ದು (ಕ) 2. ಮ (ಕ)

ವ॥ ಎಂದು ಪಿರಿದುಮಾಕುಲವ್ಯಾಕುಲೆಯಾಗಿ ಚಿಂತಿಸುತ್ತಿರ್ಪುದುಮಾ ಪ್ರಸ್ತಾವದೊಳ್

ಆ ನಗರದೊಳೊರ್ಮೊದಲೊ
ಳನೂನಂ ಮಾಂಗಲ್ಯನಿನದಮೊಡನೆಸೆವಿನಮಾ
ಮಾನಿನಿಯ ಕಿವಿಗೆ ಪೀಡಿದು
ದಾನಂದಗಭೀರಭೂರಿಭೇರೀ ನಿನದಂ ॥ ೧೦೫

ವ॥ ಆಗಳದೇನೆಂದು ಬೆಸಗೊಳ್ವುದುಂ ಕೆಲದೊಳಿರ್ದ ಪರಿಚಾರಿಕೆ ಪೇಳ್ಗುಮಿಂದು ನಮ್ಮ ಪುರದ ಪೊಱವೊಱಲ ನಂದನವನದೊಳಭಿನಂದನಮುನೀಂದ್ರರೆಂಬ ದಿವ್ಯಜ್ಞಾನಿಗಳ್ ಬಂದಿರ್ದೊಡೆ ವೃಷಭಾಂಕನಾನಂದಭೇರಿಯಂ ಪೊಯ್ಸಿ ನಾನಾವಿಧಾರ್ಚನೆವೆರಸು

ಜನಪನುಮರಸಿಯರುಂ
ಪರಿಜನಮುಂ ಪುರಜನಮುಮಾ ಮುನೀಶ್ವರರಂ ಕಾ
ಣ್ಬ ನಿಮಿತ್ತದಿಂದೆ ಪೋದಪ
ರೆನೆ ಸಂತೊಸದಂತನೆಯ್ದಿ ರಾಗದಿನಾಗಳ್ ॥ ೧೦೬ ॥

ದಂದುಗಮನುೞಿದು ಪರಮಾ
ನಂದದಿನಭ್ಯರ್ಚನಾ ಪುರಸ್ಸರಮಂದೆಯ್
ತಂದಳ್ ಲತಾಂಗಿಯುಂದಭಿ
ನಂದನಮುನಿನಾಥನಿರ್ದ ನಂದನವನಮಂ ॥ ೧೦೭ ॥

ವ॥ ಆಗಳಾ ಸ್ಮರಶರಾಸನೋಪಮಾನವಿಭ್ರಮಭ್ರೂಲತಿಕೆ ಲಲಿತ ಪುನ್ನಾಗಲತಿಕೆಗಳುಮನಪೂರ್ವ ಮಲಯಜವಿಲಸಿತಲಲಾಟಪಟ್ಟೆ ಲಲಿತತಿಲಕಾನೋಕಹಕುಸುಮಂಗಳಂ ನಾಗಚಂಪಕಕುಟ್ಮಲಾನುಕಾರಿ ನಾಸಾಪುಟ ವಿಕಸಿತಮುಕುಲಶೋಭಿತಚಂಪಕಂಗಳಂ ಅಭಿನವ ಮನಸಹಕಾರಸ್ತಬಕನಿಬಿಡಪೀನಪೀವರಸ್ತನಯುಗಳವಿರಾಜಿತೆ

ಪಲ್ಲವಿತ ಕುಸುಮಿತ ಮುಕುಲಿತ ಫಲಿತ ಮಂಜರೀರಂಜಿತಚೂತಭೂಜಾತಂಗಳಂ ಸಮುಲ್ಲಸಿತವಲ್ಲರೀಶಾಖಾಸದೃಶಬಾಹುಲತಿಕೆ ಸಲ್ಲಲಿತಲತಾಭವನಂಗಳಂ ಅಭಿನೂತ ಕೇತಕೀಕಿಸಲಯಾಪಹಸಿತಕರತಲಪಲ್ಲವೆ ರಕ್ತಕಂಕೆಲ್ಲೀ ಮಹೀರುಹಂಗಳುಮಂ ಶಾತಕುಂಭರಂಭಾಸ್ತಂಭಭಾಸುರವಿಲಾಸವೃತ್ತೋರುವಿರಾಜಿತೆ ಕನಕಕದಲೀವನಂಗಳಂ ನವಮಾಲಿಕಾಕುಸುಮಸುಕುಮಾರಕೋಮಲೆ ವಿಚಿತ್ರನವಮಾಲಿಕಾಲತೆಗಳುಮ ನತಿರುಚಿರಮಲ್ಲಿಕಾಪ್ರಸವಸುರಭಿಪರಿಮಳಾಲಿಂಗಿತಸುಗಂಧಿ ಬಂಧುರೋತ್ಫುಲ್ಲಮಲ್ಲಿಕಾವಲ್ಲರಿಗಳುಮನಲ್ಲಲ್ಲಿಗೆ ನಿಂದು ಮೆಲ್ಲಮೆಲ್ಲನೆ ನೋಡುತ್ತಂ

ಯುವತೀರೂಪಮನಂಗಜಂಗಮಲತಾಶ್ರೀರೂಪಮೆಂಬಂತು ಕಂ
ತುವಿನೋದಾರ್ಥವಿಚಿತ್ರಚಿತ್ರಿತಪತಾಕಾಭಾಸಮೆಂಬಂತು ಸಂ
ದ ವಸಂತಾಗಮಲಕ್ಷ್ಮಿ ತಾನೆ ಪೆಱದೇನೆಂಬಂತು ಬಂದಳ್ ಮನೋ
ಭವಮತ್ತದ್ವಿರದಂ ವನಕ್ಕೆ ಪುಗುತರ್ಪಂತಾ ವನೋದ್ದೇಶದೊಳ್ ॥ ೧೮೮ ॥

ವ॥ ಅಂತು ಬಂದು ಪರಮತಪಸ್ತಪನೋದಯಾಚಳಾಯಮಾನರನುಭಯನಯಸಮಾನರಂ ವಿಜಿತಾಶೇಷಪರೀಷಹಾರಾತಿಬಳರಂ ವಿನಷ್ಟಾಷ್ಟಮಳರಂ ಉಪಗತಾನಂತಾರ್ಥವ್ಯಂಜನಪರ್ಯಾಯಕೋಪಯುಕ್ತಜೀವಾದಿಪದಾರ್ಥಸಾರ್ಥಸದ್ಭಾವರಂ ವಿಶುದ್ಧಸ್ವಭಾವರನಕೃತ್ರಿಮಾಶೇಷಜಿನಭವನಸ್ತವನನಿರತರಂ ಸರ್ವಸಂಗವಿರತರಂ ಪರಮಾವಧಿಬೋಧರಂ ಸರ್ವಸಂಗನಿರವಶೇಷನಿರಸ್ತಮಾನಮಳಮಾಯಾಕ್ರೋಧರಂ ತಾರಹಾರಶಂಖಶಶಾಂಕಶಾರದಾಭ್ರವಿಭ್ರಮಭ್ರಾಜಿತತ್ರಿಭುವನಾಂತರಾಳಪ್ರವರ್ತಿತ ಕೀರ್ತಿಗಳನುಪಶಮೈಕಮೂರ್ತಿಗಳನತಿವಿಶಾಲಶಾಲವೃಕ್ಷಮೂಲಸ್ಥಿತನಿಸರ್ಗನಿರ್ಜಂತುಕನಿರಾಕುಳಶಿಲಾತಳದೊಳಧ್ಯಾತ್ಮವಿದ್ಯಾಧ್ಯಯನಸಂವರ್ಧಿತಸನ್ಮತಿಗಳಾಗಿರ್ದಭಿನಂದನಮುನಿಪತಿಗಳಂ ಕಂಡು ಮಹೀತಳಾಲಿಂಗಿತಾಂಗಿಯಾಗಿ ಭಕ್ತಿಭರದಿನೆಱಗಿ ಪೊಡೆವಟ್ಟು ಧರ್ಮಶ್ರವಣಾನಂತರಂ ಸಮಸ್ತವಿನೇಯಜನಂಗಳೆಲ್ಲಂ ವಂದಿಸಿ ಪೋದಿಂಬೞಿಕ್ಕ ಸುಪ್ರಸ್ತಾವದೊಳ್ ವಿನಯವಿನಮಿತೋತ್ತಮಾಂಗೆಯಭಿಮುಖಿಯಾಗಿಯಭಿನಂದನಮುನಿಪತಿಯಭಿಮುಖದೊಳ್ ನಿಟಿಳತಟಘಟಿತಕರಪುಟೆಯಾಗಿ

ಎನಗೀಜನ್ಮಮಿದಿಂತೆ ಬಂಜೆತನದಿಂದಂ ಪೋಕುಮೋ ಪುತ್ರಸಂ
ಜನನಂ ಮೇಣ್ದೊರೆಕೊಳ್ಗುಮೋ ಮುನಿಪತೀ ಪುತ್ರಾಂತರಾಯಂ ಪುರಾ
ತನದುಷ್ಕರ್ಮವಿಪಾಕಮೋ ಬೆಸಸಿಮಾಗಳ್ಗೆಯ್ದ ದುಷ್ಪಾಪದು
ರ್ವಿನಿಮಾ ದುರ್ಧರದುಃಖಮೆನ್ನನಲೆವಂತುಂ ಮುನ್ನಮೇಗೆಯ್ದೆನೋ ॥ ೧೦೯ ॥

ವ॥ ಎಂಬುದುಮಾ ಮುನೀಶ್ವರಂ ನಿಜಾವಧಿಬೋಧಮಂ ಪ್ರಯೋಗಿಸಿ ನೋಡಿ ನಿಮಗೆ ವಂಧ್ಯಾಸಂಬಂಧಮಪ್ಪ ದಂದುಗವೊಂದುಮಿಲ್ಲ ನಿಮಗಿಂದಿಂಗಮ್ಬು ತಿಂಗಳಂದಿಗೆ ದಿವದಿನವತರಿಸಿ

ಅನತಿಶಯಗರ್ಭಸುಖಿ ಸುಜ
ನನಿಧಾನಂ ಬಾಳದಿನಕರಪ್ರತಿಮಾನಂ
ಜಿನಧರ್ಮನಿರತನೋರ್ವಂ
ತನೂಭವಂ ನಿನಗೆ ಪುಟ್ಟುಗುಂ ಪುಟ್ಟಲೊಡಂ ॥ ೧೧೦ ॥

ಪುತ್ರಮುಖಾಬ್ಜಾಲೋಕನ
ಮಾತ್ರದೊಳಂ ಪಿತೃ ತಪಕ್ಕೆ ಪೋಕುಂ ಚಿತ್ರಂ
ಪುತ್ರಂ ಮುಮುಕ್ಷುದರ್ಶನ
ಮಾತ್ರದೆ ಜಿನದೀಕ್ಷೆಯಂ ದಿಟಂ ಕೈಕೊಳ್ಗುಂ ॥ ೧೧೧ ॥

ವ॥ ಎಂದು ಬೆಸಸುವುದುಂ

ಯತಿಪತಿಮುಖಾರವಿಂದೋ
ದ್ಗತಖುತವಚನಂ ಸ್ವಕೀಯ ಹೃದ್ಗೋಚರಮಾ
ಗೆ ತನೂದರಿಗಾಬೇಗದೊ
ಳತಿಹರ್ಷವಿಷಾದಮಾದಮೇನೊದವಿದುವೋ ॥ ೧೧೨ ॥

ಇಂತಾ ಕಾಂತೆಯ ಮನದೊಳ್
ಸಂತಸಮುಂ ನೋವುಮೊಡಗೊಂಡಿರೆ ಕ

ರ್ಮಾಂತಕರಂ ಬೀಳ್ಕೊಂಡ
ಳ್ಳಿಂ ತಳರ್ದು ನಿಜಾಲಯಕ್ಕೆ ಬಂದತಿಮುದದಿಂ ॥ ೧೧೩ ॥

ವ॥ ನಾನಾವಿನೋದಂಗಳಿಂ ಕತಿಪಯದಿನಂಗಳ್ ಪೋಗೆ ಪಂಚಮಾಸಾವಸಾನದ ಪುಣ್ಯದಿನದೊಳ್ ಪುಣ್ಯವತಿ ವಸಂತಸಮಯದ ಸಹಕಾರಲತೆಯಂತೆ ಪುಷ್ಪವತಿಯಾಗಿ ತೀರ್ಥೋದಕಂಗಳಿಂ ಪವಿತ್ರೀಕೃತಗಾತ್ರೆಯಾಗಿ

ಮಿಸುಗುವ ತೋರಮಲ್ಲಿಗೆಯು ಜೋಲ್ತ ಬಜಿಲ್ಮುಡಿ ತೊಟ್ಟ ಮೌಕ್ತಿಕ
ಪ್ರಸರವಿಭೂಷಣಾಳಿ ಹರಿಚಂದನದಣ್ಪು ಪೊದಳ್ದ ಕಾಂತಿಯಂ
ಪಸರಿಸೆ ಮಿಂಚುವೆತ್ತ ಸುಲಿಪಲ್ಗಳವಟ್ಟದುಗೂಲವೊಪ್ಪೆ ಬೆ
ಳ್ವಸದನಮಂತದೇನೆಸೆದುದೋ ಪರಿಪೂರ್ಣ್ಣಸುಧಾಂಶುವಕ್ತ್ರೆಯಾ ॥ ೧೧೪ ॥

ವ॥ ಆತನ ಕೀರ್ತಿಲಕ್ಷ್ಮಿಯೆ ಮೂರ್ತಿಮತಿಯಾದಂತಾತ್ಮೀಯ ಪ್ರಾಣೇಶ್ವರನ ಮನಕ್ಕೆವರೆ ಸೂಳ್ಗೆವಂದು ಸುಪ್ತೆಯಾಗೆ ಯಾಮಿನೀವಿರಾಮಯಾಮದೊಳ್

ವ॥ ಉದಯಂಗೆಯ್ವರ್ಕನಂ ಪಜ್ಜಳಿಸಿ ಪೊಳೆವ ಶೀತಾಂಶುವಂ ಶುಭ್ರಶುಂಭ
ನ್ಮದವನ್ಮಾತಂಗಮಂ ಘೂರ್ಣ್ಣಿಸುವ ಜಲಧಿಯಂ ಸಾರಕಾಸಾರಮಂ ಭಾ
ಸದ ರತ್ನವ್ರಾತಮಂ ನಿರ್ಮಳಧವಳವೃಷಾಧೀಶನಂ ಸನ್ಮನೋರಾ ।
ಗದಿನತ್ಯಾಶ್ಚರ್ಯಶೌರ್ಯಾನ್ವಿತಮೃಗಪತಿಯಂ ಸ್ವಪ್ನದೊಳ್ಕಾಂತೆ ಕಂಡಳ್ ॥೧೧೫॥

ವ॥ ಆ ನಿಶಾವಸಾನಸಮಯದೊಳನೇಕ ವಿಧವಾದ್ಯಮಾನತೂರ್ಯಶಂಖಕಾಹಳಾಪ್ರಘೋಷದೊಳಂ ನಿತ್ಯನಿಯೋಗದಿಂ ಬಂದು ಪ್ರಬೋಧಿಸುವ ಮಾಗಧಜನಸಮುಚ್ಚರಿತಮಾಂಗಲ್ಯಗೀತಧ್ವನಿಗಳೊಳವೊಯ್ಯನೊಯ್ಯನೆ ಮನಮಂ ಪಳಂಚಲೆವ ಸೀಯನಪ್ಪ ಗೇಯ [ನಿ] ನಾದಾಕರ್ಣನದೊಳುದಯಗಿರಿಶಿಖರಿಶೇಖರನಾದ ತಿಗ್ಮರುಚಿಮರೀಚಿನಿಕುರುಂಬಚುಂಬಿತಾಂಭೋಜವನಲಕ್ಷ್ಮಿ[ಯೊ]ಡನೆ ಲಬ್ಧಪ್ರಬೋಧೆಯಾಗೆ ಜಿನಪೂಜಾಪ್ರಧಾನಪ್ರಭಾತಸಮಯನಿತ್ಯನಿಯಮಂಗಳಂ ನಿರ್ವರ್ತಿಸಿ ಪರಿ… ಮಂಗಳಪ್ರಸಾಧನಾಲಂಕೃತೆಯುಂ ಪರಿವಾರನಾರೀಜನಪರಿವೃತೆಯುಮಾಗಿ ನಿಜಮನೋವಲ್ಲಭ…………

ಮದನಮುದರದನಿಯಂತಿರೆ
ಮದಮಧುಕರಮಧುರಮಂಜುರಂಜಿತ ಗುಂಜ
ನ್ಮೃದು ......... ಯೆ ಬಂದುದು
ಮದನನ ತಿರುವಿಂ ಬರ್ದುಂಕಿದರಲಂಬಿನವೋಲ್ ॥ ॥ ೧೧೬ ॥

ವ॥ ಅಂತು ಬಂದು ನಿಜಜೀ [1][ವಿತೇಶನ][1] ರ್ಧಾಸನಮನಳಂಕರಿಸಿ ಕುಳ್ಳಿರ್ದು ತನ್ನ ಕಂಡ ಕನಸುಗಳನನುಕ್ರಮಂದಪ್ಪದೆ ಸೂಚಿಸುವುದುಂ

[ತಪಿ]ಯಿಂ ನಿರ್ಧೂತದೋಷಂ ವಿಶದಶಶಿಯಿನತ್ಯಂತಕಾಂತಂ ಸದಾನ
ದ್ವಿಪದಿಂ ಭದ್ರಾನ್ವ [ಯಂ] ವಾರ್ದಿಯಿನನುಪಮನಂಭೋಜಿನೀಷಂಡದಿಂದ
ಗ್ಲಪಿತಾತ್ಮಂ ರತ್ನದಿಂ ನಿರ್ಮಳಗುಣನಿಳಯಂ [ಶಕ್ವರಾ] ಧೀಶನಿಂ ಸೌ
ಖ್ಯಪದಂ ಪಂಚಾಸ್ಯನಿಂದಂ ಪರಮಜಿನಮತಾಂಭೋಜಿನೀರಾಜಹಂಸಂ ॥ ೧೧೭ ॥

ಇದು ಸಮಸ್ತ ವಿನೇಯಜನವಿನುತ ಶ್ರೀವರ್ಧಮಾನಮುನೀಂದ್ರವಂದ್ಯ
ಪರಮಜಿನೇಂದ್ರಶ್ರೀಪಾದಪದ್ಮವರಪ್ರಸಾದೋತ್ಪನ್ನ
ಸಹಜಕವಿ ಶ್ರೀಶಾಂತಿನಾಥಪ್ರಣೀತಮಪ್ಪ
ಸುಕುಮಾರಗರ್ಭಾವತರಣವರ್ಣನಂ
ನವಮಾಶ್ವಾಸಂ

---

1. ತ್ರುಟಿತ. (ಕ)

## ೧೦. ದಶಮಾಶ್ವಾಸಂ||

ಶ್ರೀಸಾರೀರಮಣಂ ವಾಕ್
ಶ್ರೀನಾರೀರಮಣನೂರ್ಜಿತೋಜ್ವಲಕೀರ್ತಿ
ಶ್ರೀನಾರೀರಮಣಂ ಭ
ವ್ಯಾನಂ [ದ ಕರಂ] ಸರಸ್ವತೀಮುಖಮುಕುರಂ || ೧ ||

ಅನವರತ ಪರಮಸುಖಸಾ
ಧನಚರಿತಂ ಜಿನಕುಮಾರಸದೃಶಂ [ಭವ್ಯಂ]
ನಿನಗೆ ಮಗಂ ಪುಟ್ಟುಗುಮೆನೆ
ತನೂದರೀವದನವನಜಮುಲರ್ದತ್ತಾಗಳ್ || ೨||

ಲಲಿತೆ ಪತಿ [ವಚನಮುಲಯಾ]
ನಿಳವಶದಿಂ ವಿಪುಳಪುಳಕಸಂಚಯದಿಂ ತೆಂ
ಬೆಲರಲೆಪದಿಂ ವಸಂತದೊ
[ಳಲರ್ದೊ] ಪ್ಪಿದದೊಂದಶೋಕಲತೆಗೆಣೆಯಾದಳ್ || ೩ ||

ವನಜದಳಾಯತಾಕ್ಷಿ ಮನದೊಳ್ [ಗುಡಿಗ] ಟ್ಟ ಪೊದಳ್ದ ಸಂತೊಸಂ
ತನಗೆ ವಿಲಾಸಮಂ ಪಡೆಯೆ ಮಂಡಳಮಂಡನನಪ್ಪ [1][ಪುಣ್ಯ][1] ಭಾ
ಜನನನಪೂರ್ವಮನ್ಮಥನ ನಿಭ್ಯಕುಲಾಂಬರತಿಗ್ಮರೋಚಿಯಂ
ತನಯುನನಂದೆ ಪೆತ್ತವೊಲದೇನನುರಾಗಮನಪ್ಪುಕೆಯ್ದುಳೊ || ೪ ||

ವ|| ಅನ್ನೆಗಮಿತ್ತಲಾ ಪೂರ್ವೋಕ್ತ ಪದ್ಮಗುಲ್ಮವಿಮಾನಾಧೀಶ್ವರನಪ್ಪ ಪದ್ಮಪ್ರಭಾಮರನಮರಲೋಕಸುಖಸುಧಾರಸಾನುಭವದಿಂ ತಣ್ಣನೆ ತಣಿದಾತ್ಮೀಯ ಪುಣ್ಯೋಪಾರ್ಜಿತ ದಿವ್ಯಭೋಗಮನಿಪ್ಪತ್ತೆರಡು ಸಾಗರೋಪಮಪ್ರಮಿತನಿಜಾಯುರವಸಾನಕಾಲಮಱುದಿಂಗಳುಂಟೆನೆ

1. ಪೂರ್ವ (ಕ).

ಮಿಸುಗುವ ಒಣ್ಣವಾಸಿಗದೆಸಱ್ ನಸುವಾಡೆ ವಿಭೂಷಣಾಂಶುಗಳ್
ಮಸುಳೆ ಪೊದಳ್ದ ದೇಹರುಚಿ ಕಂದಿ ಕಱಂಗೆ ಮನಕ್ಕೆ ವಿಸ್ಮಯಂ
ಪಸರಿಸೆ ಪೊಣ್ಮುವಾಗುಳಿಗಳಾಗಳುಮಾಗೆ ನಿತಾಂತಮಿಂತು ಸೂ
ಚಿಸಿದವಗುರ್ವು ಪೆರ್ವುವಿನಮಾ ದಿವಿಜಂಗೆ ವಿರಾಮಕಾಲಮಂ || ೫ ||

ಅಂತು ತಮಗೆ ತಾಮೆ ಪುಟ್ಟುವದ್ಭುತಸೂಚನೆಗಳಂ ಕಂಡಚ್ಯುತಂ ನಿಜಚ್ಯುತಿಯುನಱಿದು

ಅಂದಿಂಗಱುದಿಂಗಳ್ವರ
ಮೆಂದುಂ ಪೆಱಪೆಱವು ಚಿಂತೆಯೊಳ್ ತೊಡರದೆ ಚಿ
ಲ್ದೊಂದಿರೆ ಜಿನ ಪದಸೇವೆಯ
ದಂದುಗದೊಳ್ ತೊಡರ್ದನೇಂ ಮಹಾತ್ಮನೊ ದಿವಿಜಂ || ೬ ||

ಇಂತು ನಿರಂತರಂ ದಿವಿಜಲೋಕದ ಚೈತ್ಯಗೃಹಂಗಳೆಲ್ಲಮಂ
ಸಂತೊಸದಿಂದೆ ವಂದಿಸುತಮರ್ಚಿಸುತುಂ ತನಗೆಯ್ದೆವಂದ ಕಾ
ಲಾಂತದೊಳಾಗಳಚ್ಯುತಸುರಂ ಚ್ಯುತನಾದನದಂತೆ ಸರ್ವ ಕ
ರ್ಮಾಂತಕನಲ್ಲದಂತಕನನಾವನುಮೇಂ ಗೆಲಲೆಂತುಮಾರ್ಕುಮೇ || ೭ ||

ಅತಿಶಯತರ ದಿವ್ಯಸುಖಾ
ಮೃತದಿಂ ತಣಿದಚ್ಯುತಾಂಕನಿಂದಚ್ಯುತದೊಳ್
ಚ್ಯುತನಾದನೆಂದೊಡೀ ಸಂ
ಸೃತಿಯುನದೇನೆಂದು ನಚ್ಚುವರ್ ಜಡಮತಿಗಳ್ || ೮ ||

ವ|| ಅಂತು ನೋಡೆ ನೋಡೆ ಗಾಳಿತೀಡಿದ ದೀಪರೂಪದಂದದಿಂ ಶಾರದ ನೀರದಾಕಾರದಂದದಿಂದದೃಶ್ಯಾಕಾರನಾಗಿ

ಯುವತೀಗರ್ಭದೊಳಚ್ಯುತ
ದಿವಿಜಂ ದಿವದಿಂದೆ ಬಂದು ……………
………………………………
………………………………ಸಂಕ್ರಮಿಸುವ ವೋಲ್ ॥ ೯ ॥

ವ॥ ಇಂತಾ ಯಶೋಭದ್ರಾಂಬಿಕೆಯ ಗರ್ಭಸರೋರುಹಾಕರಾಚ್ಛಾಂಬುವಿನೊಳ್ ಸಂಪೂರ್ಣೇಂದುಬಿಂಬದಂತೆ ಸಂಕ್ರಮಿಸುವುದುಮಾ ಗರ್ಭಸ್ಥಿತಾರ್ಭಕನ ಮುಖಚಂದ್ರವಿನಿರ್ಗತಾಚ್ಛಚಂದ್ರಿಕಾಪ್ರಸರಮೆ ಪರ್ವಿ ಬಳೆದಂತಾ ಮಹಾನುಭಾವೆಯ ಗರ್ಭಮನುದಿನಪ್ರವರ್ಧಮಾನಮಾಗಿ ಬಳೆಯೆವಳೆಯೆ

ಉದರದೊಳಿರ್ದ ತನೂಜನ
ಪೊದಳ್ದ ಮಹಿಮಾವಿಲಾಸಮಂ ಸೂಚಿಸುವಂ
ದದಿನುಚಿತಕ್ರಮದಿನದೇಂ
ಪೊದಳ್ದು ತೋಱಿದುದೋ ಸೂಕ್ಷ್ಮಮಧ್ಯೆಯ ಮಧ್ಯಂ ॥ ೧೦ ॥

ಘನಕುಚಭಾರಾಲಸಗಾ
ಮಿನಿ ಗರ್ಭಂ ಬಳೆಯೆವಳೆಯೆ ನಸುಜೋಲ್ದು ಬಟ
ಲ್ದಿನಿಸಿನಿಸನಲಸಿದಂದದೆ
ಮನೋಜಗಜಗಮನೆ ಮೆಲ್ಲಮೆಲ್ಲನೆ ನಡೆಗುಂ ॥ ೧೧ ॥

ವಿಲಸನ್ಮೃದುಗತಿಯಿಂ ಪದ
ದಲಕ್ತಕಚ್ಛವಿ ಪೊದಳ್ದು ರಂಜಿಸುತಿರೆ ನಿ
ರ್ಮಳಮಣಿಕುಟ್ಟಿಮದೊಳ್ ಕೋ
ಮಳಾಂಗಿ ಕಳಹಂಸಲೀಲೆಯಿಂದಡಿಯಿಡುವಳ್ ॥ ೧೨ ॥

ತಿಂಗಳ ಬಳವಿಯಿನುಚ್ಚ ತ
ರಂಗಾಂಬುಧಿ ಬಳೆವ ತೆಱದಿನನುದಿನದಿಂದಂ
ತಿಂಗಳ ಬಳವಿಯಿನಂತಾ
ಶೃಂಗಾರಾಂಬುಧಿಗೆ ಗರ್ಭವೇಂ ಬಳೆದತ್ತೋ ॥ ೧೩ ॥

ಸುದತಿಯ ತೆಳ್ವಸಿಱ್ ನೆಱ್ ಪೊದಳ್ದುದು ವಕ್ತ್ರಸರೋರುಹಂ ಬೆಳ
ರ್ತುದು ಕುಚಚೂಚುಕಂ ಕಱಿಯೆ ಕರ್ಗಿದವೊಯ್ಯನೆ ಬಾಸೆ ದೇಸೆವೆ
ತ್ತುದು ವಳಿರೇಖೆಗಳ್ ಮಸುಳ್ದು ತೋಱಿದುವಾಕೆಯ ಗರ್ಭದರ್ಭಕಾ
ಭ್ಯುದಯಮಹಾವಿಲಾಸಮಹಿಮಾಸ್ಪದಮಂ ನೆಱೆ ತೋಱುವಂದದಿಂ ॥ ೧೪ ॥

ಯುವತಿಯ ಮುಖಾಬ್ಜಮಂ ಮುಸು
ಱುವ ಕುಂತಳಮಧುಕರಂಗಳಂ ಕರತಳ ಪ
ಲ್ಲವದಿಂದೋಸರಿಸುವ ಪು
ಣ್ಯವನಿತೆ ಸಹಕಾರಲತೆಯನೇಂ ಮಱಸಿದಳೋ ॥ ೧೫ ॥

ಸುದತಿಗೆ ಪೆಱತೊರ್ವಳ್ ಹೇ
ಮದಾಮ ಕಮನೀಯಚಂಚಲಚ್ಚಾಮರಮಂ
ಮುದದಿಂದಮಿಕ್ಕಿದಳ್ ಪೆರ್ಚಿ
ಸಿದೊಸಗೆಗವಯವದೆ ಮುಡಿಗೆಯಿಕ್ಕುವ ತೆಱದಿಂ ॥ ೧೬ ॥

ಸತತೋತ್ಸವದಿಂ ಜಂಗಮ
ಲತೆಯೆಂಬಿನವೊಡನೆ ಮೆಲ್ಲಮೆಲ್ಲನೆ ನಡೆದಾ
ಶತಪತ್ರನೇತ್ರೆಗೊರ್ವಳ್
ಲತಾಂಗಿ ತಳಮಾರೆ ನೀಡುಗುಂ ತಂಬುಲಮಂ ॥ ೧೭ ॥

ಬಹುವಿಧದಿಂದಂ ನಿಱೆವಿಡಿ
ದಹಿಕಂಬುಕಸದೃಶಮಂ ದುಕೂಲಮನೊರ್ವಳ್
ಮಹಿಳೆಗುಡಲೆಂದು ನೀಡುವ
ಸಹಚರಿ ವಸನಾಂಗಭೂರುಹಕ್ಕೆಣೆಯಾದಳ್ ॥ ೧೮ ॥

ಮಣಿಮಯವಿಚಿತ್ರ ಭೂಷಣ
ಗಣಂಗಳಂ ಬಗೆದ ಪೊಟ್ಟಿಱೊಳ್ ಕಾಂತೆಗೆ ತ

ತ್ಕ್ಷಣದಿಂ ನೀಡುವವಳ್ ಭೂ
ಷಣಾಂಗಕಲ್ಪಾವನೀಜಮಂ ಮುಸುಳಿಸಿದಳ್ ॥ ೧೯ ॥

ಅಕುಟಿಳಸರಸ್ವತೀಮುಖ
ಮುಕುರನನಾಲೋಕಿಪನ್ನೆಗಂ ನೀಂ ನೋಡೀ
ಮುಕುರಮನೆನುತುಂ ಮಣಿಮಯ
ಮುಕುರಮನೊರ್ವಳ್ ವಿಲಾಸದಿಂ ಪಿಡಿದಿರ್ದಳ್ ॥ ೨೦ ॥

ವನಿತೆಗೆ ವಶ್ಯಮಿದೆಂದಂ
ಜನಮಂ ಕಾಂಚನಶಲಾಕೆಯಿಂ ನೀಡಲದೇ
ನನುಕರಿಸಿರ್ದುದೊ ಮನ್ಮಥ
ನ ನನೆಯ ಮೊನೆಯಂಬಿದೆಂಬ ಮಾತಮರ್ವಿನೆಗಂ ॥ ೨೧ ॥

ಪೊಚ್ಚಪೊಸದೇಸೆ ಮಾರ್ಗದೊ
ಳಚ್ಚಿಱಿದಚ್ಚರಿಯನುಂಟುಮಾಳ್ಪಿನಮಾರುಂ
ಮೆಚ್ಚಿ ಪೊಗಳ್ವಿನೆಗಮೊರ್ವಳ್
ನಚ್ಚಣಿ ನರ್ತಿಸಿದಳಿಚ್ಚೆಯಱಿದಚ್ಚರೆವೋಲ್ ॥ ೨೨ ॥

ರಸದ ತೊಱೆ ಪರಿದುದನುರ್ದಿನ
ಪೊಸಸೋನೆಯೆ ಸುರಿದುದೆಂಬಿನಂ ಪೇೞೆರ್ವಳ್
ಮಿಸುಪೆಸೆಯೆ ಪಾಡಿದಳ್ ಪುದಿ।
ದ ಸೀಯನಪ್ಪೊಂದು ಗೇಯರಸಮೊಸರ್ವಿನೆಗಂ ॥ ೨೩ ॥

ಕಬರೀಭಾರಾಲಸೆ ತೊಳ
ಪ ಬೆಳಂತಿಗೆಯೆನಿಸಿದಚ್ಚವೆಳ್ದಿಂಗಳೊಳಿ
ರ್ದಬಲೆಯ ಸನ್ನಿಧಿಯೊಳ್ಕೊರ
ಲ ಬೆರಲ ರಸಮೆಸೆಯೆ ಬೀಣೆಯಂ ಬಾಜಿಸಿದಳ್ ॥ ೨೪ ॥

ಮುಕುರಮನೞ್ತಿಯಿಂ ಪಿಡಿವ ಚಾಮರಮಿಕ್ಕುವ ವಸ್ತ್ರಭೂಷಣ
ಪ್ರಕರಮನೀವಳಂಕರಿಸುವಾಡುವ ಪಾಡುವ ಕಾಂತೆಯರ್ ಜಿನಾಂ
ಬಿಕೆಗೆ ಸಪರ್ಯೆಗೆಯ್ವ ಸುರಕಾಂತೆಯರೊಂದು ವಿಲಾಸದೇೞ್ಗೆಯಿಂ
ಪ್ರಕಟಿಸೆ ತದ್ಗುಣಾಂಬಿಕೆ ಜಿನಾಂಬಿಕೆಯೆಂಬಿನಮೊಪ್ಪಿ ತೋಱಿದಳ್ ॥ ೨೫ ॥

ವ॥ ಇಂತು ನಾನಾವಿಧವಿನೋದಂಗಳಿನಂತರ್ವರ್ತ್ತಿಗೆ ನವಮಾಸಂಗಳಂತರ್ಮುಹೂರ್ತಂಗಳಾಗಿ ಪೋಗೆ ಪರಿಪೂರ್ಣಪ್ರಸವಸಮಯದೊಳ್

ದಿನನಾಥಂ ಮೇಷದೊಳ್ ಶೀತರುಚಿ ವೃಷಭದೊಳ್ ಭಾರ್ಗವಂ ಮೀನದೊಳ್ಭಾ
ಮನುದಗ್ರಗ್ರಾಹದೊಳ್ಸಾರಸಸಖತನಯಂ ದಂಡದೊಳ್ ರೋಹಿಣೀನಂ
ದನನಂತಾ ದ್ವಂದ್ವದೊಳ್ವಿಶ್ರುತಮೆನೆ ಧಿಷಣಂ ಕರ್ಕಿಯೊಳ್ಸಂತಮಿಂತಿ
ರ್ಪಿನಮತ್ಯುತ್ಸಾಹದಿಂದಂ ಗುರುವಿನುದಯದೊಳ್ಪುತ್ರನಂ ಪೆತ್ತಳಾಗಳ್ ॥ ೨೬ ॥

ವ॥ ಆ ಪ್ರಸ್ತಾವದೊಳ್

ಪಸರಿಸೆ ಸುತ್ತಲುಂ ಗುಡಿಯ ದಾಂಗುಡಿ ಮುತ್ತಿನರಂಗವಲ್ಲಿ ನಾ
ಲ್ದೆಸೆಯೊಳಮುರ್ಕ್ಕಿವೆತ್ತ ಪಟಹಧ್ವನಿ ಪೊಣ್ಮುವ ಶಂಖಸಿಸ್ವನಂ
ಮಿಸುಗುವ ರತ್ನಮಾಲೆಗಳ ವಂದನಮಾಲೆ ಮನಕ್ಕೆವಂದದೇ
ನೆಸೆದುದೊ ಬೀದಿವೀದಿಗಳೊಳರ್ಭಕಸಂಜನಿತೋತ್ಸವಾನಕಂ ॥ ೨೭ ॥

ವ॥ ಅನ್ನೆಗಂ ಸೂರದತ್ತನಾತ್ಮೀಯಾತ್ಮಜನ ಜನ್ಮೋತ್ಸವಾಕರ್ಣನದೊಳತ್ಯಂತಹರ್ಷೋತ್ಕರ್ಷಾಂತರಂಗನಾಗಿ ರಾಗಿಸಿ

ಆ ಸ್ಮರರೂಪಾರ್ಭಕನ ನು
ತಸ್ಮೇರಾನನಮನೞ್ತಿಯಿಂ ನೋಡಲೊಡಂ
ವಿಸ್ಮಯಮೊದವುವಿನಂ ಜಾ
ತಿಸ್ಮರನಾದಂ ಕ್ಷಯೋಪಶಮವಶದಿಂದಂ ॥ ೨೮ ॥

ವ॥ ಆ ಪ್ರಸ್ತಾವದೊಳ್

ಪುತ್ರಂಬಡೆದೆನೆ ಪರಮ ಪ
ವಿತ್ರೀಕೃತ ಭವಸುಖಾಮೃತಕ್ಕಾನೀಗಳ್
ಪಾತ್ರಂಬಡೆದೆಂ ನಿಖಿಲ ಧ
ರಿತ್ರಿಯೊಳೆರಡುಂ ಭವಕ್ಕಮೊಳ್ಪಂಪಡೆದೆಂ ॥ ೨೯ ॥

ಪರಮಜಿನೇಂದ್ರಧರ್ಮಪರಿಪಾಲನಶೀಲಸಮರ್ಥನನ್ವಯೋ
ದ್ಧರಣಸಮರ್ಥನಪ್ಪ ಮಗನಂ ಪಡೆವನ್ನೆಗಮಿನ್ನೆಗಂ ಗುಣೋ
ತ್ಕರನೆನಿಸಿರ್ದನೆನ್ನ ಬಗೆಕೂಡಿದುದಿನ್ನಿರೆನೆಂದು ಘೋರ ಸಂ
ಸರಣಪಯೋಧಿಯಂ ಪೊಱಮಡಲ್ಬಗೆದಂ ವಣಿಗನ್ವಯೋತ್ತಮಂ ॥ ೩೦ ॥

ಪೃಥ್ವಿ॥ ದುರಿಂದ್ರಿಯಸುಖಕ್ಕೆ ಕೊಕ್ಕರಿಕೆ ಪುಟ್ಟೆ ನಿರ್ವೇಗದಿಂ
ನಿರಿಂದ್ರಿಯಸುಖಕ್ಕೆ ನಾಡೆ ಮನಮಿಟ್ಟು ಸರ್ವಸ್ವಮಂ
ಜರತ್ತೃಣಸಮಾನಮಾಗೆ ಬಗೆದಾ ಮಹಾತ್ಮಂ ಸುಷೇ
ಣರೆಂಬ ಮುನಿಮುಖ್ಯರಲ್ಲಿ ಜಿನದೀಕ್ಷೆಯಂ ತಾಳ್ದಿದಂ ॥ ೩೧ ॥

ವ। ಆಗಳಾ ಸುಭದ್ರೆ ವಿಸ್ಮಯಾಕುಲಿತಮಾನಸೆಯಾಗಿ

ಇನಿಯನಗಲ್ದು ಪೋದ ಪೆಱಗಿರ್ಪುದು ಸೂೞ್ನಗಲ್ತು ಪೋಪೊಡಂ
ತನಯವಿಮೋಹಮೆಂಬ ನಿಗಳಂ ತೊಡರ್ದಿರ್ದಪುದೇವೆನೆಂದು ಕಾ
ಮಿನಿ ನಿಜಜೀವಿತೇಶ್ವರನಗಲ್ಕೆಯೊಳಂ ತನುಜನ್ಮಮೋಹ ಬಂ
ಧನದೊಳೆ ಸಿಲ್ಕಿ ನಿಂದಳೆನೆ ಪುತ್ರವಿಮೋಹಮನಾರೊ ಮಾಱುವರ್ ॥ ೩೨ ॥

ವ॥ ತದನಂತರ ಸಮಯದೊಳ್

ಅಮೃತಾಂಭೋನಿಧಿ ಮೇರೆದಪ್ಪಿದುದೋ ಮೇಣಾಕಾಶಗಂಗಾ ಪ್ರವಾ
ಹಮೆ ಬೆಳ್ಳಂಗೆಡೆದತ್ತೊ ಮೇಣೆನಿಸಿ ದುಗ್ಧಸ್ನಿಗ್ಧಧಾರಾ ಪ್ರವಾ
ಹಮಗುರ್ವಾಗಿರೆ ಸುತ್ತಲುಂ ಪರಿವಿನಂ ಚೆಲ್ವಾಗೆ ಜೈನಾಭಿಷೇ
ಕಮನಾನಂದದೆ ಮಾಡಿದೊಂದಳವನಾನೇವೇೞ್ವೆನಾ ಕಾಂತೆಯಾ ॥ ೩೩ ॥

ಜಿನಗಂಧೋದಕದಿಂ ಬಾ
ಳನನಾಗಳ್ಮಿಸಿಸಿ ಬಾಳವಂದಂಗಳನೊ
ಯ್ಯನೆ ತುಡಿಸಿದಾಗಳಾ ಶಿಶು
ಜಿನಶಿಶುವೆಂಬಿನೆಗಮೇಂ ಮನಂಗೊಳಿಸಿದನೋ || ೩೪ ||

ಅಂಗಂಗಳೊಳಗಣೇಟಿನೆ
ಯಂಗದೊಳುದಯಿಸಿದುಪಾಸಕಕ್ರಿಯೆಯಿಂದು
ತ್ತುಂಗಕುಚಯುಗ್ಮೆ ನಿಜತನು
ಜಂಗಾಗಳ್ ಜಾತಕರ್ಮಮಂ ನಿರ್ಮಿಸಿದಳ್ || ೩೫ ||

ಪ್ರಕಟೀಕೃತ ನಿರ್ಮಲ ವಿನು
ತ ಕೀರ್ತಿಯಂ ಪುಣ್ಯಮೂರ್ತಿಯಂ ಬಾಲಕನಂ
ಸುಕುಮಾರನೆಂದು ಪೆಸರಿ
ಟ್ಟು ಕಾಂತೆ ತನಯಂಗೆ ನಾಮಕರಣಂಗೆಯ್ದಳ್ || ೩೬ ||

ವ|| ಅಂತು ಜಾತಕರ್ಮ ನಾಮಕರಣಂಗಳಂ ಮಾಡಿ ಕೊಂಡಾಡಿ ನಡಪುತ್ತಿರೆ

ದರಹಸಿತ ಮುಖಾಬ್ಜದೊಳ್
ಪರಕಲಿಸಿರ್ದಂಜನಂ ಮನೋರಂಜನಮಾ
ಗಿರೆ ಮುದ್ದುಭಾವದಿಂದೇಂ
ಕರಮೆಸೆದನೊ ಬಾಲಭಾವದೊಳ್ ಸುಕುಮಾರಂ || ೩೭ ||

ಕಂಜದಳೋಪಶೋಭಿತ ವಿಲೋಚನದೊಳ್ ನಿಟಲಾಗ್ರದೊಳ್ ಪೊದ
ಳ್ದಂಜನರೇಖೆ ಕಣ್ಗೆಸೆಯೆ ಕಂಕಣಮೊಪ್ಪಮನೀಯೆ ಕೈಗಳೊಳ್
ಕ್ಕೆಂಜೆಡೆಯೊಳ್ತಗುಳ್ದ ಪಲವಂದದ ಚಂದದ ಚಿನ್ನಪೂಗಳಿ
ತ್ತಂ ಜಗತೀತಲೈಕತಿಲಕಂಗೆಸೆದಿರ್ದುವು ಬಾಲಕಾಲದೊಳ್ || ೩೮ ||

ತೊಳಪ ಹರಿನ್ಮಣಿಕುಟ್ಟಿಮ
ತಳದೊಳ್ ತಳಮಾರೆ ತಳಮನೂಱಿ ಬೆಡಂಗಂ

ತಳೆದು ತಳರ್ನಡೆನಡೆವೆಡೆ
ಯೊಳದೇಂ ಜನನಿಗೆ ವಿನೋದಮಂ ಮಾಡಿದನೋ || ೩೯ ||

ದರಹಾಸಾಮೃತಮುಣ್ಮೆ ಪೊಣ್ಮೆ ಬಹುಮುಗ್ಧಾಳಾಪ ವಾಕ್ಯಂಗಳಾ
ವರಿಸುತ್ತುಂ ಪೊಸದೇಸೆವೆತ್ತಸೆಯೆ ಬಾಲಕ್ರೀಡೆ ನೋಡಲ್ಕನೋ
ಹರಮಾಗುತ್ತಿರೆ ವೈಶ್ಯವಂಶತಿಲಕಂ ನಿತ್ಯೋತ್ಸವಾನಂದದಿಂ
ಕರಮೊಪ್ಪಿರ್ದನನೂನಪಿಂಗಲಜಟಾಲಂಬಾಲಕಂ ಬಾಲಕಂ || ೪೦ ||

ರುಚಿರವಚೋಮೃತದಿಂ ವಿಶ
ದ ಚಾರು ಸಿತ ಕೀರ್ತಿಮೂರ್ತಿಯಿಂ ಸಹಜ ಕಲಾ
ಪ್ರಚುರತೆಯಿನೇೞ್ಗೆ ವಾಡಿವ
ದ ಚಂದ್ರನಂತುತ್ತರೋತ್ತರಂ ಶಿಶು ಬಳೆದಂ || ೪೧ ||

ವ|| ಅಂತಾ ಬಾಲಕಂ ಪ್ರತಿದಿನ ಪ್ರವರ್ಧಮಾನಮುತ್ತರೋತ್ತರ ಪ್ರವೃದ್ಧಿಯಿಂ ಬಳೆವುದುಂ ಯಶೋಭದ್ರಾಂಬಿಕೆ

ನೆಱೆ ಮುನ್ನಂ ಸಮಣೋ ಅಮೋಘವಯಣೋ ಯೆಂಬುಕ್ತಿಯಿಂ ವ್ಯಕ್ತಮಾ
ಗಱಿದಿರ್ದೆಂ ಮಱೆದಿರ್ದೆನಿಲ್ಲೆನನಿತಂ ಕಂಡಿರ್ದುಮುಂಡಿರ್ದುಮ
ಳ್ಕುಱದಾಂ ಮೆಯ್ಮಱೆದಿರ್ದೆನಪ್ಪೊಡಿವನುಂ ತಮ್ಮಯ್ಯನಂ ಪೋಲ್ತು ಬ
ಲ್ಸೆಱೆಯಿಂ ಪಿಂಗಿದುದೊಂದು ಗಂಧಗಜದಂತಾದಾಗಳೇಗೆಯ್ವೆನೋ || ೪೨ ||

ಅದಱಿಂದೀತನನಾವುಪಾಯದೊಳಮಾರುಂ ಕಾಣದಂತಾಗಿ ಯ
ತ್ನದಿನಿರ್ಪಂತಿರೆ ಮಾೞ್ಪೆನೆಂದು ಪಿರಿದೊಂದೌತ್ಸುಕ್ಯದಿಂದಾಗಳಾ
ವಿದಲತ್ಪಂಕಜನೇತ್ರೆ ಮಾಡಿಸಿದಳುದ್ಯತ್ಕೇತನಾನೀಕ ಭಾ
ಸ್ವದ ರತ್ನೋಜ್ವಲ ಚಿತ್ರಭಿತ್ತಿಪರಿಶೋಭಾನೀಡಮಂ ಮಾಡಮಂ || ೪೩ ||

ಅದಱೊಂದೊಂದೆಡೆ ಚಂದ್ರಕಾಂತ ಮಣಿಭಿತ್ತಿಭ್ರಾಜಿತಾಶಾವಿಭಾ
ಗದಿನೊಂದೊಂದೆಡೆ ಸೂರ್ಯಕಾಂತ ಬಹುಕೂಟಾಟೋಪಶೋಭಾಭಿರಾ

ಮದಿನೊಂದೊಂದೆಡೆ ಪದ್ಮರಾಗವಿಲಸತ್ಪ್ರಾಸಾದ ಮಾಲಾಂಶು ಜಾ
ಳದಿನೊಂದೊಂದೆಡೆಯಲ್ಲದೆಲ್ಲೆಡೆಯೊಳಂ ಕಣ್ಗೊಪ್ಪುಗುಂ ಮಂಡಪಂ ॥ ೪೪ ॥

ಪವಳದ ಕಂಬಂ ಪಳಿಕಿನೆ
ಸೆವ ತೊಲೆ ವಜ್ರದ ಮತ್ತವಾರಣಂ ಮುತ್ತಿನ ಮಂ
ಡವಿಗೆ ಕಿಸುಗಲ್ಲ ಬೋದಿಗೆ
ನವಮರಕತ ರತ್ನ ತೋರಣಂ ಪ್ರಾಕಾರಂ ॥ ೪೫ ॥

ಅನುಪಮಮಣಿಕನಕಮಯಂ
ವಿನಿಹಿತಸೌಮನಸಭದ್ರಶಾಲಜ್ಯೋತಿ
ರ್ವಿನುತಂ ಕರುಮಾಡಂ ಮೇ
ರುನಗಮಿದೊಂದೆಂಬ ಪೋಲ್ವೆಯಂ ಪುಟ್ಟಿಸುಗುಂ ॥ ೪೬ ॥

ವಿಲಸದ್ರತ್ನವಿಚಿತ್ರ ಭಿತ್ತಿಗಳಿನೆತ್ತಂ ಭಿತ್ತಿವೆತ್ತೂರ್ಜಿತೋ
ಜ್ವಲಶೋಭಾತಿಶಯಾದ್ಯಮನ್ವಿತಗವಾಕ್ಷೋದಗ್ರಭಾಗಂಗಳಿಂ
ನೆಲೆಯಿಂದಂ ನೆಲೆಗಳ್ ವಿರಾಜಿಸೆ ನವಗ್ರೈವೇಯಕಂಗಳ್ ಮಹೀ
ತಳದೊಳ್ ಸಂಧಿಸಿ ಬಂದು ನಿಂದ ತೆಱದಿಂದಂ ಕಣ್ಗೆವಂದೊಪ್ಪುಗುಂ ॥ ೪೭ ॥

ರಜತಮಣಿ ಕನಕನೀಳಾಂ
ಶುಜಾಳ ವಿಲುಳಿತ ವಿರಾಜಿತ ಪ್ರೋತ್ತುಂಗ
ಧ್ವಜಮಾಳಾ ಪರಿವೃತದಿಂ
ವಿಜಿತಾಮರನೀಡಮೆನಿಸುಗುಂ ಕರುಮಾಡಂ ॥ ೪೮ ॥

ದಿವಿಜೇಂದ್ರಭವನಮೆಂಬೀ
ನಿವಾಸದಿಂದತ್ತ ಮತ್ತೆ ಮೇಲಿರ್ದಪುದೆಂ
ದವಗಯಿಪವೊಲಲ್ಲಿಯ ವಾ
ತ ವಿಧೂತ ವಿನೂತ ಕೇತುಗಳ್ ದಳ್ಳಿಸುಗುಂ ॥ ೪೯ ॥

ಉದಯಗಿರಿ ಶಿಖರಧೃತ ಬಾ
ಳ ದಿವಾಕರಬಿಂಬದೊಳ್ಪಳಂಚಲೆವವೊಲ
ಭ್ಯುದಯಕರವೆನಿಸಿ ಕರುಮಾ
ಡದ ಶಿಖರದೊಳೊಪ್ಪಿ ತೋಱುಗುಂ ಪೊಂಗಳಸಂ ॥ ೫೦ ॥

ವ॥ ಮತ್ತಮತಿ ಲಲಿತಮತಿ ವಳಭಿಚ್ಛಂದಂಗಳಿಂ ಛಂದೋವಿದ್ಯೆಯುಮಂ ಸರ್ವತೋ ಭದ್ರಾಹ್ವಯವಿಶೇಷದಿಂ ನೋಂಪಿಯ ವಿಶೇಷಮಂ ನಂದ್ಯಾವರ್ತ ರಮಣೀಯತೆಯಿಂ ನಂದನವನಾಂತರಾಳಮಂ ಸ್ವಸ್ತಿಕ ವಿಸ್ತಾರದಿಂ ವಿವಾಹಮುಮನನುಕರಿಸಿ ಶೋಭಿ ಸುವುದಂತುಮಲ್ಲದೆಯುಂ

ಗಣಿದದೊಳೇಂ ಕರುಮಾಡಂ
ಪೊಣರ್ಚುವೊಡೆ ನೆಗಟ್ದ ದಿವಿಜರಾಜವಿಮಾನ
ಕ್ಕೆಣೆ ಪೋಲ್ವೆ ಸಮಂ ಸದೃಶಂ
ತೊಣೆ ತೋಡನುಸಾರಿ ಸಾಟಿ ಪಾಸಟಿಯೆನಿಕುಂ ॥ ೫೧ ॥

ಒಗೆದಭ್ರಾಟ್ಟಾಲಕಾಲಂಕರಣ ರಚನೆಯಿಂ ಸುತ್ತಲುಂ ಸುತ್ತುಗೊಂಡುಂ
ಬಗೆಗೊಂಡುಂ ದೇಸೆವೆತ್ತಾಳ್ವೆರಿಯ ತುಱುಗಲಿಂ ಚೆಲ್ವುವೆತ್ತಿರ್ದ ನಾಲ್ಕುಂ
ಮಿಗಿಲಾಗುತ್ತಿರ್ದ ಗೋಪುಮುಖವಿಲಸನದಿಂ ತಾನೆ ಮೇಲಾದ ಪೆಂಪಿಂ
ಮುಗಿಲಂ ಮುಟ್ಟಿರ್ದುದೆಂಬಂತಿರೆ ಕರಮೆಸೆಗುಂ ವಿಶ್ರುತೋತ್ತುಂಗ ವಪ್ರಂ ॥ ೫೨ ॥

ಶುಕ ಕಾರಂಡ ಚಕೋರ ಸಾರಸ ಮಯೂರಾಕಾರದಿಂ ವ್ಯಾಘ್ರ ಸಿಂ
ಹ ಕುರಂಗಾಂಬುಜ ಚಕ್ರ ಮತ್ಸ್ಯ ಮಕರೇಭಾಕಾರದಿಂ ಚೆಲ್ವುವೆ
ತ್ತು ಕರಂ ಶೋಭೆಯನಾಂತು ಮೇಘಪಥದೊಳ್ ತಳ್ತಿರ್ಕುಮುದ್ಯದ್ಧ್ವಜ
ಪ್ರಕರಂ ಸ್ಥೂಲ ವಿಶಾಲ ಸಾಲರಚಿತೋಗ್ರಾಟ್ಟಾಲಕಾನೀಕದೊಳ್ ॥ ೫೩ ॥

ಅಂಗಜ ಚಕ್ರವರ್ತಿಯ ಗೃಹಾಂಗಣದಂತೆ ಮನೋಜರಾಜಗೇ
ಹಾಂಗಣದಂತೆ ಪೆಂಪಿನ ನೆಗಟ್ತೆಯ ಮನ್ಮಥನಾಥವಾಸಗೇ

ಹಾಂಗಣದಂತೆ ರೂಪಿನ ವಿಲಾಸದ ಚೆಲ್ವಿನ ವೈಶ್ಯರಾಜಗೇ
ಹಾಂಗಣಮೊಪ್ಪುಗುಂ ಕರಿಮದೋತ್ಕಟ ಕರ್ದಮ ದುರ್ದಿನಾಂಗಣಂ ‖ ೫೪ ‖

ವ॥ ಮತ್ತಮಾ ಮಾಡದ ಬಳಸಿಯುಂ ಮೂವತ್ತೆರಡು ಬಳ್ಳಿಮಾಡಂಗಳಂ ಮಣಿಮಯ ವಿತಾನಂಗಳಂ ಮಾಡಿಸಿ ಬೞಿಕೆ

ಎಸೆವ ನಿಜಾಲಯಾಪರ ವಿಭಾಗದೊಳುನ್ನತ ಭೂವಿಭಾಗದೊಳ್
ವಸುಧೆಗೆ ನಿತ್ಯಮಂಡಿತ ಜಿನಾಲಯಮಂ ಪಡಿಚಂದಮಾಗೆ ಕ
ಣ್ಗೆಸೆದಿರೆ ನೂತ್ನರತ್ನಮಯಮಾಗಿರೆ ಮಾಡಿಸಿ ನಂದನಂಗೆ ಮಾ
ಡಿಸಿದಳದೊಂದು ನಂದನಮನಿಂದ್ರನ ನಂದನದಂದಮೆಂಬಿನಂ ‖ ೫೫ ‖

ಆದ್ಯಂತ ಪ್ರಾಸದರಗಳೆ
ಆ ನಿರುಪಮಗೃಹಬಹಿರುದ್ಯಾನಂ
ತಾನೆಸೆದೊಪ್ಪುಗುಮಪ್ರತಿಮಾನಂ
ನಾಗಲತಾ ವಿಸ್ತೀರ್ಣಮದಪ್ಪುದು
ಪೂಗದ್ರುಮ ಸಂಕೀರ್ಣಮೆನಿಪ್ಪುದು
ಮಾತುಳಂಗ ಸಂಘಾತಮದೆತ್ತಲು
ಮಾತತ ಪರಿಖಾವಳಯಂ ಸುತ್ತಲು
ಮನುಪಮಬದರಾಶೋಕ ಮಹೀಜಂ
ವಿನಮಿತ ಚೂತ ಕುಜಾತ ಸಮಾಜಂ
ಶಾಳ ತಾಳ ಹಿಂತಾಳ ಶಿರೀಷಂ
ಸ್ಥೂಳಕ್ರಾಳಕರೀರಾಶೇಷಂ
ಕದಳೀ ಸಪ್ತಚ್ಛದ ಪುನ್ನಾಗಂ
ವಿದಳಿತ ಚಂಪಕ ಲವಲೀ ನಾಗಂ
ವಕುಳ ಪಾಟಳಾಶ್ವತ್ಥಬ್ರಾತಂ
ಲಿಕುಚ ನಾಳಿಕೇರದ್ರುಮಜಾತಂ
ಆದಿಯಾಗೆ ಪಲವುಂ ಪೆಱವಂದದ
ಪಾದಪಂಗಳಿಂದೊಪ್ಪುವ ಚಂದದ

ಬನದೊಳೆತ್ತಲುಂ ಸುಳಿವರಗಿಳಿಗಳೆ
ಜಿನುಗಿ ರಾಗದಿಂದಂ ಮೊರೆವಳಿಗಳೆ
ಪೋಪುಗಿಲ್ಪುಗಿಲ್ಪುಗಿಲೆನುತೆ ಕರಂ
ಕಾಪುಗೊಂಡು ಜಡಿವುದು ಪಿಕನಿಕರಂ
ನೀರಜಾಕರಂ ಸ್ತುತ್ತಿಱಿದಲ್ಲಿಯೆ
ಕೈರವಾಸಿತಾಂಭೋರುಹವಲ್ಲಿಯೆ
ನಲಿವ ಸಾರಿಕಾಹಂಸಧ್ವಾನದಿ
ನಲೆವ ಬಕಶುಕ ಚಕೋರಧ್ವಾನದಿ
ಅಲ್ಲಿಗಲ್ಲಿಗೆಡೆಯಾಡುವ ಕೊಂಚೆಯಿ
ನೆಲ್ಲಾ ದೆಸೆಯೊಳ್ ಕುರ್ವಿದ ಬೆಂಚೆಯಿ
ನಂಗಜನ್ಮನರಮನೆಯೆಂಬಂತಿರೆ
ಭಂಗಿವೆತ್ತು ನೆಱೆ ಸೊಗಯಿಪುದಂತಿರೆ-
ಮನಸಿಜಾತ ಗಂಧದ್ವಿಪದಿಕ್ಕೆಗೆ
ವಿನಯ ಭೂಮಿಯಾಗಿರ್ಪುದು ತೋರ್ಕೆಗೆ
ಸನ್ಮನೋಜಮಾಧವ ಸಮಯಕ್ಕಿದೆ
ಜನ್ಮಭೂಮಿ ತಾನೆನಿಸಲು ತಕ್ಕುದೆ
ನೆರೆದು ಮಧುಕರಾವಳಿ ಝುಂಝುಮ್ಮೆನೆ
ಒರೆದು ಮದಮನೀಟಿಸ್ಕೊಳುತುಂ ಕಮ್ಮನೆ
ಪುದಿದ ತಣ್ಪನಾಲಿಂಗಿಸಿ ತಣ್ಣನೆ
ಪದೆದು ಮಂದಗತಿಯಿಂದಂ ಪಣ್ಣನೆ
ಬಳಸಿ ಮಲ್ಲಿಕಾ ಸತಿಯಂ ಚುಂಬಿಸಿ
ನಳಿನಕಾಂತೆಯೊಳ್ ಬಿಡದೆ ವಿಳಂಬಿಸಿ
ಚೂತವಲ್ಲರೀವಧುವಂ ಸೋಂಕುತು
ಮೋತು ಜಾತಿಕಾಮಿನಿಯಂ ಕೂಂಕುತು

ಮಿಂಬುವೆತ್ತ ಪುಗಿಲಿಂದಂ ಮಾರುತ
ನೆಂಬ ಕಾಮುಕಂ ಸುಳಿಗುಮನಾರತ
ಮಿಂತು ನಾಡೆಯುಂ ತತ್ಕೇಳಿವನಂ
ಎಂತು ನೋಡೆಯುಂ ಕರಮತಿಪಾವನಂ || ೫೬ ||

ಪೊಸತಲರ್ದಸುಕೆಯ ಮಾವಿನ
ಕೊಸಗಿನಲಂಪಿಂದಲಂಪು ಪಿಂಗದೆ ಮತ್ತಂ
ಕಸಮುಸಗಿ ಮಿಸುಗಿ ಭೃಂಗ
ಪ್ರಸರಂ ಪಸರಿಸುವುವೆಸೆವ ವಿಸರುಹವನದೊಳ್ || ೫೭ ||

ವ|| ಮತ್ತಮದಱೊಳತಿ ವಸ್ಪಣಕುಸುಮಪ್ರವಾಳದ ಪೊಳೆವ ಗೊಂಚಲಂ ಸಂಚಳಿಸಿ ಪೊಳೆವ ಮಿಂಚಿನ ಗೊಂಚಲೆಂದುಮಲ್ಲಿಗಲ್ಲಿಗಲ್ಲೊಕ್ಕ ಬಂಧುರ ಬಂಧೂಕ ಕುಟ್ಮಳಂಗಳನತಿಮನೋಹರಾರುಣಚ್ಛಾಯಕಾಯಂಗಳಪ್ಪಿಂದ್ರಗೋಪಪ್ರಕರಮೆಂದುಂ ಕರ್ಪೂರಭೂರುಹಂಗಳಿಂ ಧರಾತಳಕ್ಕೆ ಪೂವಲಿಗೆದಱಿದಂತೆ ಕೆದಱಿದ ಕರ್ಪೂರವಳಿಕುಗಳಂ ಮುಂಚಿ ಬಂದ ಜಳದಾಗಮಪ್ರಸೂಚಕಂಗಳಪ್ಪಾಲಿವರಲ್ಗಳೆಂದುಂ ಸರೋಜವನದಿಂ ಶಾಳಿವನಕ್ಕೆ ಪರಿವ ಪರಿಕಾಲ್ಗಳಂ ನೆರೆದು ಮುರಿದು ಕೆಱುಗೊಂಕುಕೊಂಕಿ ಪೊನಲ್ವೊನಲನಟ್ಟಿ ಪರಿವ ಬಳ್ಳಿವೊನಲ್ಗಳೆಂದುಂ ಜಂಬುಜಂಬೀರ ಸಹಕಾರ ನಾರಂಗ ನಾಳಿಕೇರಾದ್ಯನೇಕಾನೋಕಹ ಫಲಪಕ್ವದ್ರವೀಭೂತರಸಾಸಾರದಿಂ

ನೊರ್ಮಡಿಯಾಗೆ ಸೋರ್ವ ಸೊನೆಯುಂ ಸರಿಯೆಂದು ಮದಾಳಿ ಮಾಳೆಯುಂ
ಕಾರ್ಮುಗಿಲೆಂದು ನೀರವಿಹಗಂಗಳನಾದಮನಭ್ರನಾದಮೆಂ
ದೊರ್ಮೆಯುಮಾ ವನಾಂತರದೊಳಚ್ಚರಿಯಾಗೆ ಮಯೂರಕೋಟಿಗಳ್
ಕಾರ್ಮುಕವೆಂದು ನರ್ತಿಸುವುವೆಂಬಭಿಶಂಕೆಯನುಂಟುಮಾಡುಗುಂ || ೫೮ ||

ಉಪವನದೊಳ್ ಬಿರಯಿಗೆ ಮೊರೆ
ವ ಪಾಂಗಿನೊಳ್ ಮೊರೆಯುತಿರ್ಪ ಮಱಿದುಂಬಿ ವಿರಾ
ಜಿಪ ಮಾವಿನ ಕೆಂದಳಿರೊಳ
ಗೆ ಪರಭೃತಂ ಮಗುಳ್ವಪರಭೃತಂ ಕರಮೆಸೆಗುಂ || ೫೯ ||

ಗಳಗಳಿಕೆಯಿನೆಳದಳಿರ್ಗಳಿ
ನೆಳಮಿಡಿಯಿಂ ನೆಱೆಯೆ ತುಱುಗಿದೆಳಮಾವುಗಳೊಳ್
ಗಿಳಿ[ಕೋಗಿಲೆ]ಮುಗುಬ್ಬಿರಗಿಳಿ
ಗಳ ರವದಿಂದೆಂತು ನೋೞ್ಪಡಂ ರಮಣೀಯಂ || ೬೦ ||

ಎಳೆಯೊಳ್ ಶೀತಳಮಪ್ಪ ತೆಂಗಿನೆಳೆನೀರೊಳ್ಚಂದ್ರಕಾಂತೋಪಳಂ
ಗಳಿನೆತ್ತಂಬಿರಿವಿಟ್ಟು ಬರ್ಪ ಜಲದಿಂ ಪುಂಡ್ರೇಕ್ಷು ಪಾನೀಯದೊಳ್
ಬೆಳೆದೋರಂತೊಱಗಿರ್ದು ತೋರ್ಪ ವಿಲಸತ್ಕರ್ಪೂರಶಾಳೀವನಾ
ವಳಿಯಿಂದಂ ಕರಮೊಪ್ಪಿ ತೋರ್ಪುದು ಬನಂ ಲಕ್ಷ್ಮೀಕರಾಲಂಬನಂ || ೬೧ ||

ವ|| ಇಂತು ಮದನರಾಜಂಗೆ ಮಂಗಳಭೂಮಿಯುಂ ವಸಂತರಾಜಂಗೆ ಜನ್ಮಭೂಮಿಯುಮೆಂಬ ಪೊಗೞ್ತೆಗಂ ನೆಗೞ್ತೆಗಂ ನಿಲಯಮುಂ ನಿವಾಸಮುಮಾದ ಮಣಿಮಾಡಮುಮಂ ನಂದನವನಮುಮಂ ಮಾಡಿಸಿ ಶೀತಾತಪಾದಿ ಬಾಧಾವ್ಯಪೇತಮಪ್ಪಂತು ನಿಜಾರ್ಭಕನಂ ಗರ್ಭಗೃಹದೊಳಿರಿಸುವಂತೆ ಮಣಿಮಯ ಗರ್ಭಗೃಹದೊಳಗಗಲದಂತು ನಿಶ್ಚಿಂತಮಿರಿಸಿ ಯತಿರೂಪಕಮೆಂಬ ಪೆಸರುಂ ಚಿತ್ರರೂಪು ಮೊದಲಾಗಿಯುಂ ಕಾಣಲೀಯದಂತು ಕಾಸಂ ಕರಮೆ ಸುವಿಧಾನಂ ಮಾಡಿ ರಕ್ಷಿಸುತ್ತಿರ್ಪುದುಮನ್ನೆಗಮಾ ಕುಮಾರನುಮಧರೀಕೃತ ಸುಕುಮಾರನುಮೆನಿಸಿ ಬಳೆದು ಷೋಡಶವರ್ಷದ ದೇಸಿಯನಾನಲೊಡಂ

ಕಳಿಕೆಗಳಿಂ ಪೂದುಱುಗಲಿ
ನಳಂಕೆವೆತ್ತಿರೆ ಬಸಂತದೊಳ್ ಶೋಭಿಸುವೊಂ
ದೆಳಮಾವಿನ ತೆಱದಿನದೇಂ
ವಿಲಾಸ ಯೌವನ ವಿಭೂತಿಯಂ ತಾಳ್ದಿದನೋ || ೬೨ ||

ಸ್ಫುರಿತಮರೀಚಿಯಿಂ ಪುದಿದು ಪಜ್ಜಳಿಪಿಂದುವಿನಂತೆ ಕೇಸರೋ
ತ್ಕರದೊಳನಾರತಂ ನೆರೆದ ಕೇಸರಿಯಂತೆ ಸದಾನಲಕ್ಷ್ಮಿಯೊಳ್
ನೆರೆದ ಮನೋಜರಾಜಗಜದಂತೆ ವಿಲಾಸವತೀಕಟಾಕ್ಷ ಸುಂ
ದರ ನವಯೌವನಂ ನೆಱೆಯೆ ಕಣ್ಗೆಸೆದಂ ಸುಕುಮಾರವಲ್ಲಭಂ || ೬೩ ||

ಉದಿತಾರ್ಕದ್ಯೋತಿಮಾಳಾರುಣರುಚಿರತನುಚ್ಛಾಯನತ್ಯಂತಕಾಂತ್ಯಾ
ಸ್ಪದವಕ್ತ್ರಂ ನೀಳನೀರೇರುಹದಳನಯನಂ ವಿದ್ರುಮಾರಕ್ತದಂತ
ಚ್ಛದನುತ್ತುಂಗೋಚಿತೋರಸ್ಥಳನನುಪಮ ಬಾಹುದ್ವಯಂ ಕಂಬುಕಂಠಂ
ಕದಳೀಸ್ತಂಭೋರುಯುಗ್ಮಂ ಲಲಿತಮನಸಿಜಾಕಾರನಾದಂ ಕುಮಾರಂ ॥ ೬೪ ॥

ವ॥ ಮತ್ತಮಾ ಕುಮಾರಂ ಸಮಚತುರಸಂಸ್ಥಾನವಜ್ರವೃಷಭನಾರಾಚಸಂಹನನನುಂ ಹಳಕುಳಿಶಕಳಶಚಮರಜಛತ್ರಶಂಖಾಂಕುಶಾಂಕಿತಕರತಳವಿಳಸಿತನುಂ ಸುರೂಪಸುರಭಿನಂದ್ಯಾವರ್ತಶ್ರೀವತ್ಸಸ್ವಸ್ತಿಕಪ್ರಭೃತಿಪ್ರಶಸ್ತಲಕ್ಷಣಲಕ್ಷಿತಾಕ್ಷೂಣೇಕ್ಷಣೈಕಸುಭಗಮೂರ್ತಿಪ್ರಭಾವಪರಮೈಶ್ವರ್ಯಸಂಪನ್ನನುಂ ದುಂದುಭಿಗಭೀರಮೃದುಮಧುರ ನಿನದೋಪಶೋಭಿತನುಮಾಗಿ ಮತ್ತಗಜಗಮನೆಯರ ಚಿತ್ತಕ್ಕೆ ವಶ್ಯಯಂತ್ರಮೆನಿಸಿದ ಸೌಂದರ್ಯಮುಮಂ ವೃತ್ತಕುಚಯುಗ್ಮೆಯರ ಮನಕ್ಕಾವೇಶಚೂರ್ಣಮೆನಿಸಿದ ಸೌಭಾಗ್ಯಮುಮಂ ವಿದಗ್ಧವಾರನಾರಿಯರ ಹೃದಯಕ್ಕೆ ಸಿದ್ಧೌಷಧಿತಿಲಕಮೆನಿಸಿದ ಪುಣ್ಯಮುಮಂ ಮುಗ್ಧವಿಲಾಸಿನಿಯರ ಬಗೆಗಾಲೇಪನಪತ್ರಮೆನಿಸಿದ ಲಾವಣ್ಯಮುಮಂ ಪುಣ್ಯಮುಮನಪ್ಪುಕೆಯ್ದುದನಾ ಪುಣ್ಯದಿನದೊಳಾ ಯಶೋಭದ್ರಾಂಬಿಕೆ ತತ್ಪುತ್ರನ ಯೌವನೋದಯಮುಂ ನೋಡಿ ರೂಪವಿದ್ಯಾಧರನುಂ ರೂಪಕಂದರ್ಪನುಂ ಅಭಿನವಮದನನುಂ ಅಪೂರ್ವಪುರಂದರನುಂ ಸೇವ್ಯಭವ್ಯಚಿಂತಾಮಣಿಯುಂ ಭವ್ಯವರಪುಂಡರೀಕನುಮೆಂಬ ಪೆಸರ್ಗಳನಭಿಧಾನಂಗಳ್ಮಾಡಿ ವಿವಾಹಪ್ರಾಪ್ತನಾದುದನಱಿದು ತದ್ಗೃಹಮಹತ್ತರವಯೋವೃದ್ಧಬುದ್ಧಿವೃದ್ಧಪ್ರಮುಖಪ್ರಧಾನವರ್ಗದೊಳಾಳೋಚಿಸಿ ನಿಜಾಪತ್ಯಂಗೆ ವೈವಾಹಿಕಕ್ಕೆ ಸಮಾನಾಭಿಜಾತ್ಯಮುಮನ್ವಯಾಧಿಪತ್ಯಮುಮುಳ್ಳೆಡೆಗಳೊಳ್

ಚತುರಿಕೆ ಚಿತ್ರೆ ಚಿತ್ರಲತೆ ಪದ್ಮಿನಿ ಪದ್ಮೆ ಸುಶೀಲೆ ಶೀಲೆ ರೇ
ವತಿ ಮಣಿಮಾಲೆ ಚಂದ್ರಿಕೆ ಶಶಿಪ್ರಭೆ ಲಕ್ಷ್ಮಿ ಸುರೂಪೆ ಲಕ್ಷ್ಮಣಾ
ವತಿ ಜಿನದತ್ತೆ ರೋಹಿಣಿ ಸುಲೋಚನೆ ಸುನಂದೆ ಸುಭದ್ರೆ ಭಾ
ರತಿ ರತಿ ರಂಭೆ ರತ್ನವತಿ ಗೋಮಿನಿ ಸುಂದರಿ ಹೇಮಮಾಲೆಯುಂ

ಸನ್ನುತೆ ವಿಜಯೆ ಜಯಾವತಿ
ರನ್ನೆ ಮನೋಹರಿ ಸುದಾಮೆಯೆಂಬಿವರಂ ಶೀ
ಲೋನ್ನತೆ ಮೂವತ್ತಿರ್ವ
ರ್ಕನ್ನೆಯರಂ ರೂಪವಿಭವಸಂಪನ್ನೆಯರಂ

ವ॥ ಶ್ರೀಹ್ರೀಧೃತಿಕೀರ್ತಿಯೆಂಬ ಶ್ರೀದೇವತೆಯರೊಳೋರನ್ನೆಯರಂ ಭವಿಷ್ಯನ್ಮಂಗಳಪ್ರತ್ಯಾಸನ್ನೆಯರಂ ಶುಭಮುಹೂರ್ತದೊಳ್ನೋಡಿ ಮುದ್ರಿಕಾಪ್ರದಾನಂ ಮಾಡಿ ಮಹಾಪ್ರಸಿದ್ಧಜಿನಾಲಯಂಗಳೊಳಷ್ಟಾಹ್ನಿಕಮಹಾಮಹಿಮೆಯಂ ಮಾಡಿ ರಾಜಧಾನಿಯೊಳಷ್ಟಶೋಭೆಯಂ ಮಾಡಿ

ದಿವಿಜವಿನಿರ್ಮಿತಮೆನೆ ಧನ
ದವಿನಿರ್ಮಿತಮೆನೆ ವಸಂತನಿರ್ಮಿತಮೆನೆ ಭೂ
ಭುವನಕ್ಕತಿ ಕೌತುಕಮಂ
ವಿವಾಹಮಂಡಪಮನಱಿಯಿಂ ನಿರ್ಮಿಸಿದಳ್ ॥ ೬೬ ॥

ರಗಳೆ॥
ಚಂಚನ್ಮಣಿಗಣಪರಿಖಚಿತಭೂಮಿ
ಸಂದಿರ್ದಧರೀಕೃತ ಭೋಗಭೂಮಿ
ಮರಕತಭಿತ್ತಿಗಳಿಂ ಭಿತ್ತಿವೆತ್ತು
ಪೊಸದೇಸೆಯೊಳೆತ್ತಂ ಭಂಗಿವೆತ್ತು
ವಜ್ರದ ಕಂಭಂಗಳ ಕಾಂತಿ ಮಿಂಚೆ
ಪರಭಾಗಂ ಬಡೆದವಱೊಳ್ಪಳಂಚೆ
ವೈಡೂರ್ಯದ ಗಡಗೆಗಳೆಸೆಯೆ ಬೇಱೆ
ಶಶಿಕಾಂತದ ಜಂತೆಗಳೊಪ್ಪಿ ತೋಱೆ
ನೀಲದ ಬೋದಿಗೆಗಳಮುಕ್ಕೆವಡೆಯೆ
ಪವಳದ ಲೋವೆಗಳ್ಕಡುಚೆಲ್ವುವಡೆಯೆ

ಪೊಂಗಳಸಂಗಳ್ತಳತಳನೆ ತೊಳಗೆ
ಕಪ್ಪುರದ ಸೊಡರ್ಗಳೋರಂತೆ ಬೆಳಗೆ
ಪೊಂದಳಿರ್ಗಳ ತೋರಣದೊಳಗೆ ಪೊಱಗೆ
ಕೆಂದಳಿರ್ಗಳ ಮಾಲೆಗಳೆಱಗಿ ತುಱುಗೆ
ಜಾಗದ ನೆಲವಡಲಗೆಗಳ ವಿಲಾಸ
...................................
ಕಾಲಾಗರು ಧೂಪೋದ್ಗಾರಿ ಧೂಪ
...................................
ಕಪಿಲಚ್ಛಾಯಾವ್ಯೋಮಾಭಿರಾಮ
...................................
ವಿದಿಶಾಚತುರ್ನಿಹಿತ ಶಾತಕುಂಭ
ಮಯ ಜಿನಗಂಧೋದಕಪೂರ್ಣ್ಣಕುಂಭ
ಮುಜ್ವಲ ಬಹುಮಣಿ ಘಂಟಾವಿತಾನ
ಮಲ್ಲಲ್ಲಿಶೋಭಿಸುವ ಮಣಿಕುಂಭಸಂತಾನ (?)
ಮಾವೃತಸಿತಸೂತ್ರತ್ರಿತಯಮಾಗಿ
ವೇದೀವಿಲಾಸಮತ್ಯಂತಮಾಗಿ
ಕಟ್ಟಿದ ಪೂಮಾಲೆಗಳೆಸೆಯೆ ಮುಂದೆ
ನಾನಾವಿಧ ಫಲನಿಚಯಂಗಳಿಂದೆ
ವೈಚಿತ್ರ್ಯರುಚಿರದೇವಾಂಗವಟ್ಟೆ
ಕಿಕ್ಕಿಱಿಗಿಱಿದವಱೊಳ್ ಕೂಡೆ ಕಟ್ಟೆ
ಕೆದಱಿದ ಕರ್ಪೂರವಳಿಕು ಮೇಗೆ
ಕತ್ತುರಿಯ ಕಂಪುಮದನೂನಮಾಗೆ
ಚಂದನರಸದಿಂದಂ ಪೂಸಿದಲ್ಲಿ

ಸಾಂದಿನ ರಸದಿಂ ಸಾರವಿಸಿದಲ್ಲಿ
　　ಬಿಡುಮುತ್ತುಗಳಿಂದಿಕ್ಕಿದ ರಂಗವಲ್ಲಿ
ಆದಂ ಕರಮೊಪ್ಪಿರೆ ರಂಗವಲ್ಲಿ
　　ಚೆಂಬೊನ್ನಪಟ್ಟವಣೆ ದುಗುಲದಿಂದ
ಮಳವಟ್ಟಿರೆ ಪಾಸಿರೆ ಚೆಲುವಿನಿಂದ
　　ಮುಪಶೋಭಿತ ವಿಸ್ತೃತ ಸರ್ವಧಾನ್ಯ
ಮಧ್ಯಪ್ರದೇಶ ಸಂಸ್ಥಾಪ್ಯಮಾನ
　　ಮೆನೆ ಸಿಂಗನ್ನಡಿ ಮೊಸರಣ್ಣೆ ವೆರಸಿ
ದೆಳದಳಿರ್ಗಳಸಂಗಳ ಲೀಲೆವೆರಸಿ
　　ದಂಪತಿಯುಂ ಪೋ ಬರವೇೞ್ಂಬ
ತೆಱದಿಂ ಸೊಗಯಿಸಿದುದು ಕಣ್ಗಳುಂಬ
　　ವೋರಂತಡೆಯಾಡುವ ಯುವತಿ ಜನದ
ಮಂಜೀರಕ ಗುಂಜನ್ಮಂಜು ನಿನದ
　　ಮೆಸೆದಿರೆ ಮಂಗಳವಱ್ ಕೂಡೆ ಮೊೞಗೆ
ಜಯಜಯ ವರ್ಧಸ್ವ ನಿನಾದದೊಳಗೆ
　　ಕಳರವದಿಂ ವಂದಿ ವ್ರಾತಮುಲಿಯೆ
ಪರಿವಾರ ನಾರಿಯರ್ ಪಿರಿದು ನಲಿಯೆ
　　ಭಾವಿಸುವಂದದು ಪುಣ್ಯಾವತಾರ
ಮಾರಯ್ವಂದದು ಸಂಸಾರ ಸಾರ
　　ಮದು ಕಾಮನ ಸಾಮ್ರಾಜ್ಯಸದನ
ಮದು ಮದನ ಸಾರ ಸರ್ವಸ್ವಭವನ
　　ಮದು ನಾಗರಾಜ ನಿಲಯೋಪಮಾನ
ಮದು ದಿವಿಜಪತಿ ವಿಮಾನೋಪಮಾನ
　　ಮೀಲೋಕದೊಳದಱಂತಪ್ಪುವಿಲ್ಲ
ಬಣ್ಣಿಸಲದನಾವನುಮಱಿದನಿಲ್ಲ || ೮೯ ||

ವ|| ಅಂತು ಕಾಮರಾಜರಾಜ್ಯಕ್ಕೆ ಕಲ್ಯಾಣಗೇಹಮುಂ ವಸಂತರಾಜೋತ್ಸವಕ್ಕೆ ಜನ್ಮಗೇಹಮುಂ ಗಾಯಕನಿಕಾಯಕ್ಕೆ ಗಂಧರ್ವಗೇಹಮುಂ ವಂದಿವೃಂದಕ್ಕೆ ಚಿಂತಾಮಣಿ ಗೇಹಮುಮೆಂಬಂತಿರ್ದ ವಿವಾಹಗೇಹಮಂ ಯಶೋಭದ್ರೆ ಕಂಡು ಮನಂಗೊಂಡು ಮಂಡಲಿಕ ಮಹಾಸಾಮಂತ ಮಂತ್ರಿಪ್ರಧಾನ ಶ್ರೇಷ್ಠಿ ಸಚಿವಾಂತಃಪುರಾಂಗನಾಜನಕ್ಕೆ ಲೆಕ್ಕಮಿಲ್ಲದೆ ಪಂಚರತ್ನಮಯಭಾಜನಂಗಳೊಳ್ ತೆಕ್ಕನೆ ತೀವಿದ ಬಿಡುಮುತ್ತಿನ ಪಚ್ಚೆಸಾರದ ಕಾಶ್ಮೀರದ ಯಕ್ಷಕರ್ದಮಪಿಂಡದ ಕತ್ತುರಿಯ ಕೊಳತದ ಕರ್ಪುರವಳಿಕಿನ ಬಾಯಿನಂಗಳನೆ ಬೀಱಿ

[1]ಬೊ[1]ಂಗದ ನಾರಂಗದ ದೇ
ವಾಂಗದ ಪಲತೆಱದ ಸಕಲ ವಟ್ಟೆಗಳಂ ಗೇ
ಹಾಂಗಣದೊಳ್ ಮೆಟ್ಟುವ ತಾ
ಣಂಗಳೊಳೋರಂತೆ ಪಾಸಿ ತದನಂತರದೊಳ್ || ೯೦ ||

ಬಿಡುಮುತ್ತಿನ ಪೇಱುಗಳಂ
ತಡೆಯದೆ ಕರ್ಪುರದ ಪಿರಿಯ ಮಳವೆಗಳಂ ತಂ
ದಿಡು ಮಾಣಿಕ ಭಂಡಾರದ
ಪುಡಿಕೆಗಳಂ ಮಂಗಳಕ್ಕೆ ತಕ್ಕುಡುಕೆಗಳಂ || ೯೧ ||

ವ|| ಎಂದು ಕಾಲೋಹಣದ ಸಾಹಿಯಾಣದ ಚೀನದ ಮಹಾಚೀನದ ಪಟ್ಟಿಯ ಚಿತ್ರಾವಟ್ಟಿಯ ಪಟ್ಟಾವಳಿಯ ಪಟ್ಟಸೂತ್ರದ ಚಿತ್ರಸೂತ್ರದ ನೇತ್ರವಟ್ಟಣಿಗೆಯ ಪುಟ್ಟಿಗೆಗಳನೊಟ್ಟಿ ಬೆಟ್ಟಾಗಿ ಪುಂಜಿಸಿ

ಆಡುವ ಬೇಡುವ ಪಾಡುವ
ನೋಡುವ ಜನಕೆಲ್ಲಮಿಾವ ಸೂಸುವ ಕುಡುವೀ
ಡಾಡುವ ವಸ್ತುಗಳಿಂದೆಡ
ಱೋಡುವಿನಂ ಪಿರಿವನಿತ್ತು ಬಿಯಮಂ ಮೆಱೆದಳ್ || ೯೨ ||

1. ಬೊಂ (ಗ) ಜೊ (?)

ಇದಿರೊಳ್ ಜಂಗಮದಿವ್ಯಕಲ್ಪಲತೆ ಸತ್ಪುಣ್ಯಾರ್ಥದಿಂ ಬಂದು ನಿಂದುದೊ
ಮೇಣ್ ದಿವ್ಯ ಮಹಾನಿಧಾನಮಿದಿರೊಳ್ ಕೋೞ್ಪೋದುದೋ ಪೇೞಿಮೆಂ
ಬುದನೆಂಬನ್ನೆಗಮರ್ಥಿಗರ್ಥಚಯಮಂ ಬೇೞ್ಪ ..............
ಕ್ಷದೆ ಕೊಟ್ಟಳ್ಗಡಮೆಂದೊಡಾ ಸತಿಯನಿನ್ನೇವಣ್ಣಿಪೆಂ ವಣ್ಣಿಪೆಂ || ೯೩ ||

ಒಲಿದಂತಿರೆ ಕೊಟ್ಟಳ್ ಕ
ಲ್ಪಲತಿಕೆ ತನ್ನಿಚ್ಚೆಯಿಂದೆ ಕುಡದುದಱಿಂದೀ
ಲಲನಾಸದ್ರೂಪದ ಕ
ಲ್ಪಲತೆಗಮಾ ಕಲ್ಪಲತೆಗಮೇನಂತರಮೋ || ೯೪ ||

ವ|| ಆ ಪ್ರಸ್ತಾವದೊಳ್ ವಿವಿಧರತ್ನಗರ್ಭ ನಾನಾವಿಧೌಷಧಿಸಂದರ್ಭ ಹಾಟಕ ಘಟಪರಿಪೂರ್ಣ ಪರಮಜಿನಗಂಧೋದಕಂಗಳಿಂ ಮಿಂದು

ಮುದದಿಂ ನನೆಗಣೆಯಂ ಪಿಡಿ
ಯದೆ ಕರ್ಬಿನ ಬಿಲ್ಲನೊಲ್ಲದವಯವದಿಂದಂ
ಮದನನೆ ಬರ್ಪಂತಭಿನವ
ಮದನನಳಂಕಾರಭವನಮಂ ಪುಗುತಂದಂ || ೯೫ ||

ವ| ಅಂತಳಂಕಾರಮಂದಿರಕ್ಕೆ ವಂದು ಚತುರವಿಬುಧಜನಸಂವಿಧಾನದೊಳ್ ನೆಱೆಯೆ ಕಯ್ಗೆಯ್ದು

ಕನಕಮಣಿಕಟಕಲಲಿತಂ
ಜಿನಗಂಧೋದಕಪವಿತ್ರಗಾತ್ರಂ ಯದುಗೋ
ತ್ರನಿಕಾಯನಾಯಕಂ ವಿಬು
ಧನುತಂ ಮಂದರಮಹೀಧರಕ್ಕೆಣೆಯಾದಂ || ೯೬ ||

---

1. ತ (ಕ)

ತರತರದಿನೆಸೆವ ಕರೆಗಳ್
ವೆರಸಿದ ಪೊಸದುಗುಲದುಡೆಯಿನವುದೋಪ್ಪುವ ಪೊಂ
ಜುರಿಗೆಯುಮುಜ್ವಲ ನಾನಾ
ಭರಣಂಗಳುಮೇಂ ವಿಲಾಸಮಂ ಮಾಡಿದುವೋ ॥ ೯೭ ॥

ಪೊಸಮುತ್ತಿನ ಸುತ್ತಿನ ಭ
ರ್ಮಸೂತ್ರಮುಂ ನುಣ್ಪುವೆತ್ತ ಮಳಯಜದಣ್ಪುಂ
ಪೊಸಮದುವೆಯ ಪೊಸಪಸದನ
ಮೆಸೆದೊಪ್ಪಿರೆ ಜನಮನೇಂ ಮನಂಗೊಳಿಸಿದುದೋ ॥ ೯೮ ॥

ಅಮರಿಸಿ ಮಿಂಚಂ ಮುಕ್ಕುಳಿ
ಸಿ ಮಾನಸರಮೆಗೆ ಸೂಸಿದಪನಿವನೆಂಬಂ
ತಮರ್ದಿರೆ ಮಿಂಚುವ ಸುಲಿಪ
ಲ್ಲ ಮಿಂಚು ಸಂಚಳಿಸೆ ವಿಮಳ ಮಣಿಭಿತ್ತಿಗಳೊಳ್ ॥ ೯೯ ॥

ವ॥ ಅನ್ನೆಗ [ಂ] ಮೂವತ್ತಿರ್ವರ್ಕನ್ನೆಯರುಮನೇಕ ಮಂಗಳಪ್ರಸಾಧನ ಪ್ರವೀಣೆಯರಪ್ಪತಿವಿದಗ್ಧವಾರವನಿತಾಜನಪರೀತೆಯರಾಗಿ

ಕುಸುಮಾಸ್ತ್ರನ ನನೆಗಣೆಗಳ್
ಮಸೆದು ತೆಱಂಬೊಳೆದು ಪೊಳೆಯುತಿರ್ಪಂದದಿನೇ
ನೆಸೆದಿರ್ದರೊ ಕನ್ಯಕೆಯ
ಪ್ರಸಾಧನಂ ತಮಗೆ ಕಾಮಸಾಧನಮಾಗಲ್ ॥ ೧೦೦ ॥

ವ॥ ಅಂತು ನೆಱೆಯೆ ಕಯ್ಗೆಯ್ದು ವಧೂವರರಂ ಮೌಹೂರ್ತಿಕ ನಿರೂಪಿತ ಶುಭಮುಹೂರ್ತದೊಳ್ ಮಂದ್ರ ಮಧುರ ಮನೋಹರ ಮಂಗಳಪಟಹ ಗೀತಾಶೀರ್ವಾದಕೋಳಾಹಳರವಂಗಳೆಸೆಯೆ ಮುಂದಿಟ್ಟು ತಂದು ಪರಿಣಯನಮಂಟಪದ ಮಧ್ಯಪ್ರದೇಶಮನಳಂಕರಿಸಿದ ಪಂಚರತ್ನಮಯ ವೇದಿಕೆಯ ನಡುವಣ ಪೀಠದಮೇಲೆ ಪಾಸಿದ ದಳಿಂಬದ ಪಸೆಯೊಳಿರಿಸಿ ಕಯ್ನೀರೆಱೆದು ಪಾಣಿಗ್ರಹಣಂಗೆಯ್ಸಿದಾಗಳ್

ಕಡುಚೆಲ್ವುವಡೆದು ಬಳಸಿಯು
ಮೆಡೆಯುಡುಗದೆ ಕಾಂತೆಯರ್ ನಯಂಬಿಡದಿರೆ ದಾಂ
ಗುಡಿವಡೆವ ಕಲ್ಪಲತೆಗಳ
ನಡುವಣ ಕಲ್ಪಾವನೀಜಮಿರ್ಪಂತಿರ್ದಂ || ೧೦೧ ||

ವ|| ಆಗಳಾ ಯಶೋಭದ್ರೆ ಮುನ್ನೆ ತನ್ನ ಮಾಡಿಸಿದ ಮೂವತ್ತೆರಡು ಬಳ್ಳಿ ಮಾಡಂಗಳೊಳ್ ಮೂವತ್ತಿರ್ವರ್ ಸೊಸೆವಿರುಮಂ ಮಹಾವಿಭೂತಿಯನಿರಿಸುವುದುಂ ಪ್ರತಿದಿನಮಾ ಶೃಂಗಾರವಾರಿಧಿತರತ್ತರಂಗೆಯರಾ ಲಾವಣ್ಯಾರ್ಣವನ ಮನೋರಂಗ ದೊಳ್ ನಾಟಕಂ ನಲಿದು ನರ್ತಿಸಿಯುಮಾ ನಖಕುಳಿಶವಿರಾಜಿತಪಾದಪಲ್ಲವೆಯರಾ ನಖಾಂಶುಮಾಳಸ್ತಬಕಪರಿಚುಂಬಿತ ಪಾದಪಲ್ಲವಂಗಳೊಳ್ ಪದೆಪಂ ಮಾಡಿ ಮೇಳಿ ಸಿಯುಮಾ ವಿಲಾಸಜಂಘಾಯುಗಳೆಯರಾ ವಿನೂತಜಂಘಾಯುಗಳನಿಗಳದಿನುಲ್ಲಂಘಿಸ ದಂತು ಮಾಡಿಯುಮಾ ಕರಭೋರುಸ್ತಂಭೆಯರಾ ರಂಭಾಸ್ತಂಭಾಯಮಾನೋರುಸ್ತಂ ಭನಂ ತಂದು ವೃತ್ತೋರುಸ್ತಂಭಂಗಳಿನೇಳಿಸಿಯುಮಾ ಮನೋಜರಾಜ ಕ್ರೀಡಾಚಳೋ ನ್ನತಕಟಿತಟೆಯರಾ ಘನಜಘನನಂ ತಮ್ಮ ಸಹಜಘನಜಾಳಕ್ಕೊಳಗುಮಾಡಿಯುಮಾ ಮದನರಾಗರಸಕೂಪೋಪಮಾನ ನಿಮ್ನನಾಭಿಕೂಪೆಯರಾ ದಕ್ಷಿಣಾವರ್ತ ಗಂಭೀರ ನಾಭಿಕೂಪನಂ ತಮ್ಮ ಗಂಭೀರನಾಭಿಕೂಪದೊಳ್ ಬಲವರಿಸಿಯುಮಾಮುಷ್ಟಿ ಸಮಾ[1][ನ][1]ಮಧ್ಯೆಯರಾ ಸಿಂಹಮಧ್ಯನಂ ತಮ್ಮ ಸೂಕ್ಷ್ಮಕ್ಷಾಮಮಧ್ಯದೊಳ್ ಸೋಂಕಿಯುಂ ಮದನಮದಕುಂಭಿಕುಂಭೋಪಶೋಭಿಕುಚಕುಂಭೆಯರಾ ಸಕಲ ಲಕ್ಷ್ಮೀನಿವಾಸ ವಿಶಾಲವಕ್ಷಃಸ್ಥಲನಂ ತಮ್ಮನಿಬಿಡನಿಬದ್ಧಪೀವರಸ್ತನಂಗಳಿಂ ಕೊಂಕಿ ಯುಮಾ ನಿಕಾಮಕಾಮಪಾಶೋಪಹಾಸಿ ಕೋಮಳಬಾಹುಯುಗಳೆಯರಾ ದಿಕ್ಕರಿಕ ರಾನುಕಾರಿಕರಯುಗಳನಂ ತಮ್ಮ ಬಾಹುಪಾಶಂಗಳೊಳ್ ತೊಡರ್ಚಿಯುಮಾ ಕಂಬುಕಮನೀಯಕಂಧರೆಯರಾ ಮದಾಂಧ ಸಿಂಧುರಸ್ಕಂಧಬಂಧುರಕಂಧರನಂ ತಮ್ಮ ಗಳರೇಖೆಗಳೊಳಾಗಿಸಿಯುಮಾ ವಿದ್ರುಮಾಧರೆಯರಾ ಸುರಭಿಸುಪಕ್ವಬಿಂಬಾ

---

1 ಯ್ರ (ಕ)

ಧರನಂ ತಮ್ಮ ಬಿಂಬಾಧರಾಮೃತರಸದಿಂ ತಣಿಪಿಯುಮಾ ಮುಕ್ತಾಫಳಪ್ರವಿರಾಜಿತ ದಶನೆಯರಾ ಸ್ಫುರತ್ಸುಧಾಂಶುಮಯೂಖದಶನನಂ ತಮ್ಮ ದಶನಮರೀಚಿಗಳಿಂ ಮರುಳ್ಚಿಯುಮಾ ಮೃಣಾಳನಾಳಕೋಮಳಾನುಕಾರಿಮಣಿಕುಂಡಳಮಂಡಿತಕರ್ಣೆಯರಾ ನೂತ್ನರತ್ನಮಯ[2]ಚಂಪಕಕರ್ಣಪೂರಾಳಂಕೃತಕರ್ಣನಂ ತಮ್ಮ ಶ್ರೋತ್ರಯುಗಳಂಗಳಿಂ ಸೂತ್ರಿಸಿದಂತೊಳಗುಮಾಡಿಯುಮಾ ಮೃಗಮದರಾಜಿವಿರಾಜಿತ ಕಪೋಳತಳೆಯರಾ ಕಂದರ್ಪದರ್ಪಣಕಪೋಳತಳನಂ ತಮ್ಮ ಲಲಿತಕಪೋಲಂಗಳಿಂ ಮನಂಗೊಳಸಿಯುಮಾ ಚಂಪಕಕುಟ್ಮಳನಾಸಾವಂಶೆಯರಾ ಪರಿಮಳಶ್ವಾಸನಾಸಾಪುಟನಂ ತಮ್ಮ ನಾಸಾವಂಶಸೌರಭಕ್ಕೆ ವಶಗತನಂ ಮಾಡಿಯುಮಾ ಪುಂಡರೀಕದಳಧವಳವಿಲೋಳಲೋಚನೆಯರಾ ನೀಳನೀರೇರುಹದಳವಿಲೋಚನನಂ ತಮ್ಮ ನಿಡಿಯ ಬಿಳಿಯ ತುಱುಗೆಮೆಗಣ್ಗಳಿಂ ಕಣ್ಬೇಟಂಗೊಳಿಸಿಯು[ಮಾ] ಮನೋಜಜೈತ್ರಪತಾಕಾಪ್ರತಿಮಭ್ರೂವಿಭ್ರಮೆಯರಾ ಸ್ಮರಶರಾಸನಭ್ರೂವಿಭ್ರಮನಂ ತಮ್ಮ ಭ್ರೂವಲ್ಲಿಗಳೊಳ್ ತಡಮಿಕ್ಕಿಯುಮಾ ಪರಾರ್ಧ್ಯಾರ್ಧೇಂದುಲಲಾಟೆಯರಾ ಪೂರ್ಣಲಲಾಟನಂ ತಮ್ಮ ಲಲಾಟತಟರಂಜನೆಯಿಂ ವಿಟತತ್ವಾಭಿಮುಖಂಮಾಡಿ ರಂಜಿಸಿಯುಮಾ ನೀಳಾಳಕಿಯರಾ ಚಟುಳಕುಟಿಳಕುಂತಳನಂ ತಮ್ಮ ಸುತ್ತುಂಗುರುಳೊಳೆ ಸುತ್ತಿ ಜತ್ತಿಸಿಯುಮಾ ನವಮಾಳಿಕಾಕುಸುಮಸುಕುಮಾರಕೋಮಳೆಯರಾ ಸುಕುಮಾರಸ್ವಾಮಿಯನೊಲಿಸಿಯುಂ ವಿವಿಧವಿನೋದಂಗಳಂ ಸಲಿಸಿಯುಂ ಕೂರ್ಮೆಯುಮಂ ಪೆರ್ಮೆಯುಮಂ ಪಡೆದರಿಂತು

ಪ್ರಿಯಸತಿಯರೊಳಲ್ಲದೆ ಕೂ
ಡಿಯುಱಿಯನತ್ಯಂತರುಚಿರಮಣಿಕುಟ್ಟಿಮ ಭೂ
ಮಿಯನಲ್ಲದೆ ನೆಲನಂ ಮೆ
ಟ್ಟಿಯುಱಿಯನೇಂ ಗರ್ಭಸುಖಿಯೊ ತತ್ಸುಕುಮಾರಂ ॥ ೧೦೨ ॥

ಜನನಿಯೊಳಂ ಪರಿಚಾರಕ
ಜನದೊಳಮಾತ್ಮೀಯ ಯುವತಿ ಜನದೊಳಮೆಂದುಂ

---

1ಯರ್ (ಕ) 2+ ಚಂಪಿತ (ಕ)

ಮನವೊಸೆದು ನುಡಿವನಲ್ಲದೆ
ಮನುಜರೊಳಿಂತೆಂಬರಾರೊಳಂ ನುಡಿದಱಿಯಂ ॥ ೧೦೩ ॥

ವಿಲಸಿತದುಕೂಲ ವಸ್ತ್ರಂ
ಗಳನಲ್ಲದೆ ಪೆಱವು ಸೀರೆಗಳನುಟ್ಟಱಿಯಂ
ತೊಳಗುವ ರತ್ನಾಭರಣಂ
ಗಳನಲ್ಲದೆ ಪೆಱವು ತುಡುಗೆಯಂ ತೊಟ್ಟಱಿಯಂ ॥ ೧೦೪ ॥

ಕಲ್ಪೇಂದ್ರನ ನಾಗೇಂದ್ರನ
ತಳ್ಪದೊಳೆರಡೆರಡೆವರ್ಪ ಸಂಕಲ್ಪಮೆನಲ್
ನಿಷ್ಪ್ರಸತೆನೆ ಸೊಗಯಿಪ ಮೃದು
ತಳ್ಪದೊಳಾತಂ ವಿಲಾಸದಿಂ ಪವಡಿಸುವಂ ॥ ೧೦೫ ॥

ಬೆಳಗುವ ಮಣಿಮಯ ಲಲಿತೋ
ಜ್ವಲದೀಪಾವಳಿಯ ಬೆಳಗನಲ್ಲದೆ ಮನೆಯೊಳ್
ಬೆಳಗುವ ತೊಳಗುವ ಸೊಡರ್ಗಳ
ಬೆಳಗಂ ಕನಸಿನೊಳಮಾಗಿಯುಂ ಕಂಡಱಿಯಂ ॥ ೧೦೬ ॥

ಮಾಸರಮೊಕ್ಕ ಕತ್ತುರಿಯ ಪಂಕಮನಲ್ಲದೆ ಪಂಕಮಂ ಕರಂ
ಬೀಸುವ ಚಾರುಚಾಮರದ ಗಾಳಿಯನಲ್ಲದೆ ಗಾಳಿಯಂ ಮನೋ
ಭಾಸುರಮಪ್ಪ ಕಪ್ಪುರದ ಧೂಳಿಯನಲ್ಲದೆ ಧೂಳಿಯಂ ನಿಜಾ
ವಾಸದೊಳಿಂತುಟೆಂದಱಿಯನಿಂತುಟು ಪುಣ್ಯಮಗಣ್ಯಮಾತನಾ ॥ ೧೦೭ ॥

ನೆಟ್ಟನೆ ಪುಷ್ಪವಾಸನೆಯ ಕಪ್ಪುರಶಾಲಿಯ ತಂಡುಲಂಗಳಂ
ನಿಟ್ಟಿಸರಿಟ್ಟು ಬಾಗಿ ಮೃದುವಾದ ಮನೋಹರವಾದ ಕಂಪಿನೊಳ್
ಸುಟ್ಟರೆ ನಿಟ್ಟುದೋಯೆನಿಸಿದನ್ನಮನಲ್ಲದೆ ಮತ್ತಿನನ್ನಮಂ(?)
ಮುಟ್ಟುವನಲ್ಲನೀ ಜಗದೊಳೇಂ ಸುಖಿಯೋ ಸುಕುಮಾರವಲ್ಲಭಂ ॥ ೧೦೮ ॥

ಅಕ್ಕರ ॥ ಮಾಗಿ ಬೇಸಗೆ ಮೞೆಗಾಲಂ ಪಗಲಿರುಳೆಂಬಿವನೊರ್ಮೆಯುಂ ಕಂಡಱಿಯಂ
ರೋಗಭಯಚಿಂತಾಸಂತಾಪಮೆಂಬಿವನಿಂ[ತೆಂದು]ತಾನೆಂದುಮಱಿವನಲ್ಲಂ
ಭೋಗಭೂಮಿಯ ಮನುಜರ ಮಾರ್ಗದಿ ಭೋಗೋಪಭೋಗಮಂ ಭೋಗಿಸುತಂ
ರಾಗರಸದೊಳೆ ತಳ್ಳಂಕುಗುಟ್ಟುತುಂಲಾವಣ್ಯರಸದೊಳೋಲಾಡುತಿರ್ದಂ ॥ ೧೦೯ ॥

ಆತನ ಪುಣ್ಯಮೂರ್ತಿ ಪರಿವರ್ತಿತನಿರ್ಮಳಕೀರ್ತಿ ಚಾರುಭೋ
ಗಾತಿಶಯಪ್ರಭಾವಮುಹಿಮಾಸ್ಪದನನ್ವಿತಸೌಖ್ಯನೆಂದೊಡಿ
ನ್ನಾತನ ಪೆಂಪನಾತನ ವಿಭೂತಿಯನಾತನಭೋಗಮಂ ತಗು
ಳ್ದಾತನ ದಿವ್ಯಸೇವ್ಯಸುಖಮಂ ನೆಱೆ ಬಣ್ಣಿಪನೆಂತು ಬಣ್ಣಿಪಂ ॥ ೧೧೦ ॥

ಅಖಿಳವನಜ್ಯೋತಿರ್ಭವ
ನಖೇಚರದ್ಯುಚರಭೂಚರರ್ಕಳೊಳಾರುಂ
ನಿಖಿಳವಿಭೂತಿಗೆ ನಿರುಪಮ
ಸುಖಕ್ಕೆ ಸುಕುಮಾರನಂತು ನೋಂತರುಮೊಳರೇ ॥ ೧೧೧ ॥

ಅನಿಮಿಷನಿಳಯದಿನಗಲದ
ವಿನೂತಸುಖನಿಲಯರೆನಿಸಿದಹಮಿಂದ್ರರನೇ
ನನುಕರಿಸುತ್ತೆ ಕುಮಾರಕ
ನನುಪಮ ದಿವಿಜೇಂದ್ರಲೀಲೆಯಂ ತಾಳ್ದಿದನೋ ॥ ೧೧೨ ॥

ಪ್ರಕಟೀಕೃತಸುಕೃತಸುಖಾ
ಧಿಕನಾಮಯ ದಂಶಮಸಕಶೀತೋಷ್ಣಕದಂ
ಬಕಬಾಧಾರಹಿತನೆನಿಸಿ
ಸುಕುಮಾರಂ ಸುರಕುಮಾರ [1][ರಂ][1] ಮಸುಳಿಸಿದಂ ॥ ೧೧೩ ॥

---

1 ಸುಭಗಮಂ (ಕ)

ವಿದಿತಾನೂನವಿಲಾಸವೈಭವಪದಂ ಬೇಱೊಂದು ಸದ್ರೂಪಮೆ
ನ್ನದೆ ಮತ್ತಂ ಲಲಿತೋರುಚಾರುವಿಭವಂ ಬೇಱೊಂದು ಸೌಂದರ್ಯಮೆ
ನ್ನದೆ ನಾನಾವಿಲಸನ್ಮನೋಹರಸುಖಂ ಬೇಱೊಂದು ಲಾವಣ್ಯಮೆ
ನ್ನದೆ ಬೇಱೊಂದು ಪಲಾಲಮಂ ಗಱಪಿ ಚಾತುರ್ಯಕ್ಕೆ ಮುಯ್ಯಾಂಪುದೇ॥೧೧೪॥

ವ॥ ಇಂತಾ ಸುಕುಮಾರಂ ದೇವೇಂದ್ರಲೀಲೆಯಿಂ ಭೋಗೋಪಭೋಗಂಗಳಂ ಸೇವಿಸುತ್ತುಂ ಸುಖಸಂಕಥಾವಿನೋದಂಗಳಿನಿಪ್ಪುದುಮನ್ನೆಗವೊಂದು ದೆವಸಮಾ ಪುರಕ್ಕೊರ್ವಂ ಝುಂಝಾವೇಗನವಮೂಲ್ಯಮಪ್ಪ ರತ್ನಗಂಬಳಿಯಂ ಕೊಂಡುಬಂದು ವೃಷಭಾಂಕನಂ ಕಂಡು ಪೊಡೆವಟ್ಟು ದೇವಗೊಂದಪೂರ್ವವಸ್ತುವಂ ತಂದೆನವ ಧಾರಿಸಿಮೆಂದು

ನವಲಾಕ್ಷಾಮುದ್ರೆಯನೊಡೆ
ದವಧರಿಪುದುಮಾಗಳರ್ಕನುದಯಂಗೆಯ್ದಂ
ತೆವೊಲಾಯ್ತು ತನ್ನೃಪೇಶ್ವರ।
ಭವನದೊಳಾಶ್ಚರ್ಯಮಾದಮಪ್ಪನ್ನೆವರಂ ॥ ೧೧೫ ॥

ವ॥ ಅಂತಾ ಸಭಾಂತರಾಳಗಗನದಿಗವನಿಭಾಗದೊಳ್ ತನ್ನ ಬೆಳಗೆ ಬೆಳಗಾಗಿರ್ದ ರತ್ನಕಂಬಲಮನಾ ಧರಿತ್ರೀವಲ್ಲಭಂ ಮುಹುರ್ಮುಹುರಾಲೋಕನಕುತೂಹಳ ಚಿತ್ತನಾಗಿ ವಿಸ್ಮಯಂಬಟ್ಟು

ಇದು ದೇವಲೋಕದಿಂ ಬಂ
ದುದೊ ಮೇಣ್ನಾಗೇಂದ್ರಲೋಕದಿಂ ಬಂದುದೊ ಪೇ
ೞಿದು ವಿಸ್ಮಯಮೆನುತುಂ ತೂ
ಗಿದೂಗಿ ಮಸ್ತಕಮನಾ ನೃಪೇಂದ್ರಂ ನುಡಿದಂ ॥ ೧೧೬ ॥

ವ॥ ಎಮ್ಮಂದಿಗರೀ ಮಹಾವಸ್ತುವಂ ನೋಡಿಯುಮೇಂ ಕೊಳಲ್ನೆಱೆಯರ್ ಪೆಱರೀವಸ್ತುವಂ ಕಂಡೊಡೇಂ ಮನಮಂ ತೆಗೆದುಕೊಳ್ವರಲ್ಲದೆ ಧನಮಂ ತೆಗೆದು ಕುಡಲಾರ್ಪರಾರುಮಿಲ್ಲೆಂದು ತಂಬುಲಮಂ ಕೊಟ್ಟು ಝುಂಝಾವೇಗನಂ ವಿಸರ್ಜಿಸುವುದುಮಾತನುಮರಮನೆಯಂ ಪೊಱಮಟ್ಟು ಬಂದು

ಧರೆಯೊಳಗಿಂತೀ ನಗರದ
ಪರದರೆ ಸಂಪನ್ನರೆಂದು ದುಂದುಮೆಗೇಳ್ದಿಂ
ಪರದರೊಳೀ ನಗರದ ಪರ
ದರ ಸೈಪಿನ ಪಿರಿಯ ಸಿರಿಯ ಪವಣಂ ನೋೞ್ಪಿಂ ॥ ೧೧೭ ॥

ವ॥ ಎಂದು ಪಿರಿಯಂಗಡಿಯ ಸಿರಿಯಂ ನೋಡಿ ನಾಡೆಯುಂ ಮೆಚ್ಚುತ್ತುಂ ಬಂದು ಪೇೞಿಮಿೀ ಪೊೞಲೊಳ್ ಮಹಾವಸ್ತುವರ್ಗಂಗಳಂ ಬಿಲಲ್ ನೆಱಿವನ್ನರಪ್ಪ ಮಹೋದಾರಗುಣಸಮರ್ಥರುಮಪ್ಪ ಪರದರಾರೆಂದು ಬೆಸಗೊಳ್ವುದುಮಿರ್ದರಿರ್ದ ಲ್ಲಿಯೆ ಸುಕುಮಾರಸ್ವಾಮಿಯಿಂ ಪಿರಿಯರಾರೆಂದು ಗುಣಸ್ತುತಿಗೊಳ್ವುದುಮಾ ಕುಮಾರನ ಲಕ್ಷ್ಮೀಮಂದಿರಕ್ಕೆ ವಂದು ವಂಕದಾರದೊಳ್ ನಿಂದು ನಿಮ್ಮಾಳ್ದಂಗ ಪೂರ್ವವಸ್ತುವಂ ಕೊಂಡುಬಂದೆನೆಂದು ಕಾಪಿನವರ್ಗೆ ಪೇೞ್ವುದುಮವರ್ ಪರಿದು ಯಶೋಭದ್ರೆಗಾತನ ಬಂದ ವೃತ್ತಾಂತಮಂ ಬಿನ್ನವಿಸೆ ಬರವೇೞೆಂಬುದುಂ ದ್ವಾರ ಪಾಲಕಗೃಹೀತಕರನಾಗಿ ಭುವನಜನಾಂಬಿಕೆಯೆನಿಸಿದ ಯಶೋಭದ್ರಾಂಬಿಕೆಯಂ ಕಂಡು ರತ್ನಕಂಬಲಮಂ ನಿಮಿರ಼್ಿ ತೋರ್ಪುದುಮಪೂರ್ವವಸ್ತುವಪ್ಪುದನಱಿದು ವಸ್ತುಪುರುಷರಿಂ ಬೆಲೆಯಿಡಿಸಿ

ಪೊಗೞೆ ಜನಂ ಝುಂಝೂವೇ
ಗಗೆ ತಾನಂತೊಂದು ಕೋಟಿದೀನಾರಮನಾ
ಮೃಗನಯನೆ ಕೊಟ್ಟುಕೊಂಡಳ್
ನೆಗೞ್ತೆವೆತ್ತಿರ್ದ ರತ್ನಮಯಕಂಬಳಮಂ ॥ ೧೧೮ ॥

ವ॥ ಇಂತೊಂದು ಕೋಟಿಪೊನ್ನನೊಂದು ಕವಡಿಕೆಯಂ ಕುಡುವಂತೇ ನುಮಪೋಹಮಿಲ್ಲದೆ ಕೊಟ್ಟು ಬೞಿಯಂ ರತ್ನಕಂಬಳಿಯಂ ಮಣಿಮಾಡದ ನೆಲೆ ಯೊಳಿರ್ದಾತ್ಮೀಯಾತ್ಮಜಂಗೆ ಕೆಲದೊಳಿರ್ದ ಪರಿಚಾರಕಿಯರ ಕಯ್ಯಲಟ್ಟಿದಾಗಳಾ ಕೆಯುಮದಂ ಸುಕುಮಾರಸ್ವಾಮಿಯ ಕಯ್ಯಲ್ ಕುಡುವುದುಂ

ಇದು ನವದಿವ್ಯರತ್ನಮಯಮಾಗಿಯುಮೇನೆನಗಾಗದಾನಿದಂ
ಪೊದೆದೊಡೆ ಘರ್ಮಮಕ್ಕುಮದುಕಾರಣದಿಂದಿದನಿಂದೆ ತಮ್ಮ ಮೆ
ಚ್ಚಿದ ಸೊಸೆಯಾವಳಾಕೆಗೆ ಮನೋಮುದದಿಂ ಕುಡುಗೆಂದು ಕೊಟ್ಟೊಡಾ
ಸುದತಿಯುಮಾ ತಳೋದರಿಗೆ ಮೆಲ್ಲನೆ ಪೇೞ್ದುದುಮಾಗಳಾಕೆಯುಂ ॥ ೧೧೯ ॥

ಒಲಿದಿದನೊರ್ವಳ್ಗಿತ್ತಂ
ದೊಲವರಮಾಗಿರ್ಕುಮೆಂದು ಸೊಸೆವಿರ್ಗೆಲ್ಲಂ
ಸಲೆ ಚಮ್ಮಾವುಗೆಯನಾ
ಲಲನೆ ಮಹೋತ್ಸಾಹದಿಂದೆ ಮಾಡಿಸಿ ಕೊಟ್ಟಳ್ ॥ ೧೨೦ ॥

ವ॥ ಅನ್ನೆಗಮಿತ್ತಲಾ ವೃಷಭಾಂಕಂ ನಿಜಾಸ್ಥಾಯಿಕೆಯೊಳಿರ್ದ ವಸ್ತುಪುರುಷರಂ ವಸ್ತುವಿಚಾರಗೋಷ್ಠಿಯಿಂ ಮಾತುಮಾತಾಗೆ ಝುಂಝಾವೇಗನಿಂದು ತಂದಿರ್ದ ದಿವ್ಯವಸ್ತುವನೀ ಲೋಕದೊಳ್ ಕೊಳ್ಳಲ್ ನೆಱೆವರಾರೆಂಬುದುಮವರೆಂದರ್ ನಮ್ಮ ಪುರದ ಸುಕುಮಾರನಂಬಿಕೆಯಪ್ಪ ಯಶೋಭದ್ರಾಂಬಿಕೆಯಾಗಳೊಂದು ಕೋಟಿಪೊನ್ನಂ ಕೊಟ್ಟು ಕೊಂಡುದುಮಲ್ಲದೆಯುದನರಿಯಿಸಿ

ಎಸೆದಿರೆ ತನ್ನೆಸೆವಂತೀ
ವಸುಧೆಗೆ ಪಡಿಚಂದಮಾಗೆ ಸೊಸೆವಿರ್ಗೆಲ್ಲಂ
ಸುಸಮಾನಚಿತ್ತದಿಂದಿಂ
ದು ಸಮ್ಮಾವುಗೆಯನಲ್ತೆ ಮಾಡಿಸಿಕೊಟ್ಟಳ್ ॥ ೧೨೧ ॥

ವ॥ ಎಂಬುದುಮಾಗಳರಸನತ್ಯಾಶ್ಚರ್ಯಂಬಟ್ಟು

ಆಂ ಬಿಲಲಾಱದ ವಸ್ತುಗ
ಳಂ ಬಿಲಲಾರ್ಪನ್ನರೆನ್ನ ಪೊೞಲೊಳ್ ಮಹಿಮಾ
ಡಂಬರದಿನಿರ್ಪೊಡಿನ್ನೆ
ನ್ನಿಂ ಬಿಟ್ಟು ಕೃತಾರ್ಥರಾರೊ ಈ ಮಹಿತಳದೊಳ್ ॥ ೧೨೨ ॥

ವ|| ಆದಲ್ಲದೆಯುಮಾ ಸುಕುಮಾರನ ವಿಭೂತಿಯಂ ಖ್ಯಾತಿಯಂ ಕೇಳ್ದ ಱಿವೆನಲ್ಲದೆ ಕಂಡಱಿಯೆನಿಂತಪ್ಪ ಗರ್ಭಸುಖಿಯಂ ನೋಡಲ್ಪಡೆದೆನಪ್ಪೊಡೆ ಕಣ್ಬಡೆದ ಫಲಮಂ ಪೆತ್ತೆನೆಂದು ಸಮಸ್ತಪರಿಜನಸಮೇತನಾಗಿ ತನ್ನಿವಾಸಕ್ಕೆ ಬರ್ಪುದುಂ ಯಶೋಭದ್ರೆ ಬೇಗಮಿದಿರ್ವಂದು ಪೊಡೆವಟ್ಟು ದೇವರಿತ್ತ ಬಿಜಯಂಗೆಯಿಮೆಂದು ಮಣಿಮಾಡದ ಮುಂದಣ ಪಚ್ಚೆಯ ಮೊಗಸಾಲೆಯ ಲೋವೆಯೊಳ್ ಪಂಚರತ್ನದಿಂ ದಿಕ್ಕಿದ ರಂಗವಲ್ಲಿಯ ನಡುವಣ ಮಣಿಮಯಸಿಂಹಾಸನದಮೇಲೆ ವಿಸ್ತರಿಸಿದ ದೇವಾಂಗವಿಸ್ತರಿಗೆವೋಲ್ ಮಹಾವಿಸ್ತರದಿನಿರಿಸಿ ಸಾಮಂತಮಹಾಸಾಮಂತಮಂತ್ರಿ ಮಹತ್ತರ ಪ್ರಭೃತಿಜನಂಗಳನವರವರ ಪಡೆದ ಮನ್ನಣೆಗಳನೆಡೆಯಱಿದಿರಿಸಿದಾಗಳರಸನೆಮ್ಮ ತಮ್ಮನೆಲ್ಲಿದನಾತನಂ ನೋಡಲೆಂದು ಬಂದೆನೆಂಬುದುಂ

ಮುದದಿಂ ತತ್ಪರಿಚಾರರ<br>
ವದನಮನಾ ಕಾಂತೆ ನೋಡೆ ಬೇಗಂ ಮಣಿಮಾ<br>
ಡದ ನೆಲೆಯೊಳಿರ್ದ ಸುಕುಮಾ<br>
ರದೇವನಂ ತನ್ನಿಮರಸನಂ ಕಾಣಿಸುವಂ || ೧೨೩ ||

ವ|| ಎಂಬುದುಮಾ ಪರಿಚಾರಕರ್ಪರಿತಂದು ಪೇೞ್ವುದುಂ ಮಾಡದಿೞಿದುದಯಶಿಖರಿಶಿಖರಾನೂನೋದಯಮಾನ ಭಾನೂದಯಮಾನನಂ ನಿಸರ್ಗಮಣಿಗಣಾಭರಣಕಿರಣಮಾಲಾಭರಿತದಿಗಂಗನಾಮುಖನುಮತಿಚಲಲ್ಲುಲಿತವಿದ್ಯುತ್ಪ್ರಭಾಪ್ರಸರಪ್ರಕೀರ್ಣಚಂಚಚ್ಚಾರುಚಾಮರವಿಲಾಸನುಮುದಾರಕಾಶ್ಮೀರಸಾರಾಪಹಾಸಿಕರ್ಪೂರಪಾಳಿಸಮ್ಮಿಶ್ರಿತತಾಂಬೂಲರಾಗಪರಿಚುಂಬಿತಬಿಂಬಾಧರರಾಗವದನನುಮಭಿನವಯೌವನಾವಷ್ಟಂಭವಿಜೃಂಭಿತತ್ರಿಭುವನಾಂತರಾಳನುಂ ಮೃಗಮದಪತ್ರವಿಲಿಖಿತವಿಚಿತ್ರಭುಜಯುಗಳನುಂ ಕತಿಪಯಪರಿಚಾರಕಜನಪರಿವೃತನುಮಧರೀಕೃತನಾಗಕುಮಾರವಿಭವನುಂ ದೂರೀಕೃತಸು[ರ]ಕುಮಾರಸೌಂದರ್ಯನುಮೆನಿಸಿ

ಮೃಗಮದದ ಯಕ್ಷಕರ್ದಮ<br>
ದಗರುವ ಕಪ್ಪುರದ ಕಂಪು ಸುಟ್ಟುರೆವಿಡುತುಂ<br>
ಮುಗಮುಗಿಸೆ ಕುಮಾರಂ ದಿ<br>
ವ್ಯಗಂಧಮಯನಾಗಿ ಲೀಲೆಯಿಂ ಬರ್ಪಾಗಳ್ || ೧೨೪ ||

ದಿನನಾಥಂ ವ್ಯೋಮದಿಂದಂ ಥರೆಗಿೞಿದಿರದೀ ಬಂದನೀಬಂದನೀಬಂ
ದನೆ ದೇವೇಂದ್ರಂ ವಿಲಾಸಂ ಬೆರಸು ನಯದಿನೀ ಬಂದನೀ ಬಂದನೀ ಬಂ
ದನೆ ಸಂತಂ ಕಂತುರಾಜಂ ಜಗಮನಲೆಯಲೀ ಬಂದನೀ ಬಂದನೀ ಬಂ
ದನೆ ತಾನೆಂಬಂತು ಬಂದಂ ಪರಮಜಿನಮತಾಂಭೋಜಿನೀರಾಜಹಂಸಂ|| ೧೨೫ ||

ಇದು ಸಮಸ್ತವಿನೇಯಜನವಿನುತ ಶ್ರೀವರ್ಧಮಾನಮುನೀಂದ್ರವಂದ್ಯ
ಪರಮಜಿನೇಂದ್ರಶ್ರೀಪಾದಪದ್ಮವರಪ್ರಸಾದೋತ್ಪನ್ನಪ್ರಸನ್ನ
ಸಹಜಕವೀಶ್ವರ ಶ್ರೀಶಾಂತಿನಾಥಪ್ರಣೀತಮಪ್ಪ
ಸುಕುಮಾರಸ್ವಾಮಿಚರಿತಪುರಾಣದೊಳ್
ವೃಷಭಾಂಕಂ ಸುಕುಮಾರಸ್ವಾಮಿ
ದರ್ಶನಂ ದಶಮಾಶ್ವಾಸಂ

---

## ೧೧. ಏಕಾದಶಾಶ್ವಾಸಂ

ಶ್ರೀಸುಕುಮಾರನುದಾರಂ
ವಾಸವಮಹಿಮಾವಿಲಾಸನನುಪಮಸೌಖ್ಯಾ
ವಾಸಂ ರೂಪಮನೋಜಂ
ಭಾಸುರತೇಜಂ ಸರಸ್ವತೀಮುಖಮುಕುರಂ ॥ ೧ ॥

ಜಗತೀನಾಥನನಾ ಕುಮಾರನೊಸೆದಾಕರ್ಣಾಂತವಿಶ್ರಾಂತ ದೃ
ಷ್ಟಿಗಳಿಂ ನೋಡುತುಮೆಯ್ದೆ ವರ್ಪುದುಮಪೂರ್ವಾಲೋಕದಿಂದಾಗಳಾ
ಮೃಗರಾಜಾಸನದಿಂದಮೆರ್ದು ಮುದದಿಂದಂ ದ್ರಾಘಿಮಶ್ಲಾಘಿಬಾ
ಹುಗಳಿಂದಂ ತೆಗೆದಪ್ಪಿಕೊಂಡನರಸಂ ಶ್ರೀರೂಪಕಂದರ್ಪನಂ ॥ ೨ ॥

ವ॥ಆಗಳಾ ಯಶೋಭದ್ರಾಂಬಿಕೆ ನಿಜನಂದನನ ಮುಖಾರವಿಂದಮನಾನಂದಂ
ಬೆರಸು ನೋಡಿ

ಪುದಿದಟ್ಟಿಯಿಂದೆ ಪೊಡೆಮಡು
ವುದು ದಯೆಗೆಯ್ ಮಹಾಪ್ರಸಾದಮೆಂಬುದು ಜೀಯೆಂ
ಬುದು ದೇವೆಂಬುದು ಮಹಿಮಾ
ಸ್ಪದ ಬೆಸನೇನೆಂಬುದೀಗಳೀಯವಸರದೊಳ್ ॥ ೩ ॥

ನಮ್ಮಾಳ್ದಂ ಸ್ವಾಮಿ ನರೇಂ
ದ್ರಂ ಮಗನೆ ಕೂರ್ಮೆಯಿಂದೆ ನಿನ್ನಂ ನೋಡಲ್
ತಾಮ್ಮನೆಗೆ ಬಂದನದಱಿಂ
ನೀಮ್ಮೆಱೆವುದು ನಿನ್ನ ಭಕ್ತಿಯುಂ ಶಕ್ತಿಯುಮಂ ॥ ೪ ॥

ವ|| ಎಂಬುದುಮರಸನೀಗಳಿದಱೊಳೆಲ್ಲಮೇನುಸಿರದಿರಿಮೆಂದು ಕುಮಾರನಂ ತನ್ನೇಱಿದ ಮಣಿಮಯಸುಖಾಸನದೊಳರ್ಧಾಸನಮಿರಿಸುವುದುಂ

ಸಾರತರರತ್ನಮಯಕೇ
ಯೂರಂ ಕರ್ಣಾಂತದೊಳ್ಪಳಂಚಲೆಯೆ ಮಹೋ
ದಾರಗುಣಂ ವೃಷಭಾಂಕನೊ
ಳೋರಾಸನಮಿರ್ದನಾಗಳಾಸ್ಥಾಯಿಕೆಯೊಳ್ || ೫ ||

ವ|| ಆಪ್ರಸ್ತಾವದೊಳ್

ಅತಿಸಿತಸರ್ಷಪಶೇಷಾ
ಕ್ಷತಂಗಳಂ ಮಂಗಳಾರ್ಥದಿಂ ಪೆರ್ವೆಂಡಿರ್
ಸತತೋತ್ಸವದಿಂದಂ ಪರ
ಸಿ ತಳಿದರಾನಂದಪಟಹಮೊಡನೆಸೆವಿನೆಗಂ || ೬ ||

ಮೊಱಗುವ ಬದ್ದವಣಂ
ಗಳ ಬೆಳಗುವ ಸೊಡರ್ಗಳ ತಗುಳ್ದು ದೆಸೆದೆಸೆಗೆತ್ತಂ
ಮಿಳಿರ್ವ ದುಕೂಲದ ಗುಡಿಗಳ
ವಿಲಾಸಮೊಪ್ಪಿದುದು ತನ್ನಿವಾಸಾಂತರದೊಳ್

ವ|| ಆಗಳಾಳೋಕನಕುತೂಹಳದಿಂ ಮನೋಜರಾಜಾವೇಶಮಂತ್ರದಿಂ ಸ್ತ್ರೋಭಂಗೊಂಡಂತೆ ಪುರಕ್ಷೋಭಮಾಗೆ ಪೌರವಾರವಿಲಾಸಿನಿಯರಾತ್ಮೀಯಭವನ ವ್ಯಾಪಾರಚಿಂತಾಂತರಾಳಾಪಂಗಳಂ ಮಱೆದು ಸುಕುಮಾರಗೃಹದ್ವಾರ ಗೋಪುರಾಟ್ಟಾಳಕಪ್ರಾಸಾದಕೂಟಕೋಟಿಗಳನೇಱಿ ನೋಟ್ಪಲ್ಲಿ

ಮುಡಿವ ನೆವದಿಂದೆ ತನ್ನಯ
ಮುಡಿಯಂ ಮೇಲ್ಗೊಳ್ವ ನೆವದೆ ಮೊಲೆಯಂ ಪೆಱರೊಳ್
ನುಡಿವ ನೆವದಿಂದೆ ಪಲ್ಗಳ
ಬೆಡಂಗನೊರ್ವಳ್ ವಿಲಾಸದಿಂದಂ ಮೆಱೆದಳ್ || ೮ ||

ವ|| ಮತ್ತಮೊರ್ವಳ್

ಧವಳಾಕ್ಷಿ ಸುಧಾಧವಳಿತ
ಗವಾಕ್ಷಜಾಳಾಂತರಂಗಳೊಳ್ ವದನಮಂನಿ
ಟ್ಟವಲೋಕಿಸುವವಳಿಂದಂ
ಧವಳಿಸಿದುವೊ ಕಣ್ಣವೆಳ್ಪು ದಿಗುಭಿತ್ತಿಗಳಂ || ೯ ||

ಅಮಿತಗುಣಾಧಾರನನಾ
ಕುಮಾರನಂ ದೂರದಿಂದೆ ಕಾಣಲೊಡಂ ತ
ನ್ನುಮನೇನೆಂದಱಿಯದೆ ವಿ
ದ್ರುಮೆಯೋಷ್ಟೋ(?)ಷ್ಠೆಮು ............... || ೧೦ ||

ವ|| ಮತ್ತಮೊರ್ವಳ್ ವಿದಗ್ಧವಿಲಾಸಿನಿ

ನೆಲೆವೊಲೆಗಳ್ ಕದಕ್ಕದಿಸೆ ಮೆಲ್ಲಡಿಗಳ್ ತಡವಾಗಿ ತೋಱಿ ಬೆ
ಬ್ಬಳ ನಡುಬಳ್ಕೆ ವೃತ್ತಕಟಿ ಕೆತ್ತೆ ಬಟಲ್ಮುಡಿ ಜೋಲ್ದು ನೇಲೆ ಸಂ
ಚಳದಳಕಾಳಿಗಳ್ ಮಿಳಿರ್ದು ನರ್ತಿಸೆ ನರ್ತಕಿವೋಲ್ ನಿಕಾಮಕೋ
ಮಳೆ ಪರಿತಂದು ದಂಗದೊಳೆ ನಿಂದು ಕುಮಾರನನಂದು ನೋಡಿದಳ್ || ೧೧ ||

ತಳದಂದಂ ಕೆಂದಳಿರೆನೆ
ಪೊಳೆವಲರ್ಗಣ್ ಬಾಸಿಗಂಗಳೆನೆ ಕುಚಕಲಶಂ
ಕಲಶಮೆನೆ ನೋಡಿದಳ್ ಮಂ
ಗಳಲಕ್ಷ್ಮೀಲೀಲೆಯಿಂ ಕುಮಾರನನೊರ್ವಳ್ || ೧೨ ||

ಅಳುಕುವ ನಡು ಘನಕುಚಯುಗ
ನೊಳು ನಸುಸೆಳೆಯುತ್ತಮಿರ್ಪಿನಂ ರಾಗದಿನಾ
ಗಳು ನೀಡುಂ ಪರಿತಂದೋ
ರ್ವಳು ನೋಡಿದಳೊಲ್ದು ರೂಪವಿದ್ಯಾಧರನಂ* || ೧೩ ||

---

*ಈ ಪದ್ಯದಲ್ಲಿ ನಡುಗನ್ನಡದ ಪ್ರಯೋಗವಿದೆ.

ತಳ್ಪೊಯ್ದು ಕೆಂಗಳನಯನದ
ಬೆಳ್ಪು ತಳತ್ತಳಿಸಿ ಮಿಳಿರ್ದು ಪೊಳೆಯೆ ಗವಾಕ್ಷಂ
ಗಳ್ಪುಜ್ಜಳಿಪಿನಮುಂದೊ
ವರ್ಳ್ಪರಿಕಿಸಿ ದಠೋರ್ದಳಭಿನವಾಂಗೋದ್ಭವನಂ ॥ ೪ ॥

ಪೆಱಳೋರ್ವಳ್ ನೋಟ್ಪಿಡೆಯೊಳ್
ಪೆಱಳೊರ್ವಳ್ ನಿಲೆ ಕುಮಾರನಂ ನೆಱೆ ನೋಡಲ್
ಪೆಱದೆಸೆವ ಮೀನಲೋಚನೆ
ಮಱುಗಿದಳಱುನೀರ ಮೀನ ತೆಱದಿಂದಾಗಳ್ ॥ ೧೫ ॥

ವ॥ ಮತ್ತೋರ್ವಳಭಿನವಯೌವ್ವನಮದಾವಷ್ಟಂಭೆಯುಂ ಕುಚಯುಗ ಕುಂಭ ಸಂಭೃತಕುಂಕುಮಪಂಕಾಂಕಿತೆಯುಂ ನಿರತಿಶಯರೂಪವಿಲಾಸನಿರಂಕುಶೆಯುಂ ಕರ್ಪೂರರಧೂಲೀಧೂಸರಿತಶರೀರೆಯುಂ ಕಾಮಿಜನಸೇನಾಮನೋಮರ್ದನಪರಿಣತೆ ಯುಮೆನಿಸಿ

ವಿನುತ ಜಘನಾಶ್ರಯಂ ಜೋ
ಲ್ದು ನಿಲೆ ಕಿಱುದೊಡೆಗೆ ನಿಗಳಮಿಕ್ಕಿದ ಗಜಮೆಂ
ಬಿನೆಗಂ ಗಜಗಾಮಿನಿ ಬಂ
ದು ನೋಡಿದಳ್ ಭವ್ಯಸೇವ್ಯಚಿಂತಾಮಣಿಯಂ ॥ ೧೬ ॥

ವ॥ ಮತ್ತೋರ್ವಳತಿಗರ್ವಪರ್ವತಾರೂಢೆ

ಮನಸಿಜನಂ ಮರುಳ್ಚುವೆನನಂಗನನಂಜಿಸುವೆಂ ಮನೋಜನಂ
ಮನೆವೆಸಕೆಯ್ಸುವೆಂ ಮದ[1]ನನಂ ಮದಗರ್ವದಿ[1]ನಾಳ್ವೆನೆಂಬ ತ
ಕ್ಕಿನ ಸೊಬಗಿಂಗಮಿಕ್ಕೆನೆಲೆಯಾದ ವಿಲಾಸಿನಿ ಬಂದು ನಿಂದು ಭೋಂ
ಕೆನೆ ನೆಱೆ ಸೋಲ್ತು ಮೆಯ್ಮಱೆದು ಮೆಲ್ಲನೆ ನೋಡಿದಳಾ ಕುಮಾರನಂ ॥ ೧೭ ॥

1 ಗರ್ವನನಂ ಮರಗದಿ (ಕ)

ವ॥ ಮತ್ತಮೋರ್ವಳ್ ಕಂದರ್ಪವಿಜಯಕದಲಿಕಾವಿಲಾಸಮಂ ತಾಳ್ದಿ

ನುತಕಾಂಚೀದಾಮುಮಂ ಕೋಮಲ ಕರಯುಗಳಂ ಕೆನ್ನೆಯಂ ವಿಭ್ರಮಭ್ರೂ
ಲತೆ ಬೆನ್ನಂ ಕೇಶಪಾಶಂ ನೊಸಲನೆಸೆವ ನೀಲಾಲಕಂ ಮೇಲುದಂ ವಿ
ಶ್ರುತಲಕ್ಷ್ಮೀಪೂರ್ಣಕುಂಭೋಪಮಕುಚಮಲೆಯುತ್ತಿರ್ಪಿನಂ ವೈಶ್ಯವಂಶೋ
ರ್ಜಿತನಂ ಶ್ರೀರೂಪಕಂದರ್ಪನನನುನಯದಿಂ ನೋಡಲೆಯ್ತಂದಳೊರ್ವಳ್ ॥ ೧೮ ॥

ವ॥ ಮತ್ತಮೋರ್ವಳ್ ವಿಮುಗ್ಧೆ ರೂಪವಿದ್ಯಾಧರನ ರೂಪಾತಿಶಯವಿಲೋಕನಮಾತ್ರದಿಂ ನೇತ್ರಾಂಬುಜಪತ್ರಂಗಳಂ ಕರತಳಪಲ್ಲವಂಗಳಿಂ ಮು[2]ಚ್ಚಿ[2] ಮನಃಸಂಕಲ್ಪಸಂಪರ್ಕಸಂಭೋಗಸುಖಾಸಕ್ತೆಯಾಗಿರ್ಪುದುಮಾಕೆಯ ಕೆಳದಿ ಕಂಡು ವಿಸ್ಮಯಾಪನ್ನಮಾನಸೆಯಾಗಿ

ಸುದತೀ ಕಣ್ಗಳನೇಕೆ ಕೈಯತಳದಿಂ ಮು[2]ಚ್ಚಿ[2]ರ್ಪೆಯೆಂದಾಗಳೀ
ಮದನಂ ಪೊಕ್ಕು ಮದೀಯ ನೇತ್ರಯುಗಳ ದ್ವಾರಂಗಳಿಂ ಚಿತ್ತಗೇ
ಹದೊಳೋತಿರ್ದವನೆನ್ನ ಕಣ್ದೆಱೆಯೆ ತದ್ವಾರಂಗಳಿಂ ಪೋಕುಮೆಂ
ಬುದನೆನ್ನೊಳ್ ಬಗೆದೀಗಳಕ್ಷಿಯುಗಮಂ ಮುಚ್ಚಿರ್ದೆನುಂತಿರ್ಪೆನೇ ॥ ೧೯ ॥

ವ॥ ಎಂದು ತನ್ನ ವಿಮುಗ್ಧಸ್ವಭಾವಮಂ ನಲ್ಮೆಯಳಿಪಿನಲಂಪಳಿಕೆಯುಮಂ ತೋಱೆ ನುಡಿವುದುಂ ಮತ್ತೊರ್ವಳ್

ಮಣಿಮಯಭಿತ್ತಿಯೊಳ್ಪೊಳೆದು ತೋರ್ಪ ಕುಮಾರನ ರೂಪನಾಗಳಾ
ಕ್ಷಣದೊಳೆ ನೋಡಿ ಪೊರ್ದಿದೊಡೆ ತನ್ನಯ ರೂಪಿದಿರಾಗಿ ಭಿತ್ತಿಯೊ
ಳ್ಮಣಿಯದೆ ಭಿತ್ತಿವೆತ್ತೆಸೆದು ತೋರ್ಪುದುಮೆನ್ನ ಸಮಾನಮಪ್ಪವಳ್
ಸೆಣಸಿದೊಳೆನ್ನೊಳೆಂಬ ಭಯದಿಂದಮೆ ಪೊರ್ದಳೆ ರತ್ನಭಿತ್ತಿಯಂ ॥ ೨೦ ॥

---

2 ಚಿ (ಕ ಗ)

ಕೆಲ್ಲಯಿಸಿ ಕೆಲಕೆ ತೊಲಗುತು
ಮೆಲ್ಲಲ್ಲಿಗೆ ನಿಂದು ತತ್ಕುಮಾರಕನಂ ನೋ
ಟ್ಪಲ್ಲಿ ಮನೋಜನ ದೀವದ
ಪುಲ್ಲೆಗಳೆನಿಸಿದವು ನೆರೆದ ಪೆಂಡಿರ ತಂಡಂ ॥ ೨೧ ॥

ಮಱುಗಿ ಕುಸುಮಾಸ್ತ್ರನಿಚಯಂ
ನೆಱೆಗೊಳೆ ನೆಱೆ ಸೋಲ್ತು ಕಾಮಪರಿತಾಪಂ ಕ
ಣ್ದೆಱೆದಂತಾಗೆ ಕುಮಾರನ
ನೊಱಲ್ದು ನೋಡಿದರನಂಗನೆಂದಂಗನೆಯರ್ ॥ ೨೨ ॥

ವ॥ ಇಂತು ನಗರನಾರೀಜನಂ ಕೌತ್ವರೆಗೊಂಡು ನೆರೆದು ನೋಡುತ್ತಿರ್ಪು
ದುಮನ್ನೆಗಂ ಯಶೋಭದ್ರಾಂಬಿಕೆ ರಾಜಾಧಿರಾಜರಿಗೆ ವಿನಯವಿನಮಿತೋತ್ತಮಾಂ
ಗೆಯಾಗಿ ಕೈಗಳಂ ಮುಗಿದು ನಿಂದಿರ್ದು ದೇವರಿಂದು ನಿಮ್ಮ ತಮ್ಮನಗೋಷ್ಠಿಯೊಳಾ
ರೋಗಿಸಲ್ಬಿಜಯಂಗೆಯ್ಯಿಮೆಂದೊಡಂಬಡಿಸಿದಾಗಳ್.

ನರಪತಿ ಬರ್ದಿನನೆಂದಾ
ದರದಿಂ ಗೃಹಲಕ್ಷ್ಮಿ ಬೋನಮೆತ್ತಿದುದೆಂಬಂ
ತಿರೆ ಚೋದ್ಯಮಪ್ಪಿನಂ ಬಿ।
ತ್ತರದೆತ್ತಿದ ಬೋನದಿರವು ಚೆಲ್ವಾಯ್ತಾಗಳ್ ॥ ೨೩ ॥

ಅನತಿಶಯಭೋಜನಾಂಗಾ
ವನಿಜದ ವಿರಚನೆಯಿಸೆಸೆದ ತೆಱದಿಂದೆ ಕನ
ತ್ಕನಕಮಣಿರಜತಮಯಭಾ
ಜನಂಗಳೆಸೆದವು ವಿಚಿತ್ರತರಮಪ್ಪಿನೆಗಂ ॥ ೨೪ ॥

ಪರಿವ ಕರೆವೆರೆವ ಸೂಱಾ
ಯ್ತರ ಸೂಳುಗಳ್ತುಱಿಂಗಿದಚ್ಚಳಾ
ಯ್ತರ ಕಳಕಳರವದಿಂ ಭೋ
ರ್ಗರೆದುಲಿವಂಬುಧಿಯನಂತದೇಂ ಮಗುಳಿಸಿತೋ ॥ ೨೫ ॥

ಎಡೆವಟ್ಟಲ್ಗಡ್ಡಣಿಗೆಗೆ
ಪಡಿಗಕ್ಕೆ ತಗುಳ್ದ ಪಱಿಯ ಬಿತ್ತರಿಗೆಗೆ ತ
ಕ್ಕೆಡೆಯುಱಿದು ಪಂತಿಕಾಱರ
ನೆಡೆಯುಱಿದು ವಿಲಾಸದಿಂದಮಿರಿಸಿದರಾಗಳ್ ॥ ೨೬ ॥

ತರತರದಿಂ ತುಱಿಗಿದ ವಿವಿ
ಧರತ್ನಮಯಮಪ್ಪ ಪೊನ್ನ ಕುಳಿವಟ್ಟುಗಳಿಂ
ನಿರುಪಮ ಕನಕ ಸರೋಜಾ
ಕರಮಲರ್ದಂತಿರ್ದುದನ್ನವಾಸವಿಲಾಸಂ ॥ ೨೭ ॥

ಕನಕಲತಾ ಕೋಮಲೆಯರ್
ಕನಕದ ಬಟ್ಟಲ್ಗಳೊಳಗೆ ತಂದೆಱೆದರ್ ತೊ
ಟ್ಟನೆ ಪೊಂಗೆ ಕಂಪು ಪುಟ್ಟೆ
ತ್ತೆನೆ ಸುರಭೀಕೃತಮನಮಲ ಸುರಭೀಘೃತಮಂ ॥ ೨೮ ॥

ಅಪರಿಮಿತಮೆನಿಸೆ ಚೆಂಬೊ
ನ್ನ ಪರಿಯಣದ ಬಳಸಿ ಬಣ್ಣವಣ್ಣಿಗೆಗಳೊಳಾ
ದುಪದಂಶಂಗಳ್ ತುಱುಗಿದ
ವು ಪತ್ರ ಶಾಕಂಗಳಿಷ್ಟತುಷ್ಟಿಕರಂಗಳ್ ॥ ೨೯ ॥

ವ|| ಅಂತು ಪೊನ್ನಡ್ಡಣಿಗೆಗಳ ಮೇಲಲಂಕರಿಸಿದ ಚೆಂಬೊನ್ನ ಪಿರಿಯ ಪರ್ಯಣಂಗಳಿಂ ಪೊಂದಾವರೆಗೊಳನಲರ್ದಂತೆ ವಿರಾಜಿಸುತಿರ್ದ ಭೋಜನಲಕ್ಷ್ಮೀವಿಳಾಸ ಭವನಕ್ಕಾ ರಾಜಹಂಸನುಂ ಪರಮಜಿನಮತಾಂಭೋಜಿನೀರಾಜಹಂಸನುಂ ರಾಜಹಂಸಲೀಲೆಯಿಂ ಬಿಜಯಂಗೆಯ್ದು ಮಣಿಕುಟ್ಟಿಮತಳದೆಡೆಯೞಿದಿರಿಸಿದ ಕನಕಭಾಜನಂಗಳ ಪೊರೆಯೊಳಾ ಸೌಖ್ಯಭಾಜನಂಗಳ್ ಪಱಿಯಿಲ್ಲದ ಪಱಿಯ ಬಿತ್ತರಿಗೆಗಳ ಮೇಲೆ ಕುಳ್ಳಿರ್ಪುದುಂ ಬಾಣಸಿಗೆಯರ್ ಪಿಂಡುಗಂಕಣಂಗಳಂ ನೂಂಕಿ ನೂಲತೊಂಗಲನೆತ್ತಿ ಪೊನ್ನ ಸಟ್ಟುಗಮುಂ ಮುತ್ತಿನ ಪಡಲಿಗೆಗಳುಮಂ ಪಿಡಿದಮೃತರಸಪೂರಂಗಳೆನಿಸುವ ಘೃತಪೂರಂಗಳುಮನಮರ್ದಿನುಂಡಿಗೆಗಳೆನಿಸುವ ಪಾಲುಂಡೆಗಳುಮನತಿಮೃದುಲಲಿತಕೋಮಲತಲ ಸಂ[1]ಗಮಾತ್ರದ್ರಾವಣಿಯಪ್ಪ ಶಾಕವರ್ತಿಗೆಗಳುಮಂ ಪಾಲ್ಗಡಲನೊರೆಯ ಪೊರೆಯ ತೆರೆಯುಮನನುಕರಿಸಿಯುಮಲ್ಪದಶನದಂಶಮಾತ್ರಖಂಡನೀಯಕರಂಗಳೆನಿಸಿದ ಮಂಡಕಂಗಳುಮಂ ತವರಾಜಬಂಧದೊಳಂದಂಬೆತ್ತ ಲಡ್ಡುಗೆಗಳುಮಂ ಸುಗಂಧಿಪರಿಮಲಾನೂನಮಪ್ಪ ಹಯ್ಯಂಗವೀನಮುಮನರಸಂಗಂ ಪಂಕ್ತಿಯೊಳುಣ್ಬ ಪರಿಜನಕ್ಕೆಲ್ಲಂ ಬಡ್ಡಿಸಿದಾಗಳ್

ಎಳಮಾವಿನ ಮಿಡಿ ಮಾಗುಳಿ
ಮೆಱಸಿನ ಕರಿಬೆತ್ತಲಟ್ಟಿಯೀಳೆಯಗೊಲೆಯಿಂ
ದಳವಟ್ಟಿರೆ ಲಾವಣಕಂ
ಗಳನಿಕ್ಕಿದರಾಗಳಟ್ಟಿಯಿಂದಂಗನೆಯರ್ || ೩ ||

ಇದು ಬಾೞೆಸೊಸರಿದು ಕಟಿಲಿಂ
ತಿದು ರುಚಿವೆತ್ತಿರ್ದ ಪಾನಮಿದು ಮಜ್ಜಿಗೆ ತಾ
ನಿದು ಶಿಖರಿಣಿಯೆನುತುಂ ತಿಂ
ಬಿದಿಂಬಿ ತಂದೆೞೆದರಬಲೆಯರ್ ಸಿಪ್ಪುಗಳಿಂ || ೩೧ ||

---

1 ಪುಟ (ಗ)

ವಿಲಸತ್ಪ್ರತಿಭಾತೇಜೋ
ಬಲಾಯುರಾರೋಗ್ಯ ಪುಷ್ಟಿಬಹುತುಷ್ಟಿಕರಂ
ಗಳನಮೃತಸಮಾನಾನ್ನಂ
ಗಳನೞ್ತಿಯೊಳಾಗಳರಸನಾರೋಗಿಸಿದಂ || ೩೨ ||

ವ|| ಅಂತು ನಾನಾವಿಧಭಕ್ಷ್ಯೋಪದಂಶಾನ್ನದಾನಂಗಳನಮೃತೋಪಮಾನಂಗಳನಾರೋಗಿಸಿದಿಂ ಬೞಿಕ್ಕೆ ಕರಗವಳನೆಱೆದ ಚಂದ್ರಕಾಂತದ ಕರಗದ ಹಿಮಶಿಶಿರಸುರಭಿವಾರಿಯಿಂ ಕರತಲಪ್ರಕ್ಷಾಲನಂಗೆಯ್ದು ಸುಗಂಧಭಂಡಾರಿಗರ್ ವಿರಚಿಸಿ ತಂದು ಮುಂದಿಟ್ಟ ಘನಸಾರ ಗೋಶೀರ್ಷ ಚಂದನಸಾರ ಕಾಶ್ಮೀರ ಕಾಲಾಗರು ಕಸ್ತೂರಿಕಾಸಾರ ವಿವಿಧವಿಲೇಪನಂಗಳಿಂ ಮೆಯ್ಯಂ ತಿಮಿರ್ದು ಯಕ್ಷಕರ್ದಮದ ಕೈಘಟ್ಟಿಯೊಳಂಗಯ್ಯಂ ತಿಮಿರ್ದು ಮಾಲೆಗಾಱರ್ತಂದವಟೈಸಿದ ಸುರಭಿಪರಿಮಳಾಸವಾಸಕ್ತಭ್ರಮದ್ಭ್ರಮರಮಾಲಾವಿರಾಜಿತ ಸುಮನೋಹರಸುಮನೋಮಾಲೆಗಳಂ ತುಱುಂಬಿಕೊಂಡು ಅಡಪವಳ್ಳಂನೀಡಿದಾರ್ದ್ರಪೂಗೀಫಲಂಗಳುಮಂ ಮೃಗಮದಮಿಲಿತ ಖದಿರಗುಲಿಕಾಬಹುಲಕರ್ಪೂರಪರೀತ ಮುಖವಾಸಂಗಳುಮಂ ಕರ್ಪೂರ ನಾಗವಲ್ಲೀ ಧವಳಲಲಿತಂಗಳುಂಮಂ ದಿಕ್ಕರಿಕರಾನುಕಾರಿ ಕಮನೀಯಂಗಳುಮಂ ವೀರಲಕ್ಷ್ಮೀನಿವಾಸತೋರಣಸ್ತಂಭಾಯಮಾನಂಗಳುಮಪ್ಪ ಸುಕೃತಿಜನಸುಕರಕರಂಗಳುಮಂ ಸೂೞಿಸೂೞಿದೆ ನೀಡೆ ತಂಬುಲಂಗೊಂಡು ತಾಂಬೂಲರಾಗದ್ವಿಗುಣಿತವದನಾರವಿಂದಾಮೋದರಾಗಿ ಪಕ್ಕದುಂಡ ಪರಿಜನಕ್ಕೆಲ್ಲಂ ಕರ್ಪೂರದ ತಂಬುಲಂಗುಡಲ್ವೇೞ್ದು ಕಂತುಕೈಗೆಯ್ವಂತೆ ನೆಱೆ ಕೈಗೆಯ್ದು ಮದನಮೂರ್ತಿ ಕತಿಪಯಪದಂಗಳಿಂ ವಿಹರಿಸಿ ದುಕೂಲಪ್ರಚ್ಛದಾಚ್ಛಾದಿತಸುಖಾಸನಾಸೀನಂ ಮಣಿಮಯಾಸನಮನವಷ್ಟಂಭಿಸಿ ಸಮುಚಿತಪ್ರದೇಶದೊಳ್ ಕುಳ್ಳಿರ್ದ ಯಶೋಭದ್ರಾಂಬಿಕೆಯ ಮೊಗಮಂ ನೋಡಿ

ಎಮ್ಮನುಜನ ದಿವ್ಯಾಕೃತಿ
ಯುಮ್ಮಹಿಮೆಯುಮಖಿಲಸೌಖ್ಯಮುಂ ಭೋಗಮುಮೆಂ
ದುಮ್ಮನುಜರಳವಿಯಲ್ತೆಂ
ತುಮಲ್ತೆಂಬಂತುಟಾದುದಿದು ಚಿಂತೆವೊಲಂ || ೩೩ ||

ವ|| ಸಂಪೂರ್ಣಚಂದ್ರಂಗೆ ಕಳಂಕಮಾದಂತೆ ನಿಜಕುಲಗಗನಶರಚ್ಚಂದ್ರಂಗಾತಂಕಕಲಂಕ ಮಾದತ್ತದೆಂತೆನೆ

ಪದುಳಂ ಪೀಠಾಗ್ರದೊಳ್ಕುಳ್ಳಿರಲಱಿಯದುದುಂ ಕಣ್ಣನೀರಾಗಳುಂ ಸೋರ್ವುದುಮಂತುಂಬಾಗಳೊಂದೊಂದಗುಱನುಗುೞತುಂ ನುಂಗುತುಂ ಕ್ಲೇಶದಿಂದುಣ್ಬುದುಮುಂತುಂ ಬೆರ್ಚಿದೊಂದಂದದೊಳೆರಸದುದುಂ(?)ವ್ಯಾಧಿಯಾದಂದಮಾಗಿರ್ದುದಿದಂ ಸದ್ವೈದ್ಯರಿಂ ನೋಡಿಸಿ ಪಱಿಪಡಿಸಿಂ ನಿಶ್ಚಯಂ ಬೇಗಮಿಾಗಳ್|| ೩೪ ||

ಎಳವೆಯೊಳೆ ತನ್ನ ವೈರಿಯ
ಮೊಳೆಯುಮನೊಗೆತಪ್ಪ ರುಜೆಯ ಮೊಳೆಯುಮನೊಗೆದಾ
ಗಳೆ ಕಳೆಗೆ ಗೆಡ್ಡೆಗಟ್ಟಿದ
ಬೞಿಕ್ಕೆ ಕಳೆಯಲ್ಕೆ ಬಾರದೆಂಬುದುಮಾಗಳ್ || ೩೫ ||

ವ|| ಯಶೋಭದ್ರೆ ದರಹಸಿತವದನಸರಸಿರುಹೆಯಾಗಿ ದೇವ ನಿಮ್ಮ ತಮ್ಮನಂದಮಂ ಬಿನ್ನಪಂಗೆಯ್ವೆನವಧಾರಿಸಿಮೆಂತೆಂದೊಡೀತಂ ಪುಟ್ಟಿದಂದು ಮೊದಲಾಗಿಂದುವರಂ ಸ್ವಾಮಿಭೃತ್ಯಸಂಬಂಧದಂದಮುಮನೊಡೆಯರ್ ಬಡವರೆಂಬ ದೇಶಭಾಷೆಯುಮಂ ಪಗಲಿರುಳೆಂಬ ಭೇದಮುಮನಾಶಬ್ದಮೆಂಬುದುಮಂ ದುಃಖಶೋಕಮೆಂಬ ಪಂಬಲುಮಂ ಮನೆಮನೆವಾರ್ತೆಯೆಂಬ ಚಿಂತೆಯುಮಂ ಚಾಮರದ ಗಾಳಿಯಲ್ಲದೆ ಗಾಳಿಯುಮನೇನೆಂದುಮಱಿಯದ ಪರಮ ಗರ್ಭಸುಖಿ ಸುಖಸಂಕಥಾವಿನೋದಂಗಳಿಂ ಮಣಿಮಾಡದ ನೆಲೆಯನಿೞಿಯದೆ ನಿಶ್ಚಿಂತಮಿರ್ಪನಿಂದು ನೀಮಿಲ್ಲಿವರಂ ಬಂದೊಡೆ ತಾನಿಲ್ಲಿವರಂ ಬಂದನಿಂತು ನಿಮ್ಮಾಬಂದಱ್ತಿಯೊಳಱ್ತಿಯಿಂ ಮಂಗಳಾರ್ಥಮೆಂದು ಸಿದ್ಧಾರ್ಥದ ಸೇಸೆಗಳನಿಕ್ಕಿದೊಡೆತ್ತಾನುಮುದಿರ್ದು ಬಿರ್ದಸಿತಸರ್ಷಪಸ್ಪರ್ಶನಿಘರ್ಷಣದಿಂ ಪದುಳಮಿರಲಱಿಯದೆ ಚಲಾಸನನಾಗಿರ್ಕ್ಕುಂ ದೀಪ್ಯಮಾನಾನೂನಶೋಣಮಾಣಿಕ್ಯದೀಪಂಗಳ ಬೆಳಗನಲ್ಲದೆ ದೀಪಂಗಳ ಬೆಳಗಿನ ರೂಪಂ ಕಂಡಱಿಯದನಿಂದು ದೇವರ್ಬಂದೊಸಗೆಯೊಳ್ ಮಂಗಳಾರತಿಗಳಂ ಬೆಳಗಿದೊಡವಱ ಬೆಂಕೆಗೆ ಕಣ್ಣನೀರ್ಸುರಿಯುತ್ತಿರ್ಕ್ಕುಂ ಚಂದ್ರಕಾಂತ ಪಾಷಾಣ

ನಾಲಿಕೇರಸಹಕಾರೇಕ್ಷುರಸಪ್ರವಾಹದಿಂ ಬೆಳೆದು ಮಗಮಗಿಪ ಕರ್ಪೂರಗಂಧಶಾಲ್ಯಕ್ಷತಂಗಳಂ ಮುನ್ನಿನ ದಿವಸಮೆಮ್ಮ ಗೃಹೋದ್ಯಾನವನದ ಕನಕ ಸರೋರುಹಂಗಳೆ ಸಟ್ಗಿಳೊಳಗೆ ತೀವಿ ಪೊಯ್ದು ಸೂತ್ರಾವೇಷ್ಟಿತ ಮಾತ್ರಂಗಳಾಗಿ ಮಾಡಿ ಮಱುದಿವಸಂ ಪುಷ್ಪವಾಸನೆಯು ಮೆಲ್ಪಿನ ತಣ್ಪಿನ ಕಂಪಿನಲ್ ಪೊಂಪುೞಿವೋಗುತ್ತಿರ್ದ ತಂಡುಲಂಗಳಂ ಕಳೆದುಕೊಂಡು ಬಾಗಿದೋಗರಮನಾರೊಗಿಸುವಂ ನೀಮಿಂದು ಬಂದೊಡವು ನೆಱೆಯವಾಗಿ ಮುತ್ತಿನೋಗರದಕ್ಕಿಯಂ ಬೆರಸಿ ಬಾಗಿದ ಕಾರಣದಿಂ ಪೂರ್ವವಾಸನಾಗುಣದಿಂ ಪುಷ್ಪವಾಸನೆಯಕ್ಕಿಯಕೂೞನುಣ್ಗುಮುೞಿದಕ್ಕಿಯ ಕೂೞನುಗುೞುತ್ತಿರ್ಕುಂ ತನ್ನ ಪರಿಚಾರಕಜನದ ವಧೂಜನದ ಪ್ರಸಂಗಮನಲ್ಲದುೞಿದ ಜನದ ಸೋಂಕುಮಂ ಪ್ರಸಂಗಮುಮಂ ಎಂತುಮೆಂದಱಿದವನಲ್ಲಂ. ದೇವರಿಂದಿಲ್ಲಿಗೆ ಬಿಜಯಂಗೆಯ್ದೊಡೆ ಜನಸಂಕೀರ್ಣ್ಣಪ್ರಸಂಗಮಾಗಿರ್ದುದಱಿಂದಿನಿಸಾನುಂ ಬೆರ್ಚಿದಂತೆರಸದಂತಾಗಿರ್ಕುಮಿಂತಾವ(?) ತೆಱದೊಳಂ ಕಲ್ಯಾಣಶರೀರಿಯೆಂಬುದು ಮರಸನಾತನ ವಿಭೂತಿಗಾಶ್ಚರ್ಯಂಬಟ್ಟು

ಸುಕುಮಾರನೆಂಬ ಪೆಸರೀ
ಸುಕುಮಾರಂಗೀಸಮಸ್ತಧಾರಿಣಿಯೊಳ್ ಸಾ
ರ್ಥಕಮಾದುದೆಂದು ನಾನಾ
ಪ್ರಕಾರದಿಂದಂ ಪ್ರಶಂಸೆಗೆಯ್ದಂ ಭೂಪಂ ॥ ೩೬ ॥

ವ॥ ಆ ಪ್ರಸ್ತಾವದೊಳ್ ಯಶೋಭದ್ರಾಂಬಿಕೆ ದಿವ್ಯಮಣಿಗಣಾಭರಣಂಗಳಂ ದಿವ್ಯವಸ್ತ್ರಂಗಳುಮಂ ತಂದು ಮುಂದಿಟ್ಟು ನಿಂದು ನಿಮ್ಮ ತಮ್ಮನ ಭಕ್ತಿಯನವಧಾರಿಸಿಮೆಂಬುದುಮರಸನವರ ಶಕ್ತಿಗಂ ಭಕ್ತಿಗಂ ಮೆಚ್ಚಿ ತನ್ನರಮನೆಯೊಳಗನೇಕವಸ್ತುವಾಹನಂಗಳನಾಗಳೆ ತರಿಸಿಕೊಟ್ಟು ಸುಕುಮಾರಂಗೆ ತಾನವಂತೀಶ್ವರನಪ್ಪುದಱಿನವಂತಿಸುಕುಮಾರನೆಂದು ಪೆಸರನಿಟ್ಟು ಪೂಜಿಸಿ ಪಿರಿದುಬೇಗಮಿರ್ದೊಡೆ ತಮ್ಮಂಗುಮ್ಮಳಿಕೆಯಕ್ಕುಮೊಳಗಣ್ಗೆ ಪೋಗವೇೞ್ಮೆಂದು ತಾನಾತ್ಮೀಯರಾಜಭವನಕ್ಕೆ ಪೋದನಿಂತು

ದಿವಿಜೇಂದ್ರಂಗೆತ್ತಲುಂ ವೈಭವದೊಳತನುವಿಂಗೆತ್ತಲುಂ ರೂಪಿನೊಳ್ ಕೈ
ರವಮಿತ್ರಂಗೆತ್ತಲುಂ ಕಾಂತಿಯೊಳುರಗವರಂಗೆತ್ತಲುಂ ಭೋಗದೊಳ್ ವೈ
ಶ್ರವಣಂಗೆತ್ತೆತ್ತಲುಂ ವಿತ್ತದೊಳಧಿಕನೆನುತ್ತಿರ್ಪಿನಂ ಸಂದನಿಂತೀ
ಲವಣಾಂಭೋರಾಶಿವೇಳಾವಲಯಿತಧರಣೀಚಕ್ರದೊಳ್ ತತ್ಕುಮಾರಂ ॥ ೩೭ ॥

ವ॥ ಇಂತು ಪಲವುಕಾಲಮಿಷ್ಟವಿಷಯಕಾಮಭೋಗಂಗಳನನವರತಮನುಭವಿಸುತ್ತುಂ ಸುಖಮಿರ್ಪುದುಮಿತ್ತಲೊಂದುದಿವಸಮಾಷಾಢಮಾಸದ ಶುಕ್ಲಪಕ್ಷದ ಚತುರ್ದಶಿಯೊಳಪರಾಹ್ಣವೇಳೆಯೊಳ್ ಸುಕುಮಾರಸ್ವಾಮಿಗೆ ಮಾವಂದಿರಪ್ಪ ವಿಶದಯಶೋಭದ್ರರೆನಿಸಿದ ಯಶೋಭದ್ರಸ್ವಾಮಿಗಳೆಂಬ ಪರಮಾವಧಿಜ್ಞಾನಿಗಳಾ ಭವ್ಯವರಪುಂಡರೀಕನ ಭವ್ಯತೆಯು ಕಾಲಮನಱಿದಾತನ ಪೂರ್ವೋಪಾರ್ಜಿತ ಪುಣ್ಯಸಂಪದಮೆ ಸಾರ್ಚಿದಂತೆ ಯೋಗಸಾರ್ಚಿತಬಂದು (?) ತತ್‌ಗೃಹೋದ್ಯಾನವನಮಧ್ಯಪ್ರದೇಶದೊಳ್ ನಿತ್ಯಪೂಜಾಖಂಡಿತಮಪ್ಪ ನಿತ್ಯಮಂಡಿತಜಿನಾಲಯಮಂ ಕಂಡು ಬಲಗೊಂಡು ದರ್ಶನಸ್ತುತಿಗೆಯ್ದು ಯೋಗಂಗೊಂಡಿರ್ಪುದುಂ ತದಾಗಮನವೃತ್ತಾಂತಮಂ ತದ್ವನಪಾಲಕರಱಿಪೆ ಕೇಳ್ದು ಯಶೋಭದ್ರೆ ನಾನಾವಿಧಾರ್ಚನೆಗಳ್ವೆರಸು ಬಂದು ದೇವರನರ್ಚಿಸಿ ಭಟ್ಟಾರಕರಂ ಬಂದಿಸಿ ಮುನ್ನೆ ತನಗೆ ತನಯೋತ್ಪತ್ತಿಯುನಱಿಪಿದಭಿನಂದನಮುನೀಶ್ವರರಾದೇಶಮನಱಿವಳಪ್ಪುದಱಿಂ ಋಷಿರೂಪಕಮಾಪ್ರವೇಶದೊಳಿರ್ಪ್ಪಿರವಸಿಚ್ಛೆಯ್ಸದೆ ಭಟ್ಟಾರಕರೆ ನೀಮಿಲ್ಲಿರಲ್ವೇಡ ಮತ್ತೊಂದೆಡೆಗೆ ಬಿಜಯಂಗೆಯ್ಯಿಮೆಂಬುದುಮಾ ಮಹಾಮುನೀಶ್ವರರ್

ಯೋಗಿನ ದಿವಸಂ ಸಾರ್ಚಿದು
ದಾಗಿ ಜಿನೇಂದ್ರಾಗಮೋಕ್ತಿಯಿಂದಾಮೀಗಳ್
ಬೇಗಂ ಚಾತುರ್ಮಾಸದ
ಯೋಗಂ ಕೈಕೊಂಡೆಮೆಂತು ಪೋಪೆಮೊ ಪೇೞಿಂ ॥ ೩೮ ॥

ವ॥ ಎಂಬುದುಮಾ ಕಾಂತೆ ಚಿಂತಾಕ್ರಾಂತೆಯಾಗಿ ತಾನಧಿಗಮಸಮ್ಯಗ್ದೃಷ್ಟಿಯಪ್ಪುದಱಿನದಕ್ಕೇನುಮೆನಲಱಿಯದೆ ನಿಮ್ಮಡಿ ನೀಮೀ ಚಾತುರ್ಮಾಸಮಿಲ್ಲಿರ್ಪನ್ನೆಗಂ ಸ್ವಾಧ್ಯಾಯಾಧ್ಯಯನಾನುಷ್ಠಾನನಿಯಮದಿಂ ಮೋನಂಗೊಂಡಿ

ರ್ಪುದಿದಂ ನಿಮ್ಮನಾಂ ಕಯ್ಯನೊಡ್ಡಿ ಬೇಡಿದೆನೆಂಬುದುಂ ಮುನೀಶ್ವರರೇಗೊಂಬುದುಂಯಶೋಭದ್ರೆಯುಂ ನಿಶ್ಚಿಂತಾಂತರಂಗೆಯಾಗಿ ಸಂತೊಸದಿಂ ನಿಜಾವಾಸಕ್ಕೆ ಪೋದಳಿತ್ತಲಾ ಮುನಿಜನವನಕೋಕಿಳನಾ ಗೃಹೋದ್ಯಾನವನದೊಳ್ ಮೇಘಾಗಮ ಕೋಕಿಲಮೆಂತಂತಾ ಮೇಘಾಗಮದೊಳ್ ಮೌನವ್ರತದೊಳಿರ್ದು ಕಾರ್ತಿಕ ಮಾಸದ ಪೌರ್ಣಮಿಾದಿನದೊಳ್ ಸುಕುಮಾರನ ಮೋಹಬಂಧದ ಬಳ್ಳವಳ್ಳಿಯ ತೊಡರ್ಪಂ ಪಱಿಪಡೆ ಬಿಡಿಸುವಂತೆ ಯೋಗವಿಡಿಸಿ ತಜ್ಜಿನೇಂದ್ರಗೇಹದೊಳರ್ಧ ರಾತ್ರದೊಳ್ ಸ್ವಾಧ್ಯಾಯಂಗೊಂಡು ತ್ರಿಲೋಕ ಪ್ರಜ್ಞಪ್ತಿಯಂ ಪರಿವಡಿಗೆಯ್ವಾಗಳ್

ಅಂಬುದನಿನದಾಡಂಬರ
ಮಂಬರದೊಳಳುಂಬಮಾಗಳೆಸೆದಪುದೆನೆ ಬೇ
ಗಂ ಬಳ್ವಳನೆಸೆದುದು ಭೋ
ರೆಂಬಿನಮಾ ಮುನಿಮುಖಾಭ್ರವಿಭ್ರಮನಿನದಂ || ೩೯ ||

ಎಸೆದಿರೆ ಲೋಕವಿಭಾಗ
ಪ್ರಸರಪ್ರವಿಭಾಗಮಂ ಸವಿಸ್ತರಮುಭಿವ
ರ್ಣಿಸಲಸದಳಮಿನಿಸಂ ಸೂ
ಚಿಸುವೆಂ ಕರಣಾನುಯೋಗಸಾಗರಲವಮಂ || ೪೦ ||

ನುತವೇತ್ರಾಸನಝಲ್ಲರೀಮೃದುಮೃದಂಗಾಭಂ ತ್ರಿವಾತಾಭಿವೇ
ಷ್ಟಿತಮುತ್ಪತ್ತಿಲಯೇತರಂ ಸಕಲಜೀವೋತ್ಪತ್ತಿಸಂಸ್ಥಾನಮೂ
ರ್ಜಿತಮತ್ಯಾಯತಮಪ್ರಮೇಯಕಮಧೋಮಧ್ಯೋರ್ಧ್ವಭೇದಂ ಜಗ
ತ್ತ್ರಿತಯಂ ನಿಂದುದು ತಾನನಾದ್ಯನಿಧನಂ ಸ್ವಾಭಾವಿಕ ನ್ಯಾಯದಿಂ || ೪೧ ||

ವ|| ಇಂತಕೃತ್ರಿಮಮುಂ ಷಡ್ದ್ರವ್ಯಸಂಕೀರ್ಣಮುಂ ಚತುರ್ದಶರಜ್ಜೂತ್ಸೇಧಮುಮಪ್ಪುದದಱೊಳಧೋಲೋಕಮೆಂಬುದು ಚಿತ್ರೆಯೆಂಬ ಧಾತ್ರಿಮೊದಲ್ಗೊಂಡು ಕೆೞಗಶೀತಸಹಸ್ರೋತ್ತರಲಕ್ಷಯೋಜನಬಾಹುಲ್ಯಮನಾಂತು ರತ್ನಪ್ರಭೆಯೆಂಬ ಪೃಥ್ವಿಯಿಕ್ಕುಮಾ ಪೃಥ್ವಿ ವಜ್ರಖರ ಪಂಕ ಜಲಬಹುಳಭಾಗದಿಂ ತ್ರಿವಿಧಮಕ್ಕು

1 ದಶಧಸೂತ್ಸೇಧಮಕ್ಕುಂ (ಗ) 2 ಉತ್ಕೃಷ್ಟಸ್ಥಿತಿ ಆಯುಷ್ಯಪ್ರಮಾಣಮಕ್ಕುಂ (ಗ)

ಮಲ್ಲಿ ಖರಭಾಗಂ ಪದಿನಾಱುಸಾಸಿರಯೋಜನಂ ಪಂಕಭಾಗವೆಣ್ಬತ್ತನಾಲ್ಕು ಸಾಸಿರಯೋಜನಂ ಜಲಬಹುಲಭಾಗವೆಣ್ಬತ್ತುಸಾಸಿರಯೋಜನಮಕ್ಕುಮವಱೊಳ್ ಖರಭಾಗಪಂಕಭಾಗದೊಳಗೆ ಭವನಾಮರಲೋಕಮಿರ್ಕ್ಕುಮಲ್ಲಿಯ ಸುರನಾಗವಿದ್ಯುತ್ಸುಪರ್ಣಾಗ್ನಿವಾತಸ್ತನಿತೋದಧಿದ್ವೀಪದಿಕ್ಕುಮಾರರೆಂದು ಭವನಾಮರರ್ದಶವಿಕಲ್ಪಮಪ್ಪರ್ ಅವರ್ಗೇೞುಕೋಟಿಯುಮೆಪ್ಪತ್ತೆರಡುಲಕ್ಕೆಭವನಂಗಳುಮಕ್ಕುಮಲ್ಲಿ[1] ಖರಭಾಗದೊಳ್ ನಾಗಕುಮಾರರ್ಗೆ ಮೂಱುಪಳಿತೋಪಮಮುಂ ಸುಪರ್ಣಕುಮಾರರ್ಗೆರಡುವರೆಪಳಿತೋಪಮಮುಂ[2] ದ್ವೀಪದಿಕ್ಕುಮಾರರ್ಗೆರಡು ಪಳಿತೋಪಮಮುಮುೞಿದವರ್ಗೆಲ್ಲಮೊಂದುವರೆ ಪಳಿತೋಪಮಮುತ್ಕೃಷ್ಟಸ್ಥಿತಿಯಿನಾಯುಷ್ಯಪ್ರಮಾಣಮವರ್ಗೆಲ್ಲಂ ದಶಧನೂತ್ಸೇಧಂಗಳಕ್ಕುಂ. ದ್ವಿತೀಯಭಾಗದೊಳಸುರಕುಮಾರರ್ಗೆ ಅಱುವತ್ತುನಾಲ್ಕುಲಕ್ಕೆ ಭವನಂಗಳಕ್ಕುಂ. ಪಂಚವಿಂಶತಿಚಾಪೋತ್ಸೇಧಮುಮೇಕಸಾಗರೋಪಮಾಯುಷ್ಯಮಕ್ಕುಮಲ್ಲಿಂ ಕೆೞಗೆಣ್ಬತ್ತುಸಾಸಿರಯೋಜನಾಂತರದೊಳ್ ಜಲಬಹುಳಭಾಗದೊಳ್ ಮೊದಲ ನರಕಮಲ್ಲಿಂ ಕೆೞಗೇಕರಜ್ವಂತರದೊಳ್ ಮೂವತ್ತಿರ್ಚ್ಛಾಸಿರಯೋಜನಬಾಹಲ್ಯದಿಂ ಶರ್ಕರಾಪ್ರಭೆಯೆಂಬೆರಡನೆಯ ನರಕಮಲ್ಲಿಂಕೆೞಗೇಕರಜ್ವಂತರದೊಳಷ್ಟವಿಂಶತಿಸಹಸ್ರಯೋಜನಬಾಹಲ್ಯದಿಂ ವಾಳುಕಾಪ್ರಭೆಯೆಂಬ ಮೂಱನೆಯನರಕಮಲ್ಲಿಂದತ್ತಲೇಕರಜ್ವಂತರದೊಳಿರ್ಪತ್ತುನಾಲ್ಕುಸಾಸಿರಯೋಜನಬಾಹಲ್ಯದಿಂ ಪಂಕಪ್ರಭೆಯೆಂಬ ನಾಲ್ಕನೆಯನರಕಮಲ್ಲಿಂದತ್ತಲೇಕರಜ್ವಂತರದೊಳಿರ್ಪತ್ತುಸಾಸಿರ ಯೋಜನಬಾಹಲ್ಯದಿಂ ಧೂಮಪ್ರಭೆಯೆಂಬಯ್ದನೆಯನರಕಮಲ್ಲಿಂದತ್ತಲೇಕರಜ್ವಂತರದೊಳ್ ಪದಿನಾಱುಸಾಸಿರಯೋಜನಬಾಹಲ್ಯದಿಂ ತಮಃಪ್ರಭೆಯೆಂಬಾಱನೆಯನರಕಮಲ್ಲಿಂದತ್ತಲೇಕರಜ್ವಂತರದೊಳಷ್ಟಸಹಸ್ರಯೋಜನಬಾಹುಲ್ಯದಿಂ ಮಹಾತಮಃಪ್ರಭೆಯೆಂಬೇೞನೆಯನರಕ ಮಿರ್ಕ್ಕುಮಲ್ಲಿ ಮೇಗಣ ನಾಲ್ಕುವರೆನರಕಂಗಳತ್ಯುಷ್ಣಂಗಳ್ ಕೆೞಗೆರಡುವರೆನರಕಂಗಳತಿಶೀತಲಂಗಳಕ್ಕುಮವಱೊಳೆ ಯಥಾಕ್ರಮದಿಂ ತ್ರಿಂಶಲ್ಲಕ್ಷಮುಂ ಪಂಚವಿಂಶತಿಲಕ್ಷಮುಂ ಪಂಚದಶಲಕ್ಷಮುಂ ದಶಲಕ್ಷಮುಂ ತ್ರಿಲಕ್ಷಮುಂ ಪಂಚೋನೈಕಲಕ್ಷಮುಂ ಪಂಚಲಕ್ಷಮುಂ ಬಿಲಂಗಳಕ್ಕುಮಾ ನರಕಬಿಲಂಗಳೆಲ್ಲಮೆಣ್ಬತ್ತುನಾಲ್ಕುಲಕ್ಷ

ಪರಿಪ್ರಮಾಣಮಾಗಿಯುಮಿಂದ್ರಕ ಶ್ರೇಣಿಬದ್ಧ ಪ್ರಕೀರ್ಣಕಂಗಳಿಂದು ಮೂಱು ತೆಱನಕ್ಕುಮವಱ ಮೇಗಳಟ್ಟುಗಳೊಳಿಟ್ಟ ಜೇನಪುಟ್ಟಗಳುಮಂ ಕಾಕೋಳೂಕ ಸೃಗಾಲಶಾರ್ದೂಲೋಷ್ಟ್ರಖರಮುಖಂಗಳನನುಕರಿಸುವ ಮಹಾಭೀಭತ್ಸ ಕುತ್ಸಿತೋತ್ಪತ್ತಿಸ್ಥಾನಂಗಳೊಳುತ್ಕೃಷ್ಟ ಕೃಷ್ಣನೀಲಕಪೋತಲೇಶ್ಯಾನುಬಂಧ ರೌದ್ರ ಪರಿಣಾಮಪರಿಣತರುಂ ಬಹ್ವಾರಂಭಪರಿಗ್ರಹಗ್ರಸ್ತರುಮನಂತಾನುಬಂಧಿಕ್ರೋಧ ಮಾನಮಾಯಾಲೋಭಾಭಿಭೂತರುಮಪ್ಪ ಮಹಾಪಾಪಿಜೀವಂಗಳ್ ಕಾಲು ಮೇಲಾಗಿ ನೆಲಸಿದಂತರ್ಮುಹೂರ್ತಮಾತ್ರದೊಳಗೆ ಷಟ್ಪರ್ಯಾಪ್ತಿಗಳ್ನೆಱೆದು ವಿವಿಧನಿಶಿತನಿಸ್ತ್ರಿಂಶಂಗಳ ಮೇಗೆ ಪಱಿವಱಿಯಾಗಿ ಬಿರ್ದು ಸೇದೆವಟ್ಟ ನವನಾರಕರಂ ಪುರಾಣನಾರಕರ್ಕಂಡು.

ಇಱಿ ಇಱಿ ಕಡಿಕಡಿ ಸುಡುಸುಡು
ಕೊಱೆ ಕೊಱೆ ಸೀಳ್ಸೀಳೆನುತ್ತೆ ನಾರಕರೈತಂ
ದಿಱಿವರ್ಕಡಿವರ್ಸುಡುವ
ರ್ಕೊಱೆವರ್ಸೀಳ್ವರ್ತಗುಳ್ದು ನವನಾರಕರಂ || ೪೧ ||

ವ|| ಅಂತತಿ ಕಠೋರನಿಷ್ಠುರವಚನಂಗಳಿಂ ಗಜಱಿ ಗರ್ಜಿಸುತ್ತುಂ ಸುತ್ತಿ ಮುತ್ತಿಪತ್ತಿದಾಗಳ್ ದೆಸೆಗಳೆ ನುಂಗುವಂತಾಗೆ ಆಗಸಮೆ ಮೇಲೆ ಕೆಡೆವಂತೆ ನೆಲಂ ಪೆಡಂಮುಗುಳ್ದು ಕವಿದಿಕ್ಕಿದಂತೆ ತೊಟ್ಟನೆ ಪುಟ್ಟಿದತಿಭಯದಿಂ ವಿಭಂಗಮನರಾಗಿ ಪೂರ್ವಭವಪ್ರತ್ಯಯದಿಂ ಪುಟ್ಟಿದ ವಿಭಂಗಜ್ಞಾನದಿಂದವಗತನರಕಲೋಕವೃತ್ತಾಂತರಾದಿಂಬಳಿಯಮೊರೊರ್ವರ ನೆಱಂಗಳುಮನನ್ಯೋನ್ಯಬದ್ಧವೈರಕಾರಣಂಗಳುಮಂ ಮೂದಲಿಸುತ್ತುಂ.

ಅಡಗಿನ ಕಡುವೆಸನಿಗ ತಿ
ನ್ನಡಗಂ ನಿನ್ನಡಗನೆಂದು ಪೇಸೇೞ್ವನೆಗಂ
ಪಿಡಿಖಂಡಂಗೊಂಡುಗಿಬಗಿ
ದಿಡಿ[1][ದಿ][1]ಡಿದೆಡೆವಿಡದೆ ಕೂಱುಗೊಳ್ವರ್ ಬಾಯೊಳ್ || ೪೨ ||

1 ಗಿ (ಕ)

ಅ¹ಪ್ಪಲೆ ಸೀಂ ಪರವೆಣ್ಣಳ
ನಪ್ಪುವುದನೆ ಬಯಸುತಿರ್ಪೆಯಪ್ಪೆಂದು ಕರಂ
ಚಪ್ಪರಿಸಿ ನಾರಕರ್ ತಂ
ದಪ್ಪಿಸುವರ್ಕಾಯ್ದಲೋಹಮಯಪುತ್ರಿಕೆಯಂ || ೪೩ ||

ಚುಟ್ಟಿದ ತೆಱದಿಂ ಪುಸಿಗಳ
ನುಚ್ಚುವನಿವನೆಂದು ಕಾಯ್ದ ಕರ್ಬುನದಿಂದಂ
ಚುಚ್ಚಿ ಪೆಡತಲೆಯ ತೂಂತಿಂ
ದುಚ್ಚುವರಿಕ್ಕುಳಿಸಿ ನಾರಕರ್ ನಾಲಗೆಯಂ . || ೪೪ ||

ಮಧುಮದ್ಯದ ಬಸನಿಗ ಕುಡಿ
ಮಧುಮದ್ಯಮನೆಂದು ಸಪ್ತಧಾತುದ್ರವಮಂ
ವಿಧಿಯಿಂ ತಂದೆಱೆವರ್ ಸ
ಪ್ತಧಾತುಗಳ್ ಕರಗುವಿನೆಗ ವಿಕ್ರೆಯೆಯಿಂದಂ || ೪೫ ||

ಮೇಳಿಸಿ ಜೀವಾವಳಿಗಳ
ತಾಳಿಸುವರನಚ್ಚಗೆಂಡದೊಳ್ ಕಾವಲಿಯೊಳ್
ತಾಳಿಸುವರ್ ಸಲೆ ಕಳ್ಳಂ
ಗಾಳಿಸುವರ ನೆಣದ ನೆತ್ತರಂ ಗಾಳಿಸುವರ್ || ೪೬ ||

ಪೆಱರಂ ಛಿದ್ರಿಸುವವರಂ
ಕೊಱೆಕೊಱೆದಿರ್ದೆಗ²ಬ್ಬ²ಲಪ್ಪಿನಂ ಛಿದ್ರಿಸುವರ್
ಮಱುಗುವ ತೃಷ್ಣಾತುರರಂ
ಮಱುಗಿಸುವರ್ನೆಱೆಯೆ ಮಱುಗಿ ಕುದಿವೆಣ್ಣೆಗಳೊಳ್ || ೪೭ ||

ವ|| ಮತ್ತಮತಿವಿಕಟಶಾಲ್ಮಲಿವಿಟಪಿಯೊಳಿದಿರುಂ ಬೞಿಯುಮುಚ್ಛ್ರ ಪುಮಂ ಕೊಳ್ಳಿಯೊಳ್ ಪಿರಿದುಂ ಚುಚ್ಚುವುದುಂ ಕಾಯ್ದೋಡಿನೊಳ್ಸುರಿವುದುಂ

---

1 ಱ (ಕ) 2 ಚ್ಚ (ಗ)

ಮೊರ್ಮುರಿಗೆ ಕರಿವುದುಂ ಚಿಮಿಚಿಮಿಸೆ ತಾಳಿಸುವುದುಂ ಇಕ್ಷುಯಂತ್ರಂಗಳಿಂ ಪಿೞಿವುದುಂ ಬಸಿದ ದಸಿಯೊಳ್ ತೆಗೆವುದುಂ ಕಬ್ಬುನದ ದಬ್ಬಣಂಗಳಂ ದಬ್ಬುಕದ ಡಂಗೆಗಳಿಂ ಬೆರಲ್ಗಳೊಳಡಂಗೆ ಬೆಟ್ಟುವುದುಂ, ಪಲ್ಗಳಂ ನುರ್ಗುಗುಟ್ಟುವುದುಂ ಕೈಗಳಂ ಗೊಟ್ಟಂಗೊಱೆವುದುಂ ಬಾಯಂ ಬಳ್ಳಂಗೊಱೆವುದುಂ ಕಯ್ಗಾಣದೊಳಿಕ್ಕಿ ಗಾಣವಾಡುವುದುಂ ಕರುಳಂ ತೋಡುವುದುಂ ಸುಱುಸುಱನೆ ಬಡಿತಂ

ಱ ಱ

ಗಾಸುವುದುಂ ಕರ್ಕಶ ಕ್ಷಾರವಾರಿಯಂ ತಂದು ಸಱಿಸಱನೆ ಪೂಸುವುದುಂ

ಱ ಱ

ಮಿಡುಕೆಮಿಡುಕೆ ಪುಟಪಾಕದಿಂ ಸುಡುವುದುಂ ಮುಂಬರಂಬರಂ[1]ಗು[1]ಂಗವಿಡುವುದುಂ ತಳ್ತಳಗುದಿದೆಣ್ಣೆಯೊಳ್ ಬಟಿಲೆತೆಗೆವುದುಂ ಕೈದುಗಳೊಳೂಱೆ ನೆಗಪುವುದುಂ ಸಂಧಿಸಂಧಿಗಳಂ ಗಂಟುಗಡಿವುದುಂ ತಡಂಗಡಿವುದುಂ ಅಸಿಪತ್ರವನದೊಳೊಳಿಕ್ಕೆ ಗುರ್ದುವುದುಂ ಪರಿವ ವೈಕರಣಿಯ ಮಡುಗಳೊಳ್ ಪುಡುಕುನೀರರ್ದುವುದುಂ ಮುಗುಱ್ದು ಪೂೞುವುದುಂ ಸೌಳನೆ ಸೀಳ್ವುದುಂ ಕುಕ್ಕುಟಗುದಿವ ವಜ್ರದ ಮೂಷೆಯೊಳಿಕ್ಕಿ ಕರಗಿಸುವುದುಂ ನಟ್ಟು ಪರಗುವುದುಂ ಕೊಂದು ಕೂಗುವುದುಂ ತಿಂದುತೇಗುವುದುಂ ಎಂದಿವು ಮೊದಲಾದ ಪಲವುಂ ತೆಱದ ದಾರುಣೋದಗ್ರನಿಗ್ರಹವಿಗ್ರಹಕ್ಕೆ ತಮ್ಮ ವಿಗ್ರಹಂಗಳನೊಡ್ಡಿ ಶಾರೀರಂ ಮಾನಸಂ ಕ್ಷೇತ್ರಜಂ ಪರಸ್ಪರೋದೀರಿತಂ ಸಂಕ್ಲಿಷ್ಟಾಸುರೋದೀರಿತಂಗಳೆಂಬಪಂಚಪ್ರಕಾರದುಃಖಂಗಳನನೇಕಪ್ರಕಾರದಿನನುಭವಿಸುತ್ತಮರ್ಧನಿಮಿಷಮಾತ್ರಮುಪ್ಪೊಡಮುಸಿರ್ವ[2] [ತ್ತಂ][2] ಬಡೆಯದೆ ಮುನ್ನೆ ತಮ್ಮ ನೆರಪಿದಾಯುಷ್ಯಾಂತಂಬರಂ ಸಣ್ಣಿಗೆಯೊಳ್ ಸಣ್ಣಮಾಗರೆದು ಸಣ್ಣಿಸಿದೊಡಮುವಂದಿರ ವೈಕ್ರಿಯಕಶರೀರಂಗಳ್ ಪಾದರಸದ ಮಾರ್ಗದಿಂ ಪತ್ತುತ್ತುಮಿರ್ಕುಂ. ಮೊದಲನಾರಕರ ದೇಹೋತ್ಸೇಧಮೇೞುಬಿಲ್ಲು ಮೂಱುಮೊೞನುಮಾಱಂಗುಲಮುಮಕ್ಕುಮಲ್ಲಿಂದತ್ತಲ್

ಕ್ರಮದಿಂ ತದ್ವಿಗುಣದ್ವಿಗು
ಣಮವರ ದೇಹಪ್ರಮಾಣದುತ್ಸೇಧಂ ದುಃ
ಖಮನಂತಗುಣಂ ಕೇಳ
ಲ್ಕಮಾನುಷಂ ನೆಱೆಯೆ ಪೇೞಲದನಾನಱಿಯೆಂ ॥ ೪೮ ॥

---

1 ಚುಂ (ಗ) 2 ತಂ (ಕ)

ವ॥ ಮತ್ತಮಾ ನಾರಕರೆಲ್ಲಂ ಹುಂಡಮುಂಡಸಂಸ್ಥಾನರುಮತಿ ವಿರೂಕ್ಷ
ಕೃಷ್ಣವರ್ಣರುಮತಿದುರ್ಗಂಧರುಂ ನಪುಂಸಕರುಂ ಜಘನ್ಯದಿಂ ದಶಸಹಸ್ರವರು
ಷಾಯುಷ್ಯಮುಮುತ್ತರಾನುಕ್ರಮೋತ್ಕೃಷ್ಟದಿಂ

ಕ್ರಮದಿಂದೇೞುಂ ನರಕದೊ
ಳಮೊಂದು ಮೂಱೇಳುಪತ್ತು ಪದಿನೇೞು ನಿತಾಂ
ತಮಿದಿಪ್ಪತ್ತೆರಡು ಮೂವ
ತ್ತಮೂಱು ಸಂಖ್ಯಂಗಳಾಯುರಂಭೋನಿಧಿಯೊಳ್ ॥ ೪೯ ॥

ತರದಿಂದಮಸಂಜ್ಞಿಯುಮಾ
ಸರೀಸೃಪಮುಂ ವಿಹಗಮುಂ ಭುಜಂಗಮುಮುಂ ಕೇ
ಸರಿಯುಂ ಸ್ತ್ರೀಯುಂ ಮೀನುಂ
ಪುರುಷನುಮುದಯಿಸುಗುಮೇೞು ನರಕಂಗಳೊಳಂ ॥ ೫೦ ॥

ವ॥ ಆ ನರಕಭೂಮಿಗಳೇೞಱುಂ ಕೆೞಗೇಕ ರಜ್ಜ್ವಂತರದೊಳನೇಕದುಃಖನಿ
ಗೋದಮಪ್ಪ ನಿತ್ಯನಿಗೋದಂ ತಮೋಮಯಮಾಗಿರ್ಕ್ಕುಮಲ್ಲಿ ಸೂಕ್ಷ್ಮಬಾದರ
ಪರ್ಯಾಪ್ತಕಾಪರ್ಯಾಪ್ತಕಭೇದದಿಂ ಸೂಕ್ಷ್ಮವನಸ್ಪತಿಕಾಯಂಗಳಂತರ್ಮು
ಹೂರ್ತದೊಳಱುವತ್ತಱುಸಾಸಿರದ ಮೂನೂಱಮೂವತ್ತಾಱುಸೂೞಲ್ಲಿಯೆ ಪುಟ್ಟು
ತ್ತುಂ ಸಾವುತ್ತುಮಿರ್ಕ್ಕುಮವಱೊಳೇಕೇಂದ್ರಿಯಂಗಳಲ್ಲದೆ ವಿಕಳೇಂದ್ರಿಯಂ
ಗಳುಂ ಸಕಳೇಂದ್ರಿಯಂಗಳುಂ ಪುಟ್ಟುವವಲ್ಲವು ಮತ್ತಮಾ ಮಧ್ಯಮಲೋಕದ
ಮಧ್ಯಮಭಾಗದೊಳ್ ಜಂಬೂದ್ವೀಪಮಿರ್ಕುಮದೊಂದು ಲಕ್ಷಯೋಜನವಿಸ್ತಾರ
ಮದಱ ನಡುವೆ ಮೂಱುಲೋಕಕ್ಕಂ ನಾಭಿಯಾಗಿರ್ದ ಮೇರುಪರ್ವತಂ ಚೆಲ್ವಿಂಗೆ
ತಾನೆ ನಾಭಿಯಂತಿರ್ದುದದು ಸಹಸ್ರಯೋಜನಬಾಹುಲ್ಯಮುಂ ತಾಳ್ದಿದ ಚಿತ್ರಾ
ವನಿಯನುರ್ಚ್ಚಿಪೋಗಿ ವಜ್ರೆಯೆಂಬ ಪೃಥ್ವಿಯತಳದೊಳ್ ಕಾಳಸೆಗೊಂಡು ನವನ
ವತಿಸಹಸ್ರಯೋಜನ ಬಾಹಲ್ಯನೋತ್ಸೇಧಂ ಮೇಗೆ ನೀಳ್ದು ಸರ್ವರತ್ನಮಯ
ಮೇಖಳೋಪವನಜಿನಭವನ ನಿತ್ಯಪೂಜಾಮರಜನ ಮನೋಹರಮಾಗಿರ್ಕುಂ
ಗಜದಂತಾದ್ರಿಗಳುಮವಱೆಡೆಯೆಡೆಯೊಳ್ ವ್ಯಂತರಾವಾಸಂಗಳುಂ ಭೋಗ

ಭೂಮಿಗಳುಂ ವಿದೇಹಂಗಳುಂ ವಿಜಯಾರ್ಧಪರ್ವತಂಗಳುಂ ನಿರಂತರಮವರಂತ
ರಾಂತರಂಗಳೊಳಿಡೆವೆಚ್ಚುತೋರ್ಕುಂ ಭರತಕ್ಷೇತ್ರದ ವಿಷ್ಕಂಭಂ ಜಂಬೂದ್ವೀಪದ
ನವತಿಶತಭಾಗಪ್ರಮಾಣಮಕ್ಕುಮಿಂತು ವರುಷಧರವಿದೇಹಂ ಗಂಗಾ ಸಿಂಧು
ಪ್ರಭೃತಿ ಕುಲನದಿಪರಿಭ್ರಾಜಿತಮಪ್ಪ ಜಂಬೂದ್ವೀಪಮನೆರಡುಲಕ್ಷಯೋಜನ
ದಗಲದಿಂ ಪರಿವೇಷ್ಠಿಸಿರ್ದುದು ಲವಣಸಮುದ್ರಮದಂ ನಾಲ್ಕುಲಕ್ಷಯೋಜನ
ದಗಲದಿಂ ಬಳಸಿರ್ದುದು ಧಾತಕೀಷಂಡದ್ವೀಪಮದನೆಂಟುಲಕ್ಷಯೋಜನದಗ
ಲದಿಂ ಸುತ್ತಿರ್ದುದು ಕಾಳೋದಕಸಮುದ್ರಮದಂ ಪದಿನಾಱುಲಕ್ಷಯೋಜನ
ಮಗಲದಿಂ ಪರಿವೃತಮಾಗಿರ್ದುದು ಪುಷ್ಕರವರದ್ವೀಪಮಾ ದ್ವೀಪಾರ್ಧದೊಳ್
ಮನುಷ್ಯಕ್ಷೇತ್ರಕ್ಕೆ ಮೇರೆಯಾಗಿ ಮಾನುಷೋತ್ತರಮಹೀಧರಮಿರ್ಕ್ಕುಮಾ
ದ್ವೀಪಮಂ ಮೂವತ್ತೆರಡು ಲಕ್ಷಯೋಜನಮಗಲದಿಂ ಸುತ್ತಿರ್ದುದು ಪುಷ್ಕರ
ವರಸಮುದ್ರಮನಱುವತ್ತು ನಾಲ್ಕು ಲಕ್ಷಯೋಜನಮಗಲದಿಂ ಸುತ್ತಿರ್ದುದು
ವಾರುಣೀವರದ್ವೀಪಮದನೊಂದು ಕೋಟಿಯುಮಿಪ್ಪತ್ತೆಂಟುಲಕ್ಷಯೋಜನ
ಮಗಲದಿಂ ಬಳಸಿರ್ದುದು ವಾರುಣಾರ್ಣವಮದನೆರಡು ಕೋಟಿಯುಮೈವತ್ತಾ
ಱುಲಕ್ಷಯೋಜನಮಗಲದಿಂ ಸುತ್ತಿರ್ದುದು ಕ್ಷೀರವರದ್ವೀಪಮದನೈದುಕೋ
ಟಿಯುಂ ಪನ್ನೆರಡುಲಕ್ಷ ಯೋಜನಮಗಲದಿಂ ಸುತ್ತಿರ್ದುದು ಘೃತವರದ್ವಿಪಮದ
ನಿಪ್ಪತ್ತುಕೋಟಿಯುಂ ನಾಲ್ವತ್ತೆಂಟುಲಕ್ಷಯೋಜನಮಗಲದಿಂ ಬಳಸಿರ್ದುದು
ಘೃತವರಮಹಾರ್ಣವಮದಂ ನಾಲ್ವತ್ತುಕೋಟಿಯು ತೊಂಭತ್ತಾಱುಲಕ್ಷಯೋಜ
ನಮಗಲದಿಂ ಬಳಸಿರ್ದುದಿಕ್ಷುವರದ್ವೀಪಮದನೆಣ್ಬತ್ತೊಂದು ಕೋಟಿಯುಂ
ತೊಂಭತ್ತೆರಡು ಲಕ್ಷಯೋಜನಮಗಲದಿಂ ಸುತ್ತಿರ್ದುದಿಕ್ಷುವರಮಕರಾಕರಮದಂ
ನೂಱಱುವತ್ತಮೂಱುಕೋಟಿಯುಮೆಣ್ಬತ್ತನಾಲ್ಕು ಲಕ್ಷಯೋಜನಮಗಲದಿಂ
ಸುತ್ತಿರ್ದುದು ಸುಂದರ ಸುರೇಂದ್ರವೃಂದವಂದಿತ ನಂದೀಶ್ವರವರದ್ವೀಪಮದಱ
ನಾಲ್ಕುಂ ದೆಸೆಯೊಳ್ ನಾಲ್ಕಂಜನಪರ್ವತಂಗಳುವಮಱ ನಾಲ್ಕುಂ ದೆಸೆಯೊಳ್
ಸಮಚತುರಸ್ರಂಗಳಪ್ಪ ದಿವ್ಯಸರೋವರಂಗಳ್ಪದಿನಾಱಪ್ಪುವವಱ ನಡುವೆ ದಧಿ
ಮುಖಶಿಖರಿಗಳುಮಾ ಸರೋಜಾಕರದ ಪೊಱಗಣಕೋಣೆಯೊಳಗೆರಡೆರಡು ರತಿಕ
ರಂಗಳಾಗಿ ನಾಲ್ಕುಂ ದಿಶಾಭಾಗದೊಳ್ಕೂಡಿ ಮೂವತ್ತೆರಡು ರತಿಕರಂಗಳಾಗುತ್ತಿರ

ಲಿಂತವೆಲ್ಲಂ ನಾಲ್ಕಂಜನಾದ್ರಿಗಳುಂ ಪದಿನಾಲ್ಕು ದಧಿಮುಖಂಗಳುಂ ಮೂವತ್ತೆರಡು ರತಿಕರಂಗಳೊಳವೋರೊಂದಱೊಳೊಂದುಗೆಯಾಗಿ

ಧರಣೀಧರಂಗಳೈವತ್ತೆರ
ಡಱೊಳಂ ಚೆಲ್ವುವೆತ್ತ ಜಿನಗೃಹವೈವ
ತ್ತೆರಡೊಂದೊಂದಱೊಳಕ್ಕುಂ
ವರಜಿನಬಿಂಬಂಗಳಷ್ಟ ಸಹಿತಶತಂಗಳ್ [1] ॥ ೫೧ ॥

ಬರಿಸಕ್ಕೆ ಮೂಱು ನಂದೀ
ಶ್ವರಯಾತ್ರೋತ್ಸಾಹದಿಂದಮಷ್ಟಾಹ್ನಿಕಮಂ
ಸುರರಾಜಂ ಸುರವೃಂದಂ
ಬೆರಸು ಮಹಾಮಹಮನಂತದೇಂ ಮಾಡುವನೋ ॥ ೫೨ ॥

ದೆಸೆಗಳ್ನಾನಾವಿಮಾನಂಗಳ ಬೆಳಗುಗಳಿಂ ತೀವೆ ಗೋತ್ರಾಚಲಂಗಳ್
ರಸವತ್ಸಂಗೀತನಾನಾಪಟುಪಟಹನಿನಾದಂಗಳಿಂ ತೀವೆ ಚೈತ್ಯಾ
ವಸಥಂಗಳ್ಕೂಡೆ ನಾನಾವಿಧಪರಿಕರದಿವ್ಯಾರ್ಚನಾನೀಕದಿಂ ತೀ
ವೆ ಸುರೇಂದ್ರಂ ಸಂದ ನಂದೀಶ್ವರಮಹಿಮೆಯನಾನಂದದಿಂ ಮಾಡುತಿರ್ಪಂ ॥೫೩॥

ಜಿನಪಾದಾಂಬುಜಯುಗ್ಮಭಕ್ತಿಭರದಿಂದಂ ಕಾರ್ತಿಕಾಷಾಢಫಾ
ಲ್ಗುನಮಾಸಂಗಳ ಜೊನ್ನದಷ್ಟಮಿಗಳೊಳ್ಕೈಕೊಂಡು ತತ್ಪೌರ್ಣಮಾ
ದಿನಮುಂತಾರ್ಪಿನೆಗಂ ಮಹಾಮಹಮನೆಂದುಂ ಮಾಳ್ಪಿನಿಂದ್ರಂ ಸುರೇಂ
ದ್ರನಿಕಾಯಂ ಬೆರಸೆಂದೊಡಿನ್ನದಱ ಪೆಂಪಂ ಬಣ್ಣಿಸಲ್ಬರ್ಕುಮೇ ॥ ೫೪ ॥

ವ॥ ಆ ನಂದೀಶ್ವರದ್ವೀಪಮಂ ತದ್ವಿಗುಣಯೋಜನವಿಸ್ತಾರದಿಂ ಸುತ್ತಿರ್ದುದು ನಂದೀಶ್ವರಸಮುದ್ರಮಿಂತು ದ್ವಿಗುಣದ್ವಿಗುಣವಿಸ್ತಾರದಿಂ ಪಂಚವಿಂಶತಿಕೋಟಿಕೋಟ್ಯುದ್ಧಾರ ಪಲ್ಯೋಪಮರೇಣುಸಂಖ್ಯಂಗಳಾಗಿ ಶುಭನಾಮಾಭಿರಾಮದ್ವೀಪಸಾಗರಂಗಳಸಂಖ್ಯಾತಂ ಪೋಗೆ ಕಟ್ಟಕಡೆಯಲ್ ಸ್ವಯಂಭೂರಮಣದ್ವೀಪಮಿರ್ಕುಮಾ

1. ಡಕ್ಕುಂ [?]

ದ್ವೀಪಮಧ್ಯಪ್ರದೇಶದೊಳ್ ಸ್ವಯಂಪ್ರಭಾಚಲಮಿರ್ಕುಮಿಂತಾ ಮಾನುಷೋತ್ತರ ಪರ್ವತಂ ಮೊದಲಾಗಿ ಸ್ವಯಂಪ್ರಭಾಚಲಂಬರಮೆಡೆಯೆಡೆಯೊಳಿರ್ಪ ದ್ವೀಪ ಸಮುದ್ರಂಗಳ್ ಕಲ್ಪವೃಕ್ಷವನಾಕೀರ್ಣಂಗಳಾಗಿ ಪುಟ್ಟೆ ಜಘನ್ಯಭೋಗಭೂಮಿಪ್ರಭಾ ಗಂಗಳಾಗಿರ್ಕುಂ ಮತ್ತಮಲ್ಲಿ ಸರ್ವರತ್ನಮಯ ಪ್ರಾಸಾದಂಗಳಿನಸಂಖ್ಯಾತಯೋಜನ ವಿಸ್ತೀರ್ಣಂಗಳಾಗಿ ವ್ಯಂತರದೇವಪುರಂಗಳಿರ್ಕುಮಲ್ಲಿ ಶಸ್ತ್ರಘಾತಪಾಶಬಂಧನವಿಷ ಭಕ್ಷಣಾಗ್ನಿಪ್ರವೇಶಾನ್ಯಸಮಾಧಿಯಿಂ ಸತ್ತಮನುಷ್ಯರುಂ ವ್ಯಂತರರಾಗಿ ಪುಟ್ಟೆ ಪದ್ಮಾ ದಿಸರೋವರಂಗಳೊಳಂ ಶಾಲ್ಮಲ್ಯಾದಿ ವೃಕ್ಷಂಗಳೊಳಂ ಹಿಮವದಾದಿ ಪರ್ವತಂ ಗಳೊಳಂ ಕ್ರೀಡಿಸುತ್ತಿರ್ಪರ್ ಮತ್ತಮಲ್ಲಿ ನಿಃಶೀಲವ್ರತಮನುಷ್ಯತಿರ್ಯಗ್ಜೀವಂ ಗಳ್ ದಾನಾನುಮೋದನದಿಂ ಪರಸ್ಪರವಿರೋಧವಿರಹಿತಪಂಚೇಂದ್ರಿಯತಿರ್ಯಗ್ಜಾತಿಗ ಳಾಗಿ ಪುಟ್ಟೆ ಪಲ್ಯೋಪಮಾಯುಷ್ಯಂಗಳಾಗಿರ್ಕುಮಾ ಸ್ವಯಂಭೂರಮಣದ್ವೀಪಮಂ ಬಳಸಿ ಮಹಾಸ್ವಯಂಭೂರಮಣಾಂಭೋರಾಶಿಯಿರ್ಕುಂ

ಅದಱೊಳಗಿರ್ಪ ಮಹಾಮ
ತ್ಸ್ಯದಗಲಮೈನೂಱುಯೋಜನಂ ನೀಳ ಮ
ತ್ತದಱಿಮ್ಮಡಿಯೋಜನಮಿ
ನ್ನದಱರ್ಧಾರ್ಧಪ್ರಮಾಣಮದಱುತ್ಸೇಧಂ || ೫೫ ||

ಅದಱೊಳ್ ದ್ವಾದಶಯೋಜನಂ ವಿಕಸಿತಾಂಭೋಜಾತಷಂಡಂಗಳಂ
ತದಱೊಳ್ನೋಡೆ ಸಹಸ್ರಯೋಜನಮೆನಿರ್ಕುಂ ಪದ್ಮನಾಳಂಗಳಂ
ತದಱೊಳ್ ತುಂಬಿಗಳೊಂದುಯೋಜನಮದಿರ್ಕುಂ ಭಾವಿಪಂಗೆಂದೊಡಿ
ನ್ನದಱೊಂದಂದಮನಂತುಟಂತುಟೆನಲೆಂತುಂ ಮಾನವರ್ಬಲ್ಲರೇ || ೫೬ ||

ಅಕ್ಕರ|| ಲವಣಕಾಳೋದಕಸ್ವಯಂಭೂರಮಣಂಗಳೊಳ್ಜಲಚರಂಗಳ್ಪುಟ್ಟುಗುಂ
ಲವಣವಾರುಣಿಕ್ಷೀರಘೃತಾಂಭೋಧಿಜಲಮೆಲ್ಲಂ ತಂತಮ್ಮ ಸವಿಗಳಕ್ಕುಂ
ಪ್ರವರಪುಷ್ಕರಕಾಳೋದಕ ಸ್ವಯಂಭೂರಮಣಂಗಳಚ್ಚಜಲಂ
ವಿವಿಧಭೇದಪಾರಾವಾರಂಗಳ ನೀರೆಲ್ಲಮಿಕ್ಷುರಸೋಪಮಾನಂ || ೫೭ ||

ಸಮವೃತ್ತಮಾ ಸ್ವಯಂಭೂ
ರಮಣಮಹಾಂಭೋಧಿವರೆಗಮೆಸೆದಿರ್ದೀ ಮ
ಧ್ಯಮಲೋಕಮೇಕರಜ್ಜು
ಪ್ರಮಾಣಮಕ್ಕುಂ ಪ್ರಣೂತಜಿನಪತಿಮತದಿಂ ॥ ೫೮ ॥

ಅತ್ತಲಲೋಕಾಕಾಶಂ
ಸುತ್ತಿರ್ದುದನಂತಮಲ್ಲಿ ಲೋಕದೊಳೊಂದುಂ
ಸುತ್ತಿಲ್ಲ ಭಾವಿಪಾಗಳ್
ಮತ್ತೇನುಂ ತಮ್ಮೊಳಿಲ್ಲ ತನ್ಮಯರೂಪಂ ॥ ೫೯ ॥

ವ॥ ಮತ್ತಮಿಾ ಮಧ್ಯಮಲೋಕದ ಪ್ರತಿಬದ್ಧಮಾಗಿ ಚಿತ್ರೆಯೆಂಬ ನೆಲದಿಂ ಮೇಗೇೞ್ನೂಱತೊಂಬತ್ತುಯೋಜನಾಂತರದೊಳ್ ನೂಱಪತ್ತುಯೋಜನಬಾಹುಲ್ಯ ವಿಸ್ತಾರದಿಂ ಮಂದರಮಹೀಧರದ ನಂದನಮೆಂಬ ಮೇಖಳೆಯಿಂ ಸಾಸಿರದ ನೂಱ ಪ್ಪತ್ತೊಂದುಯೋಜನಮಗಲದಿಂ ತಾರಾಗಣವಿಮಾನಂಗಳಿರ್ಕ್ಕುಮಲ್ಲಿಂ ಮೇಲೆ ದಶಯೋಜನಾಂತರದೊಳ್ ಕಿಂಚಿನ್ನ್ಯೂನಯೋಜನವಳಯದಿಂ ಸೂರ್ಯಕಾಂತ ಮಣಿಮಯಮಾಗಿ ಸೂರ್ಯವಿಮಾನಮುಮಲ್ಲಿಂ ಮೇಗಡಱನಿನಿಸಗ್ಗಳಂ ಹರಿನೀಲ ಮಯಮಪ್ಪ ರಾಹುವಿಮಾನಮುಮಲ್ಲಿಂ ಮೇಗಶೀತಿಯೋಜನಾಂತರದೊಳಡಱನಿನಿ ಸಗ್ಗಳಂ ಚಂದ್ರಕಾಂತಮಣಿಮಯಮಪ್ಪ ಚಂದ್ರವಿಮಾನಮುಮಲ್ಲಿಂ ಮೇಗೆ ನೆಗೆ ದತ್ತ ನಾಲ್ಕುಯೋಜನಾಂತರದೊಳ್ ಅಶ್ವಿನ್ಯಾದಿ ನಕ್ಷತ್ರಂಗಳಲ್ಲಿಂ ಮೇಗೆಯನಿತೆ ಯೋಜನಾಂತರದೊಳ್ ಬುಧನ ವಿಮಾನಮಲ್ಲಿಂದತ್ತಲ್ ಯೋಜನತ್ರಿತಯಾಂತರ ದೊಳ್ ಶುಕ್ರವಿಮಾನಮುಮಲ್ಲಿಂ ಮೇಲೆ ಯೋಜನತ್ರಯಾಂತರದೊಳ್ ಬೃಹಸ್ಪ ತಿಯ ವಿಮಾನಮುಮಲ್ಲಿಂದತ್ತಲ್ ಮೂಱುಯೋಜನದಂತರದೊಳ್ ಮಂಗಳನ ವಿಮಾನಮಲ್ಲಿಂ ಮೇಗನಿತೆ ಯೋಜನಾಂತರದೊಳ್ ಶನಿಯ ವಿಮಾನಮಿರ್ಕ್ಕುಂ ಚಂದ್ರಂಗೆ ಲಕ್ಷಸಂವತ್ಸರಾಧಿಕಪಲ್ಯೋಪಮಮುಮಾದಿತ್ಯಂಗೆ ಸಹಸ್ರಸಂವತ್ಸರಾಧಿಕ ಪಲ್ಯೋಪಮಮುಂ ಶುಕ್ರಂಗೆ ಸಂವತ್ಸರಾಧಿಕಪಲ್ಯೋಪಮಮುಂ ಬೃಹಸ್ಪತಿಗೆ ಪಲ್ಯೋಪಮಮುಱಿದ ಗ್ರಹಂಗಳ್ಗೆಲ್ಲಂ ಪಲ್ಯೋಪಮಾರ್ಧಂ ನಕ್ಷತ್ರತಾರಾಗಣಕ್ಕೆ

ಯುತ್ಕೃಷ್ಟದಿಂ ಪಲ್ಯೋಪಮಚತುರ್ಥಾಂಶಂ ಜಘನ್ಯದಿಂ ಪಲ್ಯೋಪಮಾಷ್ಟಮ
ಭಾಗಮಕ್ಕುಮಂತಾ ಜ್ಯೋತಿರ್ಲೋಕಜನಿತರೆಲ್ಲರುಮಯೋನಿಜನಿತರುಂ ಸಪ್ತಚಾ
ಪೋತ್ಸೇಧರುಮಣಿಮಾದಿಗುಣಗಣಾನ್ವಿತರುಮಪ್ಪರ್ ಚಂದ್ರಾದಿತ್ಯವಿಮಾನಂಗಳ್
ತಮ್ಮಿರ್ದಲ್ಲಿಂ ಕೆಳಗೆ ಸಾಸಿರದೆಂಟುನೂಱು ಯೋಜನಂಬರಂ ಕೆಲದೊಳ್ಪೈವತ್ತುಸಾಸಿ
ಯೋಜನಂಬರಂ ಮೇಲೆ ನೂಱುಯೋಜನಂಬರಂ ಆತ್ಮೀಯಸಹಸ್ರಕರಾಳಂಬನ
ದಿನಂಬರಾಂತರದೊಳಿರ್ದಳುಂಬವಾಗೆ ಬೆಳಗುತ್ತಿರ್ಕ್ಕುಮಲ್ಲದೆಯುಂ

ದಿನಕರಹಿಮಕರನಕ್ಷ
ತ್ರನಿಖಿಲತಾರಾಗ್ರಹಂಗಳತ್ಯಾಗ್ರಹದಿಂ
ಕನಕಮಹೀಧರಮಂ ನಿ
ಚ್ಚನಿಚ್ಚಮೋರಂತೆ ಸಂತತಂ ಬಲವರ್ಕುಂ ॥ ೬೦ ॥

ವ॥ ಮತ್ತಮಾ ಮಹೀಧರದ ಚೂಲಿಕಾಗ್ರದಿಂ ವಾಲಾಗ್ರಮಾತ್ರಾಂತರಿ
ಮಾಗಿ ಸಾರ್ಧರಜ್ಜ್ವಭ್ಯಂತರದೊಳ್ ಸೌಧರ್ಮೇಂದ್ರನ ಋತುವಿಮಾನಂ ನಡುವಾಗ
ಸಂಖ್ಯಾತಾಸಂಖ್ಯಾತಯೋಜನ ವಿಸ್ತೀರ್ಣಂಗಳ್ ವಿಚಿತ್ರ ಮಣಿಮಯಮರೀಚಿಮಂ
ಜರೀರಂಜಿತಾನೂನವಿಮಾನಂಗಳ್ ಕಿಕ್ಕಿಱಿಗಿಱಿದಿರೆ

ಮಾಧುರ್ಯಗೀತನಿನದಾ
ಗಾಧಂಗಳ್ ಕಲ್ಪವಲ್ಲರೀಲಲಿತಾವ್ಯಾ
ಬಾಧಂಗಳ್ ಕರಮೆಸೆವುವು
ಸೌಧರ್ಮೇಶಾನಮೆಂಬ ಕಲ್ಪಯುಗಂಗಳ್ ॥ ೬೧ ॥

ವ॥ ಆ ಕಲ್ಪಂಗಳೆರಡಕ್ಕಂ ಸೌಧರ್ಮೇಂದ್ರನುಮೀಶಾನೇಂದ್ರನುಮೆಂದಿವ
ರಿಂದ್ರರಪ್ಪರವೆರಡಱೊಳಂ ಯಥಾಕ್ರಮದಿಂ ಮೂವತ್ತೆರಡುಲಕ್ಕೆಯುಮಿರ್ಪತ್ತೆಂಟು
ಲಕ್ಕೆಯುಂ ವಿಮಾನಂಗಳಕ್ಕುಮಲ್ಲಿಯ ವೈಮಾನಿಕರೆಲ್ಲಂ ಸಪ್ತಹಸ್ತೋತ್ಸೇಧಶರೀ
ರರುಮುತ್ಕೃಷ್ಟದಿಂ ದ್ವಿಸಾಗರೋಪಮಾಯುಷ್ಯರುಂ ಕಾಯಪ್ರವೀಚಾರರುಮಪ್ಪ
ರಲ್ಲಿಂ ಮೇಲೆ ಸಾರ್ಧರಜ್ಜ್ವಂತರಾಭ್ಯಂತರದೊಳ್

ಸುಮನೋಹರಮೆನಿಪ ಸನ
ತ್ಕುಮಾರಮಾಹೇಂದ್ರಕಲ್ಪರುದ್ರಕಲ್ಪಂಗಳ್ ಸಂ
ದಮರಪಟುಪಟಹನಿನದದಿ
ನಮರೀಜನಗೀತವಾದ್ಯದಿಂ ಕರಮೆಸೆಗುಂ ॥ ೬೨ ॥

ವ॥ ಆ ಕಲ್ಪಂಗಳೆರಡಕ್ಕಂ ಸನತ್ಕುಮಾರೇಂದ್ರನುಂ ಮಾಹೇಂದ್ರನುಮೆಂದಿರ್ವ ರಿಂದ್ರರಪ್ಪಂತಾಯೆರಡಱೊಳಮನುಕ್ರಮದಿಂ ಪನ್ನೆರಡುಲಕ್ಕೆಯುಮೆಂಟುಲಕ್ಕೆ ಯುಂ ವಿಮಾನಮಕ್ಕುಮಲ್ಲಿಯ ನಿಳಿಂಪರೆಲ್ಲಂ ಷಡ್ರತ್ನಿಪ್ರಮಾಣದೇಹರುಂ ಸಪ್ತ ಸಮುದ್ರೋಪಮಾಯುಷ್ಯರುಂ ಸ್ಪರ್ಶಪ್ರವೀಚಾರರುಮಪ್ಪರಲ್ಲಿಂ ಮೇಲೆಯರ್ಧರಜ್ವ ಭ್ಯಂತರದೊಳ್

ಸುತ್ತಲುಮೆಸೆವ ಪತಾಕೆಗ
ಳೆತ್ತಂ ಮಿಳಿರ್ದೆಸೆಯೆ ಮಣಿವಿಮಾನಾವಳಿಯೊಳ್
ಪ್ರೋತ್ತುಂಗಬ್ರಹ್ಮಬ್ರ
ಹ್ಮೋತ್ತರಕಲ್ಪಂಗಳಿರ್ಕುಮತಿನಿಬಿಡಂಗಳ್ ॥ ೬೩ ॥

ವ॥ ಆ ಕಲ್ಪಂಗಳೆರಡಕ್ಕಂ ಬ್ರಹ್ಮೇಂದ್ರನಿಂದ್ರನಕ್ಕುಮಂತವೆರಡಱೊಳಂ ನಾಲ್ಕುಲಕ್ಕೆ ವಿಮಾನಮಕ್ಕುಮಲ್ಲಿಯ ದಿವಿಜರೆಲ್ಲಂ ಪಂಚರತ್ನಿಪ್ರಮಾಣರುಂ ದಶ ಪಾರಾವಾರೋಪಮಾಯುಷ್ಯರುಂ ರೂಪಪ್ರವೀಚಾರರಪ್ಪರಾ ಬ್ರಹ್ಮಕಲ್ಪದಲ್ಲಿ ಸಾರ ಸ್ವತಾದಿತ್ಯವಹ್ನ್ಯರುಣಗರ್ದತೋಯತುಷಿತಾವ್ಯಾಬಾಧಾರಿಷ್ಟರೆಂಬೆಣ್ಬರುಂಲೋಕಾಂ ತಿಕದೇವರ್ ವಸಿಯಿಸುವರೆಲ್ಲರುಮಷ್ಟಸಾಗರೋಪಮಾಯುಷ್ಯರುಂ ವಿಶುದ್ಧಲೇಶ್ಯಾ ಪರಿಣಾಮರುಮಪ್ಪರಲ್ಲಿಂದತ್ತಲರ್ಧರಜ್ವಭ್ಯಂತರದೊಳ್

ಅವಿರಳಮಣಿಮಯಭಾಸುರ
ದಿವಿಜವಿಮಾನಪ್ರತಾನಲಲಿತಂಗಳ್ ಲಾಂ
ತವಕಾಪಿಷ್ಠಂಗಳ್ ಕ
ಲ್ಪವಿಶ್ರುತಂಗಳ್ ಸುರೇಂದ್ರಸುಖನಿಲಯಂಗಳ್ ॥ ೬೪ ॥

ವ॥ ಆ ಕಲ್ಪಗಳೆರಡಕ್ಕಂ ಲಾಂತವೇಂದ್ರನಿಂದ್ರನಕ್ಕುಮವೆರಡಱೊಳಂ ಲಕ್ಷಾರ್ಧವಿಮಾನಮಕ್ಕುಮಲ್ಲಿಯ ದಿವಿಜರೆಲ್ಲಂ ಪಂಚರತ್ನಿಪ್ರಮಾಣರುಂ ಚತುರ್ದಶಸಮುದ್ರೋಪಮಾಯುಷ್ಯರುಂ ರೂಪಪ್ರವೀಚಾರರುಮಪ್ಪರಲ್ಲಿಂದತ್ತಲರ್ಧರಜ್ಜುಭ್ಯಂತರದೊಳ್

ಮಂಗಳಸುರಲಕ್ಷ್ಮೀಸದ
ನಂಗಳ್ ಮದನಪ್ರಸಾಧನೋಚಿತಸಂಸ್ಥಾ
ನಂಗಳ್ ಶುಕ್ರಮಹಾಶು
ಕ್ರಂಗಳ್ ಕಲ್ಪಂಗಳಿರ್ಕುಮವಿಕಲ್ಪಂಗಳ್ ॥ ೬೫ ॥

ವ॥ ಆ ಕಲ್ಪಂಗಳೆರಡಕ್ಕಂ ಶುಕ್ರೇಂದ್ರನಿಂದ್ರನಕ್ಕುಮಂತಾ ಎರಡಱೊಳವಾಗಿ ನಾಲ್ವತ್ತುಸಾಸಿರವಿಮಾನಮಕ್ಕುಮಲ್ಲಿಯ ದಿವಿಜರೆಲ್ಲಂ ಹಸ್ತಚತುಷ್ಟಯೋತ್ಸೇಧದೇಹರುಂ ಷೋಡಶಸಮುದ್ರೋಪಮಾಯುಷ್ಯರುಂ ಶಬ್ದಪ್ರವೀಚಾರರುಮಪ್ಪರಲ್ಲಿಂದತ್ತಲರ್ಧರಜ್ಜುಭ್ಯಂತರದೊಳ್

ಓರಂತೆ ತೊಳಗಿ ಪೊಳೆವ ಶ
ತಾರಸಹಸ್ರಾರಕಲ್ಪಯುಗಳಂಗಳ್ ಶೋ
ಭಾರಮಣೀಯಂಗಳ್ ಸುರ
ನಾರೀಕೇಳೀವಿಲಾಸವಿಸ್ಫುರಿತಂಗಳ್ ॥ ೬೬ ॥

ವ॥ ಆ ಕಲ್ಪಂಗಳೆರಡಕ್ಕಂ ಶತಾರೇಂದ್ರನಿಂದ್ರನಕ್ಕುಮಂತವೆರಡಱೊಳಮಱು ಸಾಸಿರವಿಮಾನಂಗಳಕ್ಕುಮಲ್ಲಿಯ ವೃಂದಾರಕರೆಲ್ಲಂ ಹಸ್ತಚತುಷ್ಟಯೋತ್ಸೇಧರುಂ ಅಷ್ಟಾದಶರತ್ನಾಕರೋಪಮಾಯುಷ್ಯರುಂ ಶಬ್ದಪ್ರವೀಚಾರರುಮಪ್ಪರಲ್ಲಿಂ ಮೇಗರ್ಧರಜ್ಜುಭ್ಯಂತರದೊಳ್

ಅತಿವಿಶ್ರುತಾನತಪ್ರಾ
ಣತಾಭಿಧಾನಾಭಿರಾಮಮೆನಿಸಿದ ಕಲ್ಪ
ದ್ವಿತಯಂಗಳ್ ಸುರಜನಕರ
ಹತದುಂದುಭಿಮೃದುರವಂಗಳಿಂ ರಂಜಿಸುಗುಂ ॥ ೬೭ ॥

ವ॥ ಆ ಕಲ್ಪಂಗಳೆರಡಕ್ಕಂ ಯಥಾಕ್ರಮದಿಂದಾನತೇಂದ್ರನುಂ ಪ್ರಾಣತೇಂದ್ರನು ಮೆಂದಿರ್ವರಿಂದ್ರರಪ್ಪರಲ್ಲಿಯ ಸುರರೆಲ್ಲಂ ಸಾರ್ಧತ್ರಿತಯ ಹಸ್ತೋತ್ಸೇಧರುಂ ವಿಂಶತಿ ಸಾಗರೋಪಮಾಯುಷ್ಯರುಂ ಮನಃಪ್ರವೀಚಾರರುಮಪ್ಪರಲ್ಲಿಂದತ್ತಲರ್ಧರಜ್ಜುಭ್ಯಂ ತರದೊಳ್

ತಳ್ಪತಲಶೋಭಿತಂಗಳ
ನಲ್ಪಸುಖೈಕಾಸ್ಪದಂಗಳತಿಲೀಲಾಸಂ
ಕಲ್ಪಂಗಳಾರಣಾಚ್ಯುತ
ಕಲ್ಪದ್ವಿತಯಂಗಳಿರ್ಕುಮಮರನುತಂಗಳ್ ॥ ೬೮ ॥

ವ॥ ಆ ಕಲ್ಪಂಗಳೆರಡಕ್ಕಮನುಕ್ರಮದಿಂದಾರಣೇಂದ್ರನುಮಚ್ಯುತೇಂದ್ರನು ಮೆಂದಿರ್ವರಿಂದ್ರರಪ್ಪರಂತಾ ನಾಲ್ಕುಂ ಸ್ವರ್ಗಂಗಳೊಳಮೇಳುನೂಱುವಿಮಾನಮ ಕ್ಕುಮಾ ಕಲ್ಪದ್ವಯದ ಕಲ್ಪವಾಸಿಗರೆಲ್ಲಂ ತ್ರಿಹಸ್ತೋತ್ಸೇಧರುಂ ದ್ವಾವಿಂಶತಿಸಾಗರೋ ಪಮಾಯುಷ್ಯರುಂ ಮನಃಪ್ರವೀಚಾರದಿವ್ಯಸುಖರುಮಪ್ಪರಲ್ಲಿಂ ಮೇಗೇಕರಜ್ಜುಭ್ಯಂ ತರದೊಳ್

ಎತ್ತಂ ಗ್ರೈವೇಯಕಮೊಂ
ಬತ್ತುಂ ರಮಣೀಯಮೆನಿಸಿದನುದ್ದಿಶೆಗಳುಮೊಂ
ಬತ್ತುಮಣೂತ್ತರೆಯುಯ್ದುಂ
ಪ್ರೋತ್ತುಂಗ ವಿಮಾನರಾಜಿಯಿಂ ರಂಜಿಸುಗುಂ ॥ ೬೯ ॥

ವ|| ಅಂತಾ ನವಗ್ರೈವೇಯಕಂಗಳ ಪೂರ್ವತ್ರಯಂಗಳೊಳಪೂರ್ವಮಣಿ ವಿಮಾನಂಗಳ್ ನೂಱುಪನ್ನೊಂದಕ್ಕುಮಲ್ಲಿಯಹಮಿಂದ್ರರೆಲ್ಲಂ ಸಾರ್ಧದ್ವಿಹಸ್ತೋ ತ್ಸೇಧರುಂ ಯಥಾಕ್ರಮದಿನೇಕೈಕ ನೀರಾಕರೋಪಮಪ್ರವೃದ್ಧಿಯಿಂ ತ್ರಿಚತುಃ ಪಂಚೋತ್ತರವಿಂಶತಿಸಾಗರೋಪಮಾಯುಷ್ಯರುಂ ನಿಷ್ಪ್ರವೀಚಾರಸುಖರುಮಪ್ಪರ್ ಮಧ್ಯತ್ರಯದೊಳ್ ಸುರೇಂದ್ರಲಕ್ಷ್ಮೀಮಧ್ಯವಿರಾಜಮಾನಂಗಳ್ ನೂಱೇೞಕ್ಕು ಮಲ್ಲಿಯಹಮಿಂದ್ರರೆಲ್ಲಂ ದ್ವಿಹಸ್ತೋತ್ಸೇಧರುಂ ಯಥಾಕ್ರಮದಿಂ ಷಟ್ಸಪ್ತಾಷ್ಟೋತ್ತರ ವಿಂಶತಿಸಮುದ್ರೋಪಮಾಯುಷ್ಯರುಂ ನಿಷ್ಪ್ರವೀಚಾರರುಮಪ್ಪರುತ್ತರೋತ್ತರಾನೂನ ವಿಮಾನಂಗಳ್ ತೊಂಬತ್ತೊಂದಕ್ಕುಮಲ್ಲಿಯಹಮಿಂದ್ರರೆಲ್ಲಂ ಸಾರ್ಧಹಸ್ತೋತ್ಸೇ ಧರುಂ ಯಥಾಕ್ರಮದಿನೇಕೋನತ್ರಿಂಶತ್‌ತ್ರಿಂಶದೇಕತ್ರಿಂಶತ್ಸಾಗರೋಪಮಾಯುಷ್ಯ ರುಂ ನಿಷ್ಪ್ರವೀಚಾರರುಮಪ್ಪರಲ್ಲಿಂದತ್ತಲ್ ನವಾನುದ್ದಿಶೆಗಳೊಳೊಂಬತ್ತು ವಿಮಾನ ಮಕ್ಕುಮಲ್ಲಿಯಹಮಿಂದ್ರರೆಲ್ಲಮೇಕಹಸ್ತೋತ್ಸೇಧರುಂ ದ್ವಾತ್ರಿಂಶತ್ಪಾರಾವಾರೋಪ ಮಾಯುಷ್ಯರುಂ ನಿಷ್ಪ್ರವೀಚಾರರುಮಪ್ಪರಲ್ಲಿಂದತ್ತ ಚಂಚತ್ಪಂಚರತ್ನಮಯಮಪ್ಪ ಪಂಚಾಣೂತ್ತರೆಗಳೊಳ್ ವಿಜಯವೈಜಯಂತಜಯಂತಾಪರಾಜಿತಸರ್ವಾರ್ಥಸಿದ್ಧಿ ಶೋಭಾಭಿಧಾನವಿಮಾನಂಗಳೈದಕ್ಕುಮಲ್ಲಿಯಹಮಿಂದ್ರರೆಲ್ಲಂ ಏಕಹಸ್ತೋತ್ಸೇಧರುಂ ತ್ರಯಸ್ತ್ರಿಂಶತ್ಸಾಗರೋಪಮಾಯುಷ್ಯರುಂ ನಿಷ್ಪ್ರವೀಚಾರರುಂ ನಿರತಿಶಯ ಸುಖ ರುಮಪ್ಪರಲ್ಲದೆಯುಂ

ಎನಿತು ಸಮುದ್ರೋಪಮಮಂ
ತನಿತೆ ಸಹಸ್ರಾಬ್ದಸಂಖ್ಯೆಗಮೃತಾನ್ನಮನೊ
ಯ್ಯನೆ ದಿವಿಜರೆಲ್ಲರೆಂದುಂ
ಮನದೊಳ್ ಮನನೊಸೆದು ನೆನೆದು ತಣ್ಣನೆ ತಣಿವರ್ || ೭೦ ||

ಪರಮಾಯುಃಪರಿಮಿತಸಾ
ಗರೋಪಮಾರ್ಧಪ್ರಮಾಣಮಾಸಾವಧಿಯಿಂ
ಸುರರೆಲ್ಲಂ ನಸುಸುಯ್ವ
ರ್ಸುರಭಿಶ್ವಾಸಪ್ರಕಾಶನಾಸಾಪುಟದಿಂ || ೭೧ ||

ವ || ಅಂತಾ ಸ್ವರ್ಗಸಂಭವರೆಲ್ಲಮಯೋನಿಸಂಭವರುಂ ನಿದ್ರಾಲಸ್ಯಾದಿ ಬಾಧಾವಿದೂರರುಂ ನಿತ್ಯಯೌವನರುಂ ನಿರತಿಶಯಸುಭಗಮೂರ್ತಿಗಳುಂ ಸಹಜ ಮಣಿಭೂಷಣಾಂಬರರುಂ ಸಹಜಸುರಭಿಗಂಧರುಮಪ್ಪರಲ್ಲಿ ಸೌಧರ್ಮೇಂದ್ರನುಂ ಆತನ ಪಟ್ಟಮಹಾದೇವಿಯುಂ ಆತನ ಭೋಗಲೋಕಪಾಲಕರುಂ ದಕ್ಷಿಣೇಂಧ್ರರುಂ ಲೋಕಾಂತಿಕದೇವರುಂ ವಿಜಯಾದ್ಯಹಮಿಂದ್ರರುಂ ದ್ವಿಚರಮರಪ್ಪರಿಂದ್ರಪ್ರತೀಂದ್ರ ಸಾಮಾನಿಕ ಪ್ರಭೃತಿ ಮಹರ್ಧಿಕಸ್ಥಾನಂಗಳೊಳಂ ನವಾಣೂತ್ತರೆ ಪಂಚಾಣೂತ್ತರೆ ಗಳೊಳಂ ಸಮ್ಯಗ್ದೃಷ್ಟಿಗಳಲ್ಲದೆ ಪುಟ್ಟುವರಲ್ಲರ್ ಜಿನವಚನಮಂ ಕೈಕೊಂಡನಶನಾದಿ ಕ್ರಿಯೆಗಳಿನಿಂದ್ರಿಯ ವಿಷಯನಿಗ್ರಹದಿನಭವ್ಯಜೀವಮುತ್ಕೃಷ್ಟದಿನುಪರಿಮಗ್ರೈವೇ ಯಕಂಬರಂ ಸಲ್ಗುಂ ಸ್ತ್ರೀಜನಮುಮೇಕಾದಶವಿಧೋಪಾಸಕಜನಮುಮಚ್ಯುತ ಕಲ್ಪಂಬರಂ ಸಲ್ವರ್ ಗತಿಶರೀರಪರಿಗ್ರಹಾಭಿಮಾನಂಗಳ್ ಪೋಗೆವೋಗೆ ಹೀನಂಗಳ .............. ಸ್ಥಿತಿಪ್ರಭಾವಸುಖದ್ಯುತಿಲೇಶ್ಯಾವಿಶುದ್ಧೇಂದ್ರಿಯಾವಧಿವಿಷಯಂಗಳ್ ಕ್ರಮಕ್ರ[ಮದಿ]....ನಧಿಕಂಗಳಕ್ಕುಮಲ್ಲದಲ್ಲದೆಯುಂ

ಸುರನಾರಿಯರೆಲ್ಲಂ ಮೊದ
ಲೆರಡುಂ ಕಲ್ಪದೊ................ತಾ
ವರಷೋಡಶಕಲ್ಪದೊಳಂ
ಚರಿಯಿಸುವರ್ತಂಮತಂಮ ಮಚ್ಚರಿಯಾಗಲ್ || ೭೨ ||

ಸುರ ............ ರಮುಂ
ಪರಿವಾರಮುಮಾ ವಿಹಾರಮುಂ ಕಲ್ಪಜರೊಳ್
ದೊರೆಕೊಳ್ಗುಂ ಕಲ್ಪಾತೀತರೊ
ಳೆ...............ಮೊಂದುಮಣಮಿಲ್ಲೆಂದುಂ || ೭೩ ||

ವ|| ಮತ್ತಮಾ ಸಮಸ್ತಕಲ್ಪೋತ್ಪನ್ನತ ಕಲ್ಪಾತೀತಂಗಳ ವಿಮಾನ...... ದ್ರಕಶ್ರೇಣೀಬದ್ಧಪ್ರಕೀರ್ಣಕ ವಿಕಲ್ಪಮಾಳ್ಗಿಯುಂ ಗಣನಾಪ್ರಮಾಣದಿಂದಮೆಣ್ಬತ್ತ ...... ಲಕ್ಕೆಯೆಂಬತ್ತೇಟುಸಾಸಿರದಿರ್ಪತ್ತುಮೂಱು ವಿಮಾನಮಕ್ಕುಮಿಂತು

ಓರೊಂದು ಸುರವಿಮಾನದೊ
ಳೋರೊಂದೆಸೆದಿರ್ಪುದಿಂತಕೃತ್ರಿಮಚೈತ್ಯಾ
ಗಾರಂಗಳ್ ಭವ್ಯಜನಾ
ಧಾರಂಗಳ್ ಸಕಲ [ದುರಿತನಿವಹ] ಹರಂಗಳ್ ॥ ೭೪ ॥

ಅತಿಭಾಸುರಂಗಳತಿ ವಿ
ಶ್ರುತಂಗಳತಿ ಸುಂದರಂಗಳತಿಲಲಿತಂಗ
ಳುತವಹನಯನಾಂಬರಪ
ಕ್ಷತಈಷತ್ಪ್ರಾಗ್ಭಾರಮೆಂಬ ಭೂಮಿಯ ಮಧ್ಯದಲ್ಲಿ (?) ॥ ೭೫ ॥

ವ॥ ತ್ರಿಭುವನಭವನಕಲಶಾಯಮಾನಮುಂ ಯೋಜನದ್ವಿತಯಾಂತ್ಯ ಬಾಹಲ್ಯಮುಮಷ್ಟಯೋಜನ ಮಧ್ಯಬಾಹಲ್ಯಮುಂ ನಾಲ್ವತ್ತೈದುಲಕ್ಕೆಯೋಜನಸಮವೃತ್ತಪ್ರಕಾರಮುಂ ಶ್ವೇತಾತಪತ್ರಾಕಾರಮುಮಸೀತಾವನಿಯೆಂಬ ಶಿಸ್ಫಾಟಿಕಶಿಲಾತಲದಮೇಗರ್ಧಯೋಜನಬಾಹಲ್ಯದಿಂ ಘನೋದಧಿಯಿರ್ಕ್ಕುಮದರರ್ಧಬಾಹಲ್ಯದಿಂ ಘನಾನಿಲಮಿರ್ಕುಮಲ್ಲಿಂದತ್ತಲ್ ನಾಲ್ನೂಱಿರ್ಪ್ಪತ್ತೈದುಬಿಲ್ಗಂದಿದೊಂದುಕ್ರೋಶಬಾಹಲ್ಯಮಾಗಿರ್ದ ತನುವಾತದ ಮೇಗಳ ಭಾಗದೊಳಷ್ಟಕರ್ಮನಿರ್ಮೂಲನಕರರುಮಪ್ಪ ... ಲಯರುಮಪ್ಪ ಸಿದ್ಧಪರಮೇಷ್ಠಿಗಳಿಮ್ ಸಿದ್ಧಕ್ಷೇತ್ರಮದಕ್ಷಯಮನಂತಮುವ್ಯಾ [ಭಾಧಮಪು] ನರ್ಜಾತಮಕ್ಕುಂ

ನಿರಪಾಯಂ ನಿರ್ವಿಕಲ್ಪಂ ನಿರುಪಮವಿಭವಂ ನಿಶ್ಚಲಂ ನಿ .........
ನಿರಪೇಕ್ಷಂ ನಿರ್ಮಮತ್ವಂ ನಿರವಧಿವಿಷಯಂ ನಿಷ್ಕಲಂಕಂ................
.................. ತಶ್ರೀ ನಿರಘನಿಖಿಲನಿರ್ವಾಣನಿರ್ವ್ಯಾಕುಲಶ್ರೀ
ನಿರುತಶ್ರೀ ನಿರ್ವೃತಿಶ್ರೀ ನಿರತಿಶಯನಿರಾ ......... ಶ್ರೀ ॥ ೭೬ ॥

ಜಿನಪೂಜಾವಿಧಿಯಿಂದಮಾಚರಿತದಿಂ ಸದ್ಧ್ಯಾನದಿಂ ತತ್ವಭಾವ ...
....... ....... ... ತ್ತಮದಾನಫಲದಿಂ ಸಮ್ಯಗ್ವ್ರತವ್ರಾತದಿಂ
ತನುವಂ ದಂಡಿಸಿ ನೋಂತು ದಿವ್ಯತಪದಿಂ [ಸ್ವರ್ಗಂಗಳೊ] ಳ್ಪುಟ್ಟಿಭ
ವ್ಯನಿಕಾಯಂ ಕ್ರಮದಿಂದನಂತಸುಖಮುಕ್ತಿಸ್ಥಾನಮಂ ಪೊರ್ದುವರ್ ॥ ೭೭ ॥

ವ॥ [ಎಂದಿಂ]ತಾ ತ್ರಿಲೋಕೈಕವಂದ್ಯಂ ತ್ರಿಲೋಕಪ್ರಜ್ಞಪ್ತಿಯಂ ಪರಿವಡಿ ದಪ್ಪದೆ ಪರಿವಡಿಗೆಯ್ವುದುಮಿತ್ತಲನ್ನೆಗಂ ಮಣಿಮಾಡದ ನೆಲೆಯೊಳಮಲಮಳ ಯಜಚ್ಚಟಾಲಿಪ್ತಂ ಪದ್ಮರಾಗಮಣಿಕುಟ್ಟಿಮಪ್ರಕೀರ್ಣಮಾದ ಚಂಚಚ್ಚಂಚರೀಕ ನಿಕುರುಂಬಶಬಲವಿಚಕಿಲಕುಟ್ಮಲದೊಳವಿರಳಾಲಂಬಮಾನಮುಕ್ತಾದಾಮಸಂತಾನರ ಮಣೀಯಮಾನದಾತವಿತಾನದೊಳುದಾತ್ತಭಿತ್ತಿರಶ್ಮಿಜಾಲಜಟಿಲಿತಬಹಲಮಣಿ [ದೀ] ಪ್ತಿದೀಪ್ತಿಕಾಪ್ರಸರಪ್ರಭಾಭಾಸುರದೊಳಖಿಲಸುರಭಿಪರಿಮಲಾಮೋದಕಾಲಾಗರುಧೂಪಿ ತಧೂಮೋದ್ಗಾರಿ ಮರಕತಗವಾಕ್ಷಜಾಲಪರಿಶೋಭಿತದೊಳತ್ಯಂತ ಚಂದ್ರಕಾಂತ ಮಣಿಪೀಠಿಕಾಧಿಷ್ಠಿತಪರ್ಯಂಕದೊಳ್ ಪಯಃಪಯೋಧಿಡಿಂಡೀರಪಿಂಡಪಾಂಡುರೋ ಪಹಾಸಿಧವಳದುಕೂಲಾಚ್ಛಾದಿತ ಮೃದುತಲ್ಪದೊಳ್ ಸೋಲ್ಗೆವಂದ ನಿಜ ಮನೋವಲ್ಲಭೆಯೊಡನನ್ಯೋನ್ಯಾಂಗಸ್ಪರ್ಶನಾಲಿಂಗನಸುಖೋನ್ಮೀಲಿತಲೋಚನ ನಾಗಿ ಪರಮೋತ್ಸವದಿಂ ಪವಡಿಸಿ ಸುಖನಿದ್ರನಾದ ಸುಕುಮಾರಂ ತನ್ನಿಚ್ಛೆಯಿಂ ಮುನ್ನಮುನ್ನಿದ್ರಿತನಾಗಿ ತದೀಯ ಮುನೀಶ್ವರಮುಖಕಮಲ ವಿಗಲಿತ ಮೃದುಮಧುರ ಗಂಭೀರಧ್ವನಿಯನಾಲಿಸಿ ಕೇಳುತ್ತಮಚ್ಯುತಕಲ್ಪದೊಳ್ ಮುನ್ನೆ ತನ್ನ ಪುಟ್ಟಿ ಬ[ಂದಪದ್ಮಗು]ಲ್ಮವಿಮಾನವ್ಯಾವರ್ಣನಾಕರ್ಣನದಿಂ ಜಾತಿಸ್ಮರನಾಗಿ ಲೋಕತ್ರಯ ಸ್ಥಿತಿವಿನಿ............ತ್ಮೀಯಾಂತರಂಗದೊಳ್ ಸಮ್ಯಗ್ನಿಶ್ಚಯಸ್ವರೂಪದಿಂ ಭಾವಿಸಿ ನೋಡಿನೋಡಿ

ದಿಟ……… …………ರಟಮಿಾ ಸಂಸಾರಿಜೀವಂಗಳು
ತ್ಕಟನಾನಾಪರಿಣಾಮದಿಂ ಭ್ರಮಿಯಿಸುತ್ತಿರ್ಪ................ಡಂ
ತುಟಮುಂನಿಂತುಟನಿಂತುಟೆಂದಱಿಯದೀ ದುರ್ಮೋಹದೊಳ್ ಸಿಲ್ಕಿನಿ
ಸ್ಫುಟ...................ಮಱೆದಿರ್ದೆನೆನ್ನ ತನುವಾಗಾರ್ನಾರ್ಗೆ ಪೇಳ್ ನಿಕ್ಕುವಂ!!

ಪೃಥ್ವಿ॥ ಕ್ಷಯಪ್ರತಿಥಿಯಿಂದನಾದ್ಯನಿದ……………....ವಾತ್ಮಿಕ
ತ್ರಮಿಾಭುವನಮಧ್ಯದೊಳ್ ಚತುರಶೀತಿಲಕ್ಷಪ್ರಮಾ
ಣಯೋನಿಮುಖದೊಳ್ಪಲೋ ……ಯುಮನಂತಕಾಲಂ ನಿರಾ
ಶ್ರಯಂ ತೊಳಲುತಿರ್ದೆನಿನ್ನೆವರೆಗಂ ಭವಾರಣ್ಯದೊಳ್ ॥ ೭೯ ॥

ಅನುಪಮದಿವಿಜಸುಖಾಮೃತ
ವನನಿಧಿಯಂ ಪೀರ್ದುಂ ತೃಷ್ಣೆ ಪೋಗದೆ ಮಾಯ್ದಾ
ಮನುಜಸುಖಮೆಂಬ ಮಂಜಿನ
ಪನಿಪುಲ್ಲಂ ನಕ್ಕೆ ತೃಷ್ಣೆ ತಾಂ ಪೋದಪುದೇ ॥ ೮೦ ॥

ಕಡೆಯಿಲ್ಲದ ಸಂಸಾರದ
ಕಡೆಯಂ ಕಡೆಯೆಯ್ದೆ ಕಟ್ಟೆ ತಡೆಮಾಟ್ಪ ಗುಣಂ
ಕಡೆಗೋಡಿವರಿಯೆ ಮೋಕ್ಷದ
ಕಡೆಯಿಲ್ಲದ ಪರಮಸುಖಮನೀಗಳೆ ಪಡೆವೆಂ ॥ ೮೧ ॥

ಪುಟ್ಟದ ಲೋಕಮಿಲ್ಲ ನಸುಪೊಂದದ ತಾಣಮದೊಂದುಮಿಲ್ಲ ಮೆ
ಟ್ಟಿಟ್ಟಗಪಟ್ಟುಕೂಡೆ ಮತಿಗೆಟ್ಟಿರ್ದೆಗೆಟ್ಟು ಬಟಿಲ್ದಟಿಲ್ದು ಬಾ
ಯ್ವಿಟ್ಟು ಕುಯೋನಿಯೊಳ್ತಿರಿದು ಪೋದುವು ಕಾಲಮನಂತಮಂತಱಿಂ
ಪುಟ್ಟದೆ ಪೊಂದದಿರ್ಪ ಬಗೆಯುಂ ಬಗೆದಂದು ಕೃತಾರ್ಥನಾಗೆನೇ ॥ ೮೨ ॥

ವ॥ ಎಂದು ಪರಮವೈರಾಗ್ಯಭಾವನೆಗಳಂ ಭಾವಿಸುವಾಗಳ್

ಪರಮಾಯು ಮೂಱುದಿವಸಂ
ಚರಿತಂ ಚರಿತಾರ್ಥನಾ [ಗು ನೀ] ನೆಂಬವೊಲಾ
ಪುರದೊಳಗೆ ಮೂಱುಜಾವಂ
ಪರಿವಡಿಸಿತ್ತೋತು ತನಗೆ ಪೇೞ್ವಂತಾಗಳ್ ॥ ೮೩ ॥

ವ॥ ತದನಂತರಮಾ ಮಹಾತ್ಮಂ ಸಕಳದುರಿತಹರಣಕರಣಕಾರಣತಪಶ್ಚ ರಣಪರಿಣತಾಂತರಂಗನಾಗಿ ತದ್ಗೃಹಾಂತರಾಳದಿಂ ಪೊಱಮಟ್ಟು ಪೋದೊಡೆ ರಕ್ಷ ಪಾಳಾನುಚರರಿ............ಯಮುಕ್ಕುವೆಂದು ಮೋಹನೀಯ ಬಂಧದ ತೊಡರ್ಪಂ ಪತ್ತುವಿಡಿಸುವಂದದಿಂ....................ತೊಡರ್ಪಂ ಪತ್ತುವಿಡಿಸಿ ರತ್ನತ್ರಯದ ಬಂಡಾರಮಂ ತೆಱೆವಂತೆ ಪಟ್ಟಸಭಂಡಾರ................ಸಮ್ಯಗ್ವ್ರತಂಗಳುವಂ

ತೆಗೆದುಕೊಳ್ವಂತೆ ವಿಚಿತ್ರವಸ್ತ್ರಂಗಳಂ ತೆಗೆದುಕೊಂಡು ತನ್ನ··· ··· ··· ··· ಇಕ್ಕುವಂ ತೊಂದನೊಂದಱಿತೊಳ್ ಗಂಟಿಕ್ಕಿ ವಿಷಮವಿಷಯಮದೇಭಮನಾಳಿಸಿ ಕಟ್ಟುವಂತೆ ಮೆ···········ಂದಾಕಂಬದೊಳ್ ಬಲ್ಲಿತ್ತುಗಟ್ಟಿ ಬಱಿಯುಮದನಾ ಮಾಡದ ಪೆಱ ಗಣ್ಗಱಿಯಲಿಕ್ಕಿ ಪರೀಷಹ [ಭ]ಟರಂ ಬಂಚಿಸುವಂತೆ ಕಾಪಿನ ಬಂಟರಂ ಬಂಚಿಸಿ ಪರಾರ್ಧ್ಯಗುಣಮಾಲೆಯುಂ ಪಿಡಿವಂತಾ ವಸ್ತ್ರಮಾಲೆಯುಂ ಪಿಡಿದು ಸಂಸಾರಮಹಾ ಪರ್ವತದಿನಿೞಿವಂತೆ ಕರುಮಾಡದಿನಿೞಿದು ತಪೋವನಮಂ ಪುಗುವಂತಾ ಬನಮಂ ಪೊಕ್ಕು

ಮಣಿಕೂಟಾಟೋಪದಿಂದಂ ಮಣಿಮುಕುರವಿಲಾಸಗಳಿಂದಂ ಸಮುದ್ಯ
ನ್ಮಣಿಘಂಟಾಮಾಲೆಯಿಂದಂ ಮಣಿಕನಕಸಮೂಹಂಗಳಿಂದಂ ಬೆಡಂಗಿಂ
ಗೆಣೆಯಿಲ್ಲೆಂಬಂದದಿಂ ಕರಮೆಸೆವ ಜಿನಾಗಾರಮುಂ ಭವ್ಯಚಿಂತಾ
ಮಣಿಗೇಹಂ ಬಂದು ಕಂಡಂ ಪರಮಜಿನಮತಾಂಭೋಜಿನೀರಾಜಹಂಸಂ ॥ ೮೪ ॥

ಇದು ಸಮಸ್ತವಿನೇಯಜನವಿನಮಿತ ಶ್ರೀವರ್ಧಮಾನಮುನೀಶ್ವರವಂದ್ಯ
ಪರಮಜಿನೇಂದ್ರಶ್ರೀಪಾದಪದ್ಮವರಪ್ರಸಾದೋತ್ಪನ್ನಪ್ರಸನ್ನ ಸಹಜಕವೀಶ್ವರ
ಶ್ರೀ ಶಾಂತಿನಾಥಪ್ರಣೀತಮಪ್ಪ ಸುಕುಮಾರಚರಿತದೊಳ್
ಸುಕುಮಾರಸ್ವಾಮಿಯ ಜಿನಭವನದರ್ಶನಂ
ಏಕಾದಶಾಶ್ವಾಸಂ

---

# ೧೨. ದ್ವಾದಶಾಶ್ವಾಸಂ

---

ಶ್ರೀಮಜ್ಜಿನನಿಳಯಮನು
ದ್ದಾಮಗುಣಂ ತ್ರಿಃಪ್ರದಕ್ಷಿಣಂ ಗೆಯ್ದು ಜಿನ
ಶ್ರೀಮುಖ [ಮಂ ಕಂ] ಡಂ ಲ
ಕ್ಷ್ಮೀಮುಖಮುಕುರಂ ಸರಸ್ವತೀಮುಖಮುಕುರಂ ॥ ೧ ॥

ವ॥ ಅಂ................ವಿನತಮಸ್ತಕನ್ಯಸ್ತಹಸ್ತಯುಗನಾಗಿ ವಿಶುದ್ಧಪರಿಣಾಮದಿಂ ಭಗವದರ್ಹತ್ಪರಮೇಶ್ವರಶ್ರೀಮುಖಕ್ಕಭಿಮುಖನಾಗಿ

ಜಯ ಕರ್ಮಾರಾತಿನಿರ್ಮೂಲನಕರ ಜಯ [ದೇವಾದಿಸಂ] ಸ್ತುತ್ಯಪಾದ
ದ್ವಯ ಲೋಕಾಲೋಕವಸ್ತುಪ್ರಕಟನಕರ ಮಾಂಗಲ್ಯಕೈವಲ್ಯಬೋಧೋ
ದಯ ಮುಕ್ತಿಶ್ರೀವಧೂವಲ್ಲಭ ಜಯಜಯ ಸರ್ವಸಮ್ಯಕ್ತ್ವಸಂಶು
ದ್ಧಿಯನೀಗಳ್ ಶಾಶ್ವತಂಮಾಡೆನಗೆ ಕರುಣದಿಂದಂ ತ್ರಿಲೋಕಾಧಿನಾಥಾ ॥ ೨ ॥

ಭ್ರಮೆಯಿಂ ದುರ್ಮಾರ್ಗಬಂಧಪ್ರಕೃತಿಯವಶದಿಂದಿನ್ನೆಗಂ ಘೋರಸಂಸಾ
ರಮಹೋಗ್ರಾರಣ್ಯದೊಳ್ ತಿಟ್ಟನೆ ತಿರಿದು ಕರಂ ಸೇದೆಗೆಟ್ಟೆರ್ದುಸನ್ಮಾ
ರ್ಗಮನಾನೆಂತಾಗಿಯುಂ ಪೊರ್ದಿದೆನಭವ ಶರಣ್ ನೀನೆ ನಿರ್ವ್ಯಾಕುಲಂ ಬೋ
ಧನುನವ್ಯಾಬಾಧಮಂ ಮಾಡೆನಗೆ ಕರುಣದಿಂದಂ ತ್ರಿಲೋಕಾಧಿನಾಥಾ ॥ ೩ ॥

ಮುನ್ನೆಂದುಂ ನಿನ್ನನೇನೆಂದಱಿಯದೆ ಮತಿಗೆಟ್ಟೆರ್ದು ದಿಙ್ಮೂಢನಾದೆಂ
ನಿನ್ನಂ ಕಂಡೀಗಳೀಗಳ್ ತಿಳಿದು ತಿಳಿವನಾಂ ಕಂಡು ಕೈಕೊಂಡೆನೆನ್ನಂ
ನಿನ್ನನ್ನಂ ಮಾಡುವನ್ನಂ ಪರಮಜಿನಪತೀ ಚಾರುಚಾರಿತ್ರಮಂ ನಿ
ಚ್ಚನ್ನಿಚ್ಚಂ ನಿಶ್ಚಳಂ ಮಾಡೆನಗೆ ಕರುಣದಿಂದಂ ತ್ರಿಲೋಕಾಧಿನಾಥಾ ॥ ೪ ॥

ವ॥ಎಂದಿಂತನೇಕಸ್ತುತಿಗಳಿಂ ತ್ರಿಲೋಕಸ್ತುತನಂ ಸ್ತುತಿಯಿಸಿ ಪರಮತಪಃ ಶ್ರೀಪದಕ್ಕೆಱಗುವುದನನುಕರಿಸುವಂತೆ ತನ್ಮುನೀಶ್ವರನ ಶ್ರೀಪಾದಪದ್ಮಕ್ಕೆ ಸಾಷ್ಟಾಂಗಮೆಱಗಿ ಪೊಡೆವಟ್ಟು

ಶುಭಭಾವನೆಯಿಂ ಸಂಸಾ
ರಭೋಗನಿರ್ವೇಗವಾದ ದೆಸೆಯಿಂದಂತಃ
ಪ್ರಭೆ ಬೆಳೆಗೆ ದೀಕ್ಷೆಯಿಚ್ಛಾ
ಮಿ ಭಟಾರಾಯೆಂದು ತತ್ಕುಮಾರಂ ನುಡಿದಂ ॥ ೫ ॥

ಅದಿರದೆ ಪೆಱತೆಗೆಯದೆ ಬೆ
ಚ್ಚದೆ ಬೆದಱದೆ ಸುಗಿಯದಗಿಯದೆಡೆಯಿಂ ಕೋಲೊ
ಡ್ಡಿದ ಬಿರುದಿನಂಕದಂದದಿ
ನದೇಂ ಪರಿಚ್ಛೇದಮಾತನೊಳ್ ಕೂಡಿದುದೋ ॥ ೬ ॥

ಅವನತನಾಗಲೊಡಂ ಧ
ರ್ಮವೃದ್ಧಿಯಕ್ಕೆಂದು ಪರಸಿ ಪರಮಾಶೀರ್ವಾ
ದವಿಶೇಷವಚನದಿಂ ತ್ರೈ
ಭುವನಸ್ತುತಚರಣನಳಿನನತಿನಿರ್ಮಳನಂ ॥ ೭ ॥

ಮುನಿನಾಥನವಧಿಯಿಂ ಬಗೆ
ದು ನೋಡಿ ನಿನಗಾಯುರವಧಿ ಮೂಱುದಿನಂ ನೀ
ನನುನಯದಿಂ ನೋಡೊಳ್ಳಿತ್ತಂ
ವಿನಯದೆ ಬಗೆದುದನೆ ಬಗೆಗೆ ಭವ್ಯಸಮೂ[ಹಂ] ॥ ೮ ॥

ವ॥ ಎಂದು ಸುಕುಮಾರಸ್ವಾಮಿಯ ಪರಿಚ್ಛೇದಕ್ಕೆ ಯಶೋಭದ್ರಸ್ವಾಮಿಗಳ್ ಮೆಚ್ಚಿ ಬಿಚ್ಚಳಿಸಿ [ದೀಕ್ಷಾ] ಪ್ರಸಾದಂಗೆಯ್ವುದುಂ

ಅಪರಿಮಿತಶ್ರೀಯಿಯಂ ಕೊಳೆ
ದ ಪುಲ್ಲನೀಡಾಡುವಂತಿರೀಡಾಡಿ ಮಹಾ
ತಪಮಂ ಕೈಕೊಂಡಂ ಪು
ಣ್ಯಪದವಿಯಂ ನೆಱೆಯೆ ಸೂಱೆಗೊಳ್ವಂತಾಗಳ್ ॥ ೯ ॥

ವ॥ ಅಂತು ಬಾಹ್ಯಾಭ್ಯಂತರಪರಿಗ್ರಹಪರಿತ್ಯಾಗಂಗೆಯ್ದು ರೂಪವಿದ್ಯಾಧರಂ ಸಂಜಾತಕಾಲಲಬ್ಧಿಯಿಂ ಜಾತರೂಪಧರನಾಗಿ ಗುರುಗಳಂ ಗುರುಭಕ್ತಿಪೂರ್ವಕಂ ವಂದಿಸಿ ದೀಕ್ಷಾಕಾಲಮೆ ತನಗಾ [ತ್ಮ] ಸಂಸ್ಕಾರಕಾಲಮಾಗಿರ್ದುದಱಿಂ ತಪಂಗೆಯ್ಯಲ್ ಕಾಲಮಿಲ್ಲೆಂದು ತ್ರಿಕರಣಶುದ್ಧಿಯಿಂ ಸಂನ್ಯಸನಮಂ ದಯಂಗೆಯ್ಯಿಮೆಂಬುದುಂ ತ್ರಿಸಾಕ್ಷಿಯಿಂ ಚತುರ್ವಿಧಾಹಾರಶರೀರನಿವೃತ್ತಿಶಾಸನಮಪ್ಪ ಸಂನ್ಯಸನಪ್ರತ್ಯಾಖ್ಯಾನಮಂ ದಯಂಗೆಯ್ದು

ಪ್ರಾಯೋಪಗಮನಮಂ ಗೆ
ಯ್ದಾ ಯತಿಪತಿ ನೀಂ ಸಚರ್ಯೆಗೆಯ್ಯಲ್ವೇಡೆಂ
ದಾ ಯತಿಪತಿ ತನ್ನೊಳ್ಪಗೆ
ದಾ ಯತಿಗಾಯತಿಯನುಂಟುಮಾಡಲ್ ನುಡಿದಂ ॥ ೧೦ ॥

ನಿನ್ನಂ ಪ್ರತಿಬೋಧಿಸಲೆಂ
ದಿನ್ನೆಗಮಿಲ್ಲಿರ್ದೆಮಿದುವೆ ತಾತ್ಪರ್ಯದಿನೀ
ನಿನ್ನ ಬಗೆ ಕೂಡಿದುದಱಿಂ
ನಿನ್ನನೆ ನೀಂ ಬಗೆವುದಿನಿತೆ ಬಗೆ ಬಗೆವಾಗಳ್ ॥ ೧೧ ॥

ಮುನ್ನಾದ ಮುನೀಶ್ವರರುಂ
ನಿನ್ನನೆ ನೆನೆಯುತ್ತಮಿರ್ದರಿನ್ನಪ್ಪವರುಂ
ನಿನ್ನನೆ ನೆನೆವರ್ ನೀನುಂ
ನಿನ್ನನೆ ನೆನೆ ಜಿನಪ [ದಂ]ಗಳಂ ನೆರೆಯುತ್ತಂ ॥ ೧೨ ॥

ಉಪಸರ್ಗಂಗಳ್ ಪುಟ್ಟಿದೊ
ಡೆ ಪರೀಷಹವಿಜಯಿಯಾಗಿ ನಿಶ್ಚಿ[ಂತಂ] ಸ್ಮ
ರಿಪುದಿನಿತೆ ಬಱಿಕೆ ನಿಶ್ಚಿಂ
ತ ಪರಮಸೌಖ್ಯಾಸ್ಪದಕ್ಕೆ ಭಾಜನನಪ್ಪೈ ॥ ೧೩ ॥

ವ॥ ಎಂದು ಪರಿ.........ಮುಪಥ್ಯಮುಂ ತಥ್ಯಮುಮಾಗೆ ನುಡಿದು ಸಂಬೋಧಿಸಿದ ಗುರುಗಳ ವಚೋವಿಸ್ತರಮಂ ಸುಕುಮಾರಮುನೀಶ್ವರನವಧಾರಿಸಿ

ಮುನಿಪತಿ ನಿಮ್ಮಿಂ ಪ್ರತಿಬೋ
ಧನಮಿಂದಾದತ್ತು [ನಿ] ಮ್ಮ ದಯೆಯಿಂದೆ ಕೃತಾ
ರ್ಥನೆನಾನ [ದ] ಲ್ಲದಿರ್ದಂ
ದೆನಗೆ ಜಿನೇಶ್ವರ ತಪಃಪ್ರಭಾವವಭಾವಂ ॥ ೧೪ ॥

ಅವಿವೇಕಾತ್ಮತೆಯಿಂದೆ ಮೆಯ್ಯಱಿಯದಾಂ ದಿಙ್ಮೂಢನಾಗಿರ್ದೆನಿ
ನ್ನೆವರಂ ನಿಮ್ಮಡಿ ನಿಮ್ಮನುಗ್ರಹದಿನೀಗಳ್ ನಿಶ್ಚಯಂ ನಿಮ್ಮ [ನ
ವ್ಯವ]ಚೋವೃತ್ತಿಯಿನೀ ನಿವೃತ್ತಿ ದೊರೆಕೊಂಡತ್ತಲ್ಲದಿರ್ದಾಗಳೀ
ಭವವಾರಾಶಿಯೊಳದ್ದೊಡೆತ್ತುವವರಾರೆನ್ನಂ ಮುನೀಂದ್ರೋತ್ತಮಾ ॥ ೧೫ ॥

ವ ॥ ಎಂದು ನುಡಿಯುತ್ತುಮಿರೆಯಿರೆ

ಪುದಿದೊಂದಿರ್ದಂಧಕಾರಂ ಬೆದಱಿ [ಪರೆ] ಯೆ ನೀರ್ವಕ್ಕಿಗಳ್ ಕೂಡಿ ತೋಡಾ
ಗೆ ದಿಗಂತಂಗಳ್ ನಿತಾಂತಂ ತೊಳಗಿ ಬೆಳಗೆ ಪಂಕೇಜಷಂಡಂಗಳೆಲ್ಲಂ
ಮುದದಿಂದೆತ್ತೆತ್ತಲೋರಂತಲರ್ದೆಸೆದಿರೆ ಪೂರ್ವಾಚಳೇಂದ್ರಾಗ್ರದೊಳ್ ಬಂ
ದುದಯಂಗೆಯ್ದತ್ತು ಶೋಭಾರುಣಕಿರಣಗಣಾಳಂಬಮಾದಿತ್ಯಬಿಂಬಂ ॥ ೧೬ ॥

ವ ॥ ಅಂತು ಮಾರ್ತಾಂಡೋದಯಮಪ್ಪುದುಂ ಭವ್ಯವರಪುಂಡರೀಕ ಮಾರ್ತಂಡಂ ನಿತ್ಯಮಂಡಿತಜಿನಾಲಯಮಂ ತ್ರಿಃಪ್ರದಕ್ಷಿಣಂಗೆಯ್ದು ದಕ್ಷಿಣಾಭಿಮುಖವಾಗಿ ತತ್ಪುರಬಹಿರುಪವನಮಧ್ಯಪ್ರದೇಶದೊಳ್ ಮುಕ್ತಿಶ್ರೀಕಾಮಿನೀತಿಲಕಮೆಂಬಂ

ಶಿರ್ದ ತ್ರಿಭುವನತಿಲಕವೆಂಬ ಚೈತ್ಯಾಲಯಕ್ಕೆ ವಂದಿರ್ದರಿತ್ತಲಾ ಮುನೀಶ್ವರನಾ ವನಾಂತರಾಳದಿಂ ಪೊಱಮಟ್ಟುತ್ತರೋತ್ತರಸುಖಾಭಿಮುಖನಪ್ಪುದನಭಿನಯಿಸುವಂ ತುತ್ತರದಿಶಾಭಿಮುಖನಾಗಿ

ಈರ್ಯಾಶುದ್ಧಿ ತಪೋಗುಣ
ಪರ್ಯಾಯವಿಶುದ್ಧಿಯೆಂಬುವಂ ಬಗೆವೀ ತಾ
ತ್ಪರ್ಯದಿನೇನುಂ ಬಗೆಯದೆ
ಶೌರ್ಯಸ್ಥಿತನಾಗಿ ಬಟ್ಟೆಯೊಳ್ ಮುನಿ ನಡೆದಂ || ೧೭ ||

ಕಡಕುಂ ಪರಲ್ಗಳುಂ ಮೆ
ಲ್ಲಡಿಗಳನೆಡೆಯುಡುಗದೊತ್ತಿದೆಡೆಯಿಂ ನೆತ್ತರ್
ಬಿಡದೆಚ್ಚು ಪಾಯೆ ಸಂಯಮಿ
ನಡೆದು ಮಹಾಕಾಳದೊಳಗನಾಗಳ್ ಪೊಕ್ಕಂ ||೧೮||

ವ || ಅಂತಾ ಮಹಾನುಭಾವನಾ ಮಹಾಕಾಳದೊಳ್ ಸುಪ್ರಾಸುಕ ಪ್ರದೇಶಮಂ ಕಂಡು ಯೋಗಯೊಗ್ಯಪ್ರದೇಶಮಪ್ಪುದೆಂದೇಕಾಗ್ರಚಿತ್ತದೊಳೇಕ ಪಾರ್ಶ್ವದೊಳ್ ಮೆಯ್ಯನಿಕ್ಕಿ ನಿಟಿಳತಟಘಟಿತಕರಪುಟಯುಗಲನುಂ ಧರ್ಮಧ್ಯಾನೋಪಯೋಗನುಮಾಗೆ ವೀರಪ್ರಯೋಪಗಮನವಿಧಿಯಿಂ ವಿರಸ್ತಯ್ಯಾತಳಗತನಾಗಿರ್ದನನ್ನೆಗಮಿತ್ತಲಾ ಮಣಿಮಾಡದ ನೆಲೆಯೊಳ್ ಸುಕುಮಾರಸ್ವಾಮಿಯೊಡನೆ ಪವಡಿಸಿದ ಮನೋಹರಿಯೆಂಬ ನಯನಮನೋಹರಿ ಬೆಳಗಾದಾಗಳೆಚ್ಚತ್ತು ನಿಜಮನೋವಲ್ಲಭನಂ ಕಾಣದೆ ಕೆಟ್ಟೆ[ನೆಂದು] ಬಾಯ್ವಿಟ್ಟು ಪರಿಚಾರಕಿಯರಂ ಕರೆದು ಮಾಡದೋವರಿಗಳೊಳೆಲ್ಲಮಱಸಿ ಕಾಣದೆ ಗದ್ಗದ ಕಂಠೆಯಾಗಿ ಯಶೋಭದ್ರೆಗಱಿಪಿದಾಗಳ್

ತನಗಾಕಸ್ಮಿಕ ಶಂಕೆ ತನ್ನಮನದೊಳ್ಮುಂಪುಟ್ಟೆ ತತ್ಕಾಂತೆಯುಂ
[ದಿಸಿ] ರುಳ್ ಚಿಂತಿಸಿ ನಿದ್ದೆಗೆಟ್ಟು ಮತಿಗೆಟ್ಟಿರ್ದಂತಿದಂ ಕೇಳ್ದು ತ
ಟ್ಟನೆ ಮೂರ್ಛಾಗತೆಯಾಗೆ ಬಂಧುಜನಮೆಲ್ಲಂ ಬಂದು ಶೀತಾಂಬುವಂ
ಘನಮಾಗಲ್ತಳಿದಾಗಳೆಚ್ಚಱಿಸಲಂತೆಚ್ಚತ್ತು ವಿಶ್ರಾಂತಿಯಿಂ || ೧೯ ||

ವ || ಸೊಸೆವಿರೆಲ್ಲರುಮನೊಡಗೊಂಡು ಬಳ್ಳಿಮಾಡಂಗಳೊಳೆಲ್ಲಮಱಸಿ ಕರುಮಾಡಮನೇಱ ನೋಡುವಾಗಳಾತ್ಮೀಯ ವೈಶ್ಯವಂಶಧ್ವಜಂ ದುರಿತಾರಾತಿವಿಜಯದಿಂದೆತ್ತಿಸಿದ ವಿಜಯಧ್ವಜದಂತೆ ಮಿಳಿರ್ದು ಪೊಳೆವ ದುಕೂಲದ ವಿಚಿತ್ರವಸ್ತ್ರಮಾಲೆಯಂ ಭೋಂಕನೆ ಕಂಡು

ಇಱದಿಲ್ಲಿಂದಮೆ ಪೋದನೆಂದು ಮನದೊಳ್ನಿಶ್ಚಯಿಸಿ ತಾಂ ಮಾಡದಿಂ
ದಿೞದಾತ್ಮೀಯ ಸಹಾಯವರ್ಗಸಹಿತಂ ತನ್ನಂದನೋದ್ದೇಶದೊಳ್
ತೊೞಲುತ್ತುಂ ತರುಗುಲ್ಮರಾಜಿಗಳೊಳೆಲ್ಲಂ ನೋಡಿ ಶೋಕಾಕುಳಾ
ವಿಳೆಯಾದಳ್ ಪ್ರಿಯಪುತ್ರಮೋಹವಶದಿಂದೇನಾಗರೇಗೆಯ್ಯರೋ || ೨೦ ||

ವ || ಆಗಳಾ ಮೂವತ್ತಿರ್ವರ್ಕಾಂತೆಯರುಮಾತ್ಮೀಯ ಪತಿವಿಯೋಗೋದ್ವೇಗದಿಂ ಶೋಕಾಕ್ರಾಂತೆಯರಾಗಿ ಮೆಯ್ಯಱಯದೆ

ಎಳೆಮಾವೇ ಲತೆಯೇ ತಮಾಳಚಯಮೇ ಪೆಣ್ಣಂಚೆಯೇ ಕೊಂಚೆಯೇ
ವಿಲಸಚ್ಚಂಪಕಮೇ ಲಸತ್ಪುಳಿನಮೇ ಪುನ್ನಾಗಮೇ ಪೂಗಮೇ
ಕೊಳನೇ ಪಂಕಜಮೇ ನಮೇರುಕುಜಮೇ ಬಾೞ್ಜೊಂಪಮೇ ಕೋಗಿಲೇ
ಗಿಳಿಯೇ ಕಂಡಿರೆ ಪೇೞಮೆಮ್ಮಪತಿಯಂ ಶ್ರೀರೂಪಕಂದರ್ಪನಂ || ೨೧ ||

ವ|| ಎಂದು ವನತರುಲತಾವನಚರಂಗಳಂ ಕಂಡತಿಪ್ರಲಾಪಂಗೆಯ್ವಾಗಳ್ ಬಂಧುಜನಮುಂ ಪರಿಜನಮುಂ ನೆರೆದು ಬಂದು ಬನ್ನಿಮಿನ್ನುಮಱಸುವಮೆಂದು ಪುರಪ್ರ [ಕ್ಷೋ] ಭಮಾಗೆ ಪುರದೊಳಗೆ ತೊೞಲ್ದಱಸುತ್ತುಂ

ಸುರರಾಜವಿಭವನಂ ಕಂ।
ಡಿರೆ ರೂಪಮನೋರಾಜನಂ ಕಂಡಿರೆ ಭಾ
ಸ್ಕರತೇಜನನೀಗಳ್ಕಂ
ಡಿರೆ ಗುಣಿಯಂ ಭವ್ಯಸೇವ್ಯಚಿಂತಾಮಣಿಯಂ || ೨೨||

ವರಪುಣ್ಯಾಧಾರನಂ ಕಂಡಿರೆ ಗುಣಧರನಂ ಕಂಡಿರೇ ಭೋಗಿಯಂ ಕಂ
ಡಿರೆ ಲಕ್ಷ್ಮೀಕಾಂತನಂ ಕಂಡಿರೆ ವಿಶದಯಶೋರಾಶಿಯಂ ಕಂಡಿರೇ ಸೌಂ

ದರದಿವ್ಯಾಕಾರನಂ ಕಂಡಿರೆ ಸುಖಮಯನಂ ಕಂಡಿರೇ ರೂಪವಿದ್ಯಾ
ಧರನಂ ನೀಮಾರುಮೇಂ ಕಂಡಿರೆ ಮನಸಿಜನಂ ಕಂಡಿರೇ ಪೇೞಿಮಾಗಳ್ ‖

ವ ‖ ಎಂದು ಪುರಜನಂಗಳಂ ಬೆಸಗೊಳುತ್ತುಮಾತ್ಮೀಯಾವಾಸಕ್ಕೆ ಮಗುೞಿವರ್ಪಾಗಳ್

ಉದಿತಶಶಾಂಕನಿಲ್ಲದಿರುಳಂತೆ ವಿನೂನವಸಂತರಾಜನಿ
ಲ್ಲದ ವನಲಕ್ಷ್ಮಿಯಂತೆ ದಿವಿಜೇಶ್ವರನಿಲ್ಲದ ಸಗ್ಗದಂತೆ ಚೆ
ಲ್ವೊದವಿದ ಪದ್ಮಮಿಲ್ಲದ ಸರೋವರದಂತೆ ಜನಕ್ಕೆ ಬಿನ್ನನಿ
ರ್ದುದು ಸುಕುಮಾರನಿಲ್ಲದೆ ಪಲರ್ನೆರೆದಿರ್ದೊಡಮಾಗಳಾ ಗೃಹಂ ‖ ೨೪ ‖

ವ ‖ ಅಂತು ಬಿನ್ನನಿರ್ದ ಕರುಮಾಡಮಂ ಕಂಡು ಮಗನಂ ಕಾಣದಾ ಬಾಳೆ ಕಾದ ಪುಡಿಯೊಳ್ ಬಿರ್ದೆಳವಾಳೆಯಂತೆ ಬಂಬಳ ಬಾಡಿ ತಿಱಿದಿಕ್ಕಿದ ತಳಿರಂತೆ ಕೊಗ್ಗನೆ ಕರಗಿ ಶೋಕಾವೇಗತತ್ಪರೆಯಾಗಿರ್ಪುದುಂ ಸ್ವಜನಪರಿಜನಂಗಳೆಲ್ಲಂ ಪಸಿವುಂ ನಿದ್ರೆಯುಮೆಂಬ ಚಿಂತೆಯನೇನೆಂದಱಿಯದೆ ಚಿಂತಿಸುತ್ತುಂ ಪೊಟಿಲೊಳಂ ಕೆಲದೂರ್ಗಳೊಳೆಲ್ಲಮಱಸುತ್ತಿರ್ದರಿತ್ತಲನ್ನೆಗಮಾ ಸುಕುಮಾರಸ್ವಾಮಿ ಮುನ್ನೆ ವಾಯುಭೂತಿಯಾದಂದಿನ ಭವದತ್ತಿಗೆಯಪ್ಪ ಸೋಮದತ್ತೆ ಸಂಸಾರಕಾಂತಾರದೊಳ್ ತಿಟ್ಟನೆ ತಿರಿದು ನಿದಾನಕಾರಣಮಾಗೆ ಪೆಣ್ನರಿಯಾಗಿ ಮುನ್ನಿನ ತನ್ನೆರಡು ಮಕ್ಕಳುಮಾ ಭವದೊಳ್ ತನಗೆರಡು ಮಱಿಗಳಾಗಿ ಪುಟ್ಟಿ ವುದುಂ ಮಱಿಗಳ್ವೆರಸು ತಿರಿತರುತ್ತುಮಾ ಮಹಾಯೋಗೀಶ್ವರನ ನಡೆದ ಸಜ್ಜೆಯೊಳ್ ಮೃದುಪದತಳಂಗಳೊಡೆದುಚ್ಚಳಿಸಿ ಸೂಸಿದ ನೆತ್ತರ ದಾರೆಯೊಳ್ ನಾದು ನನೆದಡಿವಜ್ಜೆಯನು ನಾತಂಬಿಡಿದು ಬಂದು ಮಹಾಕಾಳಶ್ಮಶಾನದೊಳಗೆ ಯೋಗ ನಿಯೋಗ ಧ್ಯಾನೋಪಯೋಗದಿಂ ನಿರುದ್ಧಕರಣ ನಿಷ್ಪಂದಶರೀರನಾಗಿ ಮೆಲ್ಲನಡಕಂ ಬೆರಸು ಪಟ್ಟಿರ್ದ ಋಷಿರೂಪಕಮುಂ ಕಂಡು ಶಬಮೆಂದೆ ಸಾರ್ದು ತಾನೊಂದುಕಾಲಂ ತನ್ನೆರಡು ಮಱಿಗಳೊಂದು ಕಾಲಂ ಕೂಡೆ ತೋಡಿ ಸೀಳ್ದು ತಿಂಬಾಗಳ್

ನೆಱೆಯೆ ಚತುರ್ದಶಪೂರ್ವಮ
ನಱಿವಱಿತಂ ತನಗೆ ನೆಱೆದು ನಿಲೆ ತನ್ನಂ [ತಾ]
ನಱಿದಿರ್ದಱಿಂದಂ ಮೆ
ಯ್ಯಱಿದಿರ್ದಂ ನೋವನಱಿಯದಿರ್ದಂ ಮುನಿಪಂ || ೧೫ ||

ಕಂ|| ಜೀವಂ ಬೇಱೆ ಶರೀರಂ
[ಭಾವಿ] ಸೆ ಬೇಱೆಂಬ ಪರಮತತ್ವಾರ್ಥವ ಸ
ದ್ಭಾವವಿಚಾರಮನರಿವಾ
ಭಾವಾತ್ಮಂ ಮೆಯ್ಯನೋವನೇನರಿದಪನೇ || ೧೬ ||

..........................................................................

..........................................................................

..........................................................................

[ದಿರ್ದ ಡೆ] ಯಿನಿರ್ದಧೈರ್ಯದೊಂದಳವದಚ್ಚರಿದಲಾ ಮುನೀಂದ್ರನಾ||೧೭||

ವ|| ಮತ್ತಮಾ ಮಹಾತ್ಮನಧ್ಯಾತ್ಮಮುಂ ಮನದೊಳವಲಂಬಿಸುತ್ತುಮ ಧ್ರುವಮಶರಣಮೇಕತ್ವಮನ್ಯತ್ವಸಂಸಾರಲೋಕಮಶುಚಿತ್ವಮಾಸ್ರವಸಂವರ ನಿರ್ಜರೆ ಧರ್ಮಬೋಧಿಯೆಂಬ ದ್ವಾದಶಾನುಪ್ರೇಕ್ಷೆಗಳಂ ಯಥಾಕ್ರಮದಿಂ ತನು ಪ್ರೇಕ್ಷೆಗೆಯ್ವುದುಂ

ದಿಟವಭ್ರಾಕೃತಿಯೆಂತಂ |
ತುಟಿ ತೊಟ್ಟನೆ ಬಂದ ಬೆಟ್ಟುತೋಱೆ ತಾನೆಂತಂ ||
ತುಟಿ ದಿವಿಜಚಾಪಮೆಂತಂ |
ತುಟಿ ಭವವಿಭವಾಭಿಜಾತ್ಯಮೆಂತುಮನಿತ್ಯಂ || ೧೭ ||

ಭುವನತ್ರಯಂಗಳೊಳವಿಾ |
ಭವಕಾನನದೊಳಗೆ ಸುಳಿವ ಜೀವಂಗಳನಾ ||
ಜವನೆಟಿದುಯ್ವಾಗಳ್ ಕಾ |
ವವರಾರ್ ಶರಣಾರ್ ಜಿನೇಂದ್ರಧರ್ಮಮೆ ಶರಣಂ || ೧೮ ||

ಅನುಭವಪರ್ಯಾಯದೊಳೊ ।
ರ್ವನೆ ಭವಪರ್ಯಾಯಗತಿನಿಕಾಯಂಗಳೊಳೊ ॥
ರ್ವನೆ ಗುಣಪರ್ಯಾಯದೊಳೊ ।
ರ್ವನೆ ಭಾವಿಸುವಾಗಳೆಂದುಮೊರ್ವನೆ ಜೀವಂ ॥ ೨೯ ॥

ಎನಗಾನೆ ನೆಱವು ವಸ್ತುಗ
ಳನೇಕಮೆನ್ನೊಡನೆ ನಿಂದುಮೇನವು ಪೇಳ್ದ ॥
ರ್ಶನಸುಖವೀರ್ಯಜ್ಞಾನಾ ।
ತ್ಮನೆ ನಾನೆಂಬಿದುವೆ ತಾನೆ ನೆಗಳ್ದನ್ಯತ್ವಂ ॥ ೩೦ ॥

ನಾನಾವಿಧ ದುರ್ಗಂಧ ।
ಸ್ಥಾನಂ ಸಪ್ತವಿಧಧಾತುಗೆಂದುಂ ಜನ್ಮ ॥
ಸ್ಥಾನಂ ಕೃತಾಂತಗೇಹಮಿ ।
ದೇನಶುಚಿಯೊ ಮಾಯ್ದ ದೇಹಮಾರಯ್ಯಾಗಳ್ ॥ ೩೧ ॥

ಪ್ರಕಟೇತರದ್ರವ್ಯಕ್ಷೇ ।
ತ್ರಕಾಲಭವಭಾವ ಭೇದದಿಂದೆ ವಿಚಿತ್ರಾ ॥
ತ್ಮಕಮೆನೆ ಸಂದೀ ಪಂಚ ।
ಪ್ರಕಾರ ಸಂಸಾರಮೇನಸಾರಮೊ ನೆನೆಯಲ್ ॥ ೩೨ ॥

ಅವಯುವದಿನಧೋಮಧ್ಯೋ ।
ರ್ಧ್ವ ವಿಭೇದವಿಭಿನ್ನಮಾಗಿ ಸಹಜಸ್ಥಿತಿಯಿಂ ॥
ಪವನತ್ರಯಸಂವೇಷ್ಟಿತ ।
ಭುವನತ್ರಯಮಿರ್ದ ಮಾರ್ಗಮೇನತಿಶಯಮೋ ॥ ೩೩ ॥

ಅಭಿಯೋಗಕರ್ಮಮಾಸ್ರವ ।
ವಿಭೇದಮದು ಪುಣ್ಯಪಾಪಕೃತದಿಂದೆ ಶುಭಾ ॥

ಶುಭಕರ್ಮಾಸ್ರವಮೆಂಬೆರ |
ಡು ಭೇದಮದುವೆ ಪಂಚಭೇದಮುಮಕ್ಕುಂ ‖ ೩೪ ‖

ನಿರವದ್ಯಮಹಾವ್ರತದಿಂ |
ವರಸಮಿತಿಗಳಿಂ ತ್ರಿಗುಪ್ತಿಯಿಂದಾಸ್ರವಮಂ ‖
ಬರಲೀಯದಿರ್ಪುದಾಸ್ರವ |
ನಿರೋಧಮದು ಭಾವಿಪಂದು ಸಂವರೆಯಕ್ಕುಂ ‖ ೩೫ ‖

ಕರಮರಿದೆನಿಸುವ ತಪದಿಂ |
ಪರಮಧ್ಯಾನೋಪಯೋಗ ಗುಣಪರಿಣತಿಯಿಂ ‖
ದುರಿತಾರಾತಿಗಳಂ ನಿ |
ರ್ಜರಿಸುವ ತಾತ್ಪರ್ಯಮದುವೆ ನಿರ್ಜರೆಯೆನಿಕುಂ ‖ ೩೬ ‖

ಅಭಿವಿನುತ ಧರ್ಮರತಿಯುಂ |
ಸ್ವಭಾವವೈರಾಗ್ಯಭಾವಮುಂ ಸರ್ವಭವಾ ‖
ನುಭವವಿರಕ್ತತೆಯುಂ ದು |
ರ್ಲಭಮದು ಭವ್ಯಪ್ರಬೋಧಬೋಧಿಯೆನಿಕ್ಕುಂ ‖ ೩೭ ‖

ಅಕ್ಷೂಣಗುಣಮಹಿಂಸಾ |
ಲಕ್ಷಣಮಕ್ಷಯಮನಂತಮನುಪಮಮಮಲಂ ‖
ಮೋಕ್ಷಸುಖಹೇತುಭೂತಂ |
ಸಾಕ್ಷಾತ್ಸದ್ಧರ್ಮಮಾರ್ಮಮಕ್ಕೆಮಗೆಂದುಂ ‖ ೩೮ ‖

ಎಂದಿಂತು ದ್ವಾದಶಾನುಪ್ರೇಕ್ಷಾಸ್ಮರಣಪರಿಣತಾಂತಃಕರಣನನುಸ್ಮರಣಂ ಗೆಯ್ಯುತ್ತುಮಕ್ಷುಭಿತಮಹಾವಾರಿನಿಧಿಯಿರ್ಪಂತಿರ್ದಾ ಮಹಾತಪೋನಿಧಿಗೆ

ತರದಿಂ ಮೂಱುದಿನಂಬರಂ ಭರದಿನೋರಂತಲ್ಲಿಯುಂ ಮಾಣದಾ
ನರಿಗಳ್ ಸೀೞ್ದು ಸಿಱುಂಬಳಾಡಿ ತಿನೆ ಮತ್ತಾ ಧೈರ್ಯಮಾ ಶೌರ್ಯಮಾ |

ಇರವಾ ಯೋಗನಿಯೋಗಮಾ ಪರಮಧರ್ಮಧ್ಯಾನಮಾ ಜ್ಞಾನಮಾ ।
ವರಲೇಶ್ಯಾಗುಣಮಾ ಮಹಾಗುಣಗಣಂಗಳ್ಕಂ ಪೆಱಂಗಳ್ಕಮೇ ॥ ೩೯ ॥

ಭುಗುಭುಗನುರ್ಚ್ಚಿ ಪಾಯ್ದು ಸಲೆ ದೇಹರಸಂ ಬಿಡುತೋಡಿತೆಲ್ಲಿಯುಂ ।
ಮೊಗರಸಮೋಡಿತಿಲ್ಲ ದಿನಪಾಂಶುಗ [ಳ] ಟ್ಟಿ ಶರೀರಯಷ್ಟಿತೊ
ಟ್ಟಗೆ ಕಡುಗಂದಿ ಕುಂದೆ ಬಡವಾದುದು ಯೋಗನಿಯೋಗಭಾವದೊಳ್
ಬಗೆ ಬಡವಾದುದಿಲ್ಲ ನೆಗಱ್ದಾ ಸುಕುಮಾರಮಹಾಮುನೀಂದ್ರನಾ ॥ ೪೦ ॥

ಒಂದಿದ ಧೈರ್ಯವೊಂದಿದಳವೊಂದಿದ ನಿರ್ಮಳಧರ್ಮಭಾವಮೊ ।
ಳ್ಪೊಂದಿದ ವೀರ್ಯವೊಂದಿದಜಿತಂ ನೆಱೆ ತನ್ನೊಡವೊಂದಿ ನಿಲ್ಪುದುಂ
ಮಂದರಶೈಲದಂತೆ ಸಲೆ ನಿಶ್ಚಲಯೋಗನಿಯೋಗದಿಂದೆ ನಿ
ಷ್ಪಂದಶರೀರನಾಗಿ ಮುನಿ ಸೈರಿಸಿದಂ ತಿರಿಕೋಪಸರ್ಗಮಂ ॥ ೪೧ ॥

ವ॥ ಇಂತಾ ಮಹಾನುಭಾವನಾ ಮಹೋಪಸರ್ಗಮನಶ್ರಮದಿಂ ಸೈರಿಸಿ ಸಮ್ಯಗ್ದರ್ಶನಜ್ಞಾನಚಾರಿತ್ರ ತಪಸಾಂ ಸ್ವೀಕರಣಮಾರಾಧನಾನಾಮಮೆಂಬ ಚತುರ್ವಿಧಾರಾಧನೆಗಳನಾರಾಧಿಸಿ ಪಂಡಿತ ಮುನಿಜನಸ್ತುತ ಚಾರುಚರಣಂ ಪಂಡಿತ ಮರಣದೊಳ್ ವೀರಪ್ರಾಯೋಪಗಮನ ಸಂನ್ಯಸನಸಮಾಧಿಯಿಂ ಧರ್ಮಧ್ಯಾನಸಾಮಗ್ರಿಯೊಳ್ ಮುನ್ನಮೆ ನೆಱೆದು ಪರಮಪದಮನೆ ಮನದೊಳ್ ನಿಱಿಸಿ ಪರಮಸಮ್ಯಕ್ತ್ವಾನಂತವೀರ್ಯಜ್ಞಾನದರ್ಶನ ಸೂಕ್ಷ್ಮತ್ವಾಗುರುಲಘುತ್ವಾವಗಾಹತ್ವಾವ್ಯಾಬಾಧಂಗಳೆಂಬ ಸಿದ್ಧಪರಮೇಷ್ಠಿಗಳಷ್ಟಗುಣಂಗಳಂ ನೆನೆಯುತ್ತುಂ ಜ್ಞಾನಾದಿ ಶುಭಪರಿಣಾಮಂಗಳೊಳ್ ನಿರತಿಶಯಶುಕ್ಲಲೇಶ್ಯಾವಿಶುದ್ಧಿಯಿಂ ಮೋಹನೀಯಕರ್ಮೋಪಶಮದಿಂ ವಿಶುದ್ಧ್ಯತಿಶಯವಿಶೇಷದಿಂದುಪಶಮಶ್ರೇಣಿಯನೇಱಿ ಸಾಮಾಯಿಕಶುದ್ಧಿಸಂಯಮಸಂಪನ್ನನಾಗಿ ಮತ್ತಂ ತಿಱಿತಿಱಿದು ಬೇಗದೊಳಂತರ್ಮುಹೂರ್ತದಿಂ ಪೂರ್ವಾಪರವಿಷಯವಿವಿಕ್ತಾರ್ಥವ್ಯಂಜನಯೋಗಸಂಕ್ರಮಣಗುಣಲಕ್ಷಣೈಕಲಕ್ಷಿತಮಪ್ಪ ಪೃಥಕ್ತ್ವ

ವಿತರ್ಕವೀಚಾರಾಭಿದಾನಪ್ರಥಮಶುಕ್ಲಧ್ಯಾನಾಧೀನಮಾನಸಂ ಸಮಾಹಿತ ಸಮುಪಶಾಂತಗುಣಸ್ಥಾನಸಂಸ್ಥಿತನಾಗಿರ್ಪುದುಮಾ ಸಮಯದೊಳ್ ನಿಜಾಯುಷ್ಯಾಂತಮೆಯ್ದುವಪ್ಪುದುಂ

ಪೆಱಗಣಭವಂಗಳೊಳ್ ಮೆ
ಯ್ಯಱಿಯದೆ ಮೆಯ್ಯಿಂದೆ ಕೇಡನೆಯ್ದಿದೆನೆಂಬೀ ||
ಯಱಿವಿಂ ಮೆಯ್ಯ ಮಮತ್ವಂ ।
ಪಱಿಪಡೆ ಪಱಿಪಟ್ಟು ಪೋದುದಸು ಮೆಯ್ಯಿಂದಂ || ೪೨ ||

ವ|| ಅಂತು ಪರಿತ್ಯಕ್ತದೇಹನಾಗಿ ಜಂಬೂದ್ವೀಪೋಪಮಾನಪರಿಮಾಣ ವಿಸ್ತಾರಮಾಗಿರ್ದ ಸರ್ವಾರ್ಥಸಿದ್ಧಿಯೊಳನೇಕ ರತ್ನಮರೀಚೀಮಾಳಾಳಂಕೃತ ಪ್ರಸರವಿರಚಿತ ಸುರಶರಾಸನೋಪಮಾನ ನಾನಾನೂನ ಕಲ್ಪವಲ್ಲೀ ವೇಲ್ಲಿತ ನಮೇರುಮಂದಾರ ಪಾರಿಜಾತ ಸಂತಾನಕ ಹರಿಚಂದನ ವನಪರಿವೃತ ಪರಿಣಚಿತ ವಿಶಾಳಹರಿನೀಳರುಚಿ ರುಚಿರವಿರಚಿತ ನೀಳಾಭ್ರವಿಭ್ರಮಕುಟ್ಟಿಮದೊಳಮಳ ಹರಿನ್ಮಣಿಮಯೂಖರೇಖಾ ಜಟಿಳಿತೋದಾತ್ತಚಿತ್ತಭಿತ್ತಿವಿಭ್ರಾಜಿತ ಪದ್ಮರಾಗ ಗವಾಕ್ಷಜಾಳಾಂಶುಜಾಳಮಂಜರೀರಂಜಿತದೊಳತ್ಯಂತಕಾಂತ ಚಂದ್ರಕಾಂತ ಮಣಿಶಿಳಾಕಳಾಪಪ್ರಭಾದೀಪಸಪ್ತಕಕ್ಷಾಂತರಾಳದೊಳವಿರಳಾಲಂಬಮಾನ ಪ್ರವಾಳಚ್ಛಾಯಾಚ್ಛಾದಿತ ಸಕಲದಿಗಂತರಾಳ ಮನೋಹರದೊಳನಲ್ಪರತ್ನ ರಚನಾವಿಚಿತ್ರೋಪಪಾತತಳ್ಪದೊಳಂತರ್ಮುಹೂರ್ತದೊಳ್ ಷಟ್ಪರ್ಯಾಯಂ ಕೈಕೊಂಡು

ಅನವರತಂ ಮೋಕ್ಷದ ನೆರೆ
ಮನೆಯೆನಿಸಿರ್ದಾ ವಿಮಾನದೊಳ್ ನಿಜಶುಭಭಾ
ವನೆಯಿಂ ಸುಕುಮಾರಮಹಾ
ಮುನೀಂದ್ರನಹಮಿಂದ್ರಪದವಿಯಂ ಕೈಕೊಂಡಂ || ೪೩ ||

ಸಹಜಾತಮಣಿವಿಭೂಷಣ
ಬಹುವಿಧನವಕುಸುಮದಾಮ ದಿವ್ಯಾಂಬರ ಸ

